# THE BOOK WAS DRENCHED

# ಅರವಿಂದ ದರ್ಶನ

ಶ್ರೀ. ಅರವಿಂದ ಯೋಗಿಗಳ ‘ ಲಾಯಿಫ ಡಿವ್ಹಾಯಿನ ’ ಗ್ರಂಥದೊಳಗಿನ
೨೦, ೨೧, ೨೨ನೇ ಪ್ರಕರಣಗಳ
ಅನುವಾದಕರು :


ಆರ್ ಕೆ. ಜೋಶಿ, ಬಿ ಎ., ಜಿ. ಡಿ. ಸಿ ಎ.
ಕೋ-ಆಪರೇಟಿವ್ಹ ಡಿಪಾರ್ಟಮೆಂಟ
ಸಾಂಗಲಿ,


ವಿಷಯವನ್ನು ವಿವರಿಸುವ ಉಪೋದ್ಘಾತ ಸಹಿತ.

---

A FREE RENDERING OF CHAPTERS XX, XXI, & XXII
OF SHRI AUROBINDO'S "LIFE DIVINE"


BY SHRI R. K. JOSHI, B.A., G. D. C. A,
Co-operative Department, Sangli,


*with an introduction to the subject matter.*



केवल:


ಶಿವಾನಂದ ಮಂದಿರದ
ಪ್ರಕಟನೆ

ಪ್ರಥಮಾವೃತ್ತಿ

೧೯೫೧

ಪ್ರಕಾಶಕರು :
ದತ್ತಾತ್ರೇಯ ಶಿವಾನಂದ ಬಂಕಾಪೂರ
ಶ್ರೀಶಿವಾನಂದ-ಮಂದಿರ
ತಬೀಬನಗರ
ಹುಬ್ಬಳ್ಳಿ.



ಪುಸ್ತಕಗಳ ಮಾರಾಟಗಾರರು

---

೧. ಸಾಹಿತ್ಯಭಾಂಡಾರ — ಹುಬ್ಬಳ್ಳಿ

೨. ಶ್ರೀಶಿವಾನಂದ ಮಂದಿರ — ತಬೀಬನಗರ, ಹುಬ್ಬಳ್ಳಿ

೩. ಸೇವಾಮಂಟಪ — ಕೋಡೀಬಾಗ, ಕಾರವಾರ



ಮುದ್ರಕರು :
ಎಸ್. ಎಚ್. ದೇಶಪಾಂಡೆ, M.A., B.SC.
ಮ್ಯಾನೇಜರ
ಶ್ರೀಗಣಪತಿ ಸಂಸ್ಥಾನ ಪ್ರೆಸ್
ಸಾಂಗಲಿ.

# ಮೊದಲ ಮಾತು



ಮಹರ್ಷಿ ಅರವಿಂದ ಘೋಷರ "Divine Life" ಎಂಬ ಪುಸ್ತಕದ ಕೆಲವು ಅಧ್ಯಾಯಗಳನ್ನು "ಅರವಿಂದ ದರ್ಶನ" ವೆಂದು ಕನ್ನಡದಲ್ಲಿ ಪ್ರಸಿದ್ಧಿಸುವ ಸುಯೋಗ ಒದಗಿದ್ದಕ್ಕಾಗಿ ಸಂತೋಷವಾಗಿದೆ. ನನ್ನ ವೇದಾಂತ ಗ್ರಂಥಮಾಲೆಗೆ ಇದೊಂದು ಗೊಂಚಲು.

ಇದರಲ್ಲಿ ಪುನರ್ಜನ್ಮ, ಪರಲೋಕ ಮತ್ತು ಕರ್ಮವಿಪಾಕಗಳ ಬಗೆಗೆ ಬುದ್ಧಿವಂತರಾದ ಸುಶಿಕ್ಷಿತರ ಮನಸ್ಸು ಹಿಡಿಯುವ ಹಾಗೆ ವಿವರಣ ಮಾಡಿದ್ದಾರೆ. ನಮ್ಮ ಪ್ರೌಢ ವಿದ್ಯಾರ್ಥಿಗಳಿಗೆ ಇದು ಉಪಯೋಗ ಬೀಳ ಬೇಕೆಂಬ ಸದಿಚ್ಛೆಯಿಂದ ತಕ್ಕಹಾಗೆ ಅನುವಾದ ಮಾಡಿದ್ದಾಗಿದೆ.

ಪುನರ್ಜನ್ಮ, ಪರಲೋಕ ಮತ್ತು ಕರ್ಮವಿಪಾಕಗಳ ವಿಷಯವಾಗಿ ನಮ್ಮ ಪ್ರಾಚೀನರು ಸಾಕಷ್ಟು ಸಂಗತಿಗಳನ್ನು ನಮಗೆ ಒದಗಿಸಿದ್ದಾರೆ. ವೈದಿಕರು ಸದೇಹ ಸ್ವರ್ಗಕ್ಕೇರುವ ಯಜ್ಞವನ್ನು ಮಾಡಿಸಿದರು. ಇಲ್ಲಿ ತಮ್ಮ ಯಜ್ಞಗಳಲ್ಲಿ ಪ್ರತ್ಯಕ್ಷ ದೇವತೆಗಳನ್ನು ಕರೆಯಿಸಿಕೊಳ್ಳುತ್ತಿದ್ದರು. ಅಲ್ಲದೆ ಶ್ರಾದ್ಧಕ್ಕೆ ಪಿತೃಗಳನ್ನೂ ಬರಮಾಡಿಕೊಂಡದ್ದುಂಟು. ದರ್ಶನಕಾರರಾದ ಶ್ರೀ ಶಂಕರ ಭಗವತ್ಪಾದರು "ಚಂದ್ರಲೋಕದಲ್ಲಿ ಪಿತೃಲೋಕವಿದೆ. ನರಕದಲ್ಲಿಯ ಅಳುವ ಧ್ವನಿ ಪಿತೃಲೋಕಕ್ಕೆ ಕೇಳಿಸುತ್ತದೆ" ಮೊದಲಾಗಿ ಕೆಲವು ಸ್ಥಾನಗಳನ್ನೂ ನಿರ್ದೇಶ ಮಾಡಿದ್ದಾರೆ. ಪರಕಾಯ ಪ್ರವೇಶಮಾಡಿ ಜೀವನಿಗೊಂದು ಗತಿ ಇದ್ದುದನ್ನೂ ಸಿದ್ಧಪಡಿಸಿ ತೋರಿಸಿದರು. ಆಗಿನವರಿಗೆ ಆ ಮಾತುಗಳು ನಿಜವಾಗಿದ್ದುವು. ಈಗಿನವರಿಗೆ ಈ ರೀತಿಯ ಮಾತುಗಳು ಒಪ್ಪಿಗೆಯಾಗಬೇಕಾಗಿದೆ.

ಪುನರ್ಜನ್ಮ ಪರಲೋಕಗಳ ವಿಚಾರದಿಂದ ಮನುಷ್ಯನ ಮಟ್ಟ ಮೇಲಕ್ಕೇರುತ್ತಿದೆ ಎನ್ನುವಲ್ಲಿ ಅನುಮಾನ ಬೇಡ. ಮಹರ್ಷಿಗಳು ಈ ವಿಚಾರಗಳನ್ನೊದಗಿಸಿ ಜಗತ್ತಿಗೆ ಮಹದುಪಕಾರ ಮಾಡಿದ್ದಾರೆ.

ಈ ಪುಸ್ತಕದ ಕೈಪ್ರತಿಯನ್ನು ನೋಡಿಸಿಕೊಟ್ಟ ಪಾಂಡೀಚೇರಿಯ ಆಶ್ರಮದವರಿಗೂ, ಓದಿನೋಡಿ ಕೆಲವು ಸೂಚನೆ ಮಾಡಿದ ಪ್ರಾಧ್ಯಾಪಕ ಸ. ಸ. ಮಾಳವಾಡರಿಗೂ ಹಾಗೆಯೇ ಉತ್ಸಾಹಿಸಿ ಅನುಕೂಲರಾಗಿ ಪುಸ್ತಕವನ್ನು ಮುದ್ದಾಗಿ ಮುದ್ರಿಸಿಕೊಟ್ಟ ಸಾಂಗಲಿಯ ಶ್ರೀ ಗಣಪತಿ ಸಂಸ್ಥಾನ ಪ್ರೆಸ್ಸಿನವರಿಗೂ, ಅನುವಾದಕರ ಪರವಾಗಿ ಆಭಾರಿಯಾಗಿದ್ದೇನೆ. ಕೊನೆಗೆ ನನ್ನ ಗುರುಬಂಧುಗಳಾದ ಶ್ರೀ. ರಾ. ಕೃ. ಜೋಶಿಯವರು ತಮ್ಮ ಗ್ರಂಥಪ್ರಕಾಶನದ ಶ್ರೇಯಸ್ಸನ್ನು ನಮ್ಮ ಗ್ರಂಥಮಾಲೆಗೆ ನೀಡಿದ್ದಕ್ಕಾಗಿ ಕೃತಜ್ಞನಾಗಿದ್ದೇನೆ.

ಶ್ರೀಶಿವಾನಂದ-ಮಂದಿರ
ತಬೀಬನಗರ,
ಹುಬ್ಬಳ್ಳಿ.

ತಮ್ಮ

ಯೋಗೀಶ್ವರ ದತ್ತಮೂರ್ತಿ

# ಅನುವಾದಕರ ಮುನ್ನುಡಿ



ಈ ಪುಸ್ತಕದ ಹಸ್ತಲಿಖಿತವನ್ನು ಬರೆದು ಸುಮಾರು ಮೂರು ವರ್ಷಗಳಾದರೂ ಇದನ್ನು ಮುದ್ರಿಸಿ ಪ್ರಕಾಶಿಸುವ ಸುಯೋಗವು ಕೇವಲ ಈಶ್ವರ ಕೃಪೆಯಿಂದಲೇ ಈಗ ಬಂದೊದಗಿದೆ ನಾನು ಗ್ರಂಥ ಬರೆಯಬೇಕೆಂಬ ಉದ್ದೇಶದಿಂದ ಈ ಕೆಲಸಕ್ಕೆ ಕೈಹಾಕಿದವನಲ್ಲ. ಶರೀರದ ಅಸ್ವಸ್ಥತೆಯ ಮೂಲಕ ರಜೆಯ ಮೇಲಿರುವಾಗ ನನ್ನ ಒಬ್ಬ ಮಿತ್ರರು ಶ್ರೀ. ಅರವಿಂದರ "**Life Divine**" ಎಂಬ ಗ್ರಂಥವನ್ನು ಹಾವೇರಿಯ ಸಾರ್ವಜನಿಕ ವಾಚನಾಲಯದಿಂದ ಓದುವದಕ್ಕಾಗಿ ತಂದುಕೊಟ್ಟರು. ಶ್ರೀ. ಅರವಿಂದ ಯೋಗಿಗಳ ಮಾಹಾತ್ಮ್ಯವನ್ನು ಕೆಲಮಟ್ಟಿಗೆ ಅರಿತವನಾಗಿದ್ದರೂ ಅವರ ಗ್ರಂಥವನ್ನು ಓದುವ ಸುಯೋಗವು ಬಂದೊದಗಿದ್ದು ಇದು ಮೊದಲನೆಯದೇ. ಈ ಗ್ರಂಥದ ಕೆಲವು ಭಾಗವನ್ನು ಓದುವದರಿಂದ ಶ್ರೀ ಅರವಿಂದರ ಭಾಷೆಯು ಅತಿ ತೊಡಕಾದದ್ದಿದ್ದರೂ, ಅದು ಅಷ್ಟೇ ಗಂಭೀರವಾದದ್ದೂ, ಆಳವಾದ ತತ್ವಜ್ಞಾನದಿಂದ ತುಂಬಿದ್ದೂ ಇರುವದೆಂಬದನ್ನು ಮನಗಂಡೆ. ಓದಿಓದಿದಂತೆ ಗ್ರಂಥದಲ್ಲಿ ಅಭಿರುಚಿಯು ಬೆಳೆದು ಅದರ ಮೂರೂ ಭಾಗಗಳನ್ನು ಓದಿ ಮುಗಿಸಿದೆ. ಗಂಧದ ಕೊರಡನ್ನು ತಿಕ್ಕಿದಷ್ಟು ಸುಗಂಧವೇ ಹೊರಡುವಂತೆ, ಈ ಗ್ರಂಥವನ್ನು ಪುನಃ ಪುನಃ ಓದಿದಂತೆ ಶ್ರೀ ಅರವಿಂದ ಯೋಗಿಗಳ ತತ್ವಜ್ಞಾನದ ಗಾಂಭೀರ್ಯವು ನನ್ನ ಮನಸ್ಸನ್ನು ಆವರಿಸಿತು. ನನ್ನ ಮನಸ್ಸಿನಲ್ಲಿ ಅಲೆಯುತ್ತಿದ್ದ ಕೆಲವು ತಾತ್ವಿಕ ಪ್ರಶ್ನೆಗಳಿಗೆ ಸಮರ್ಪಕವಾದ ಉತ್ತರವನ್ನು ಈ ಅವರ ಗ್ರಂಥದಲ್ಲಿ ಕಂಡೆ. ಓದಿದ ಪುಸ್ತಕದೊಳಗಿನ ಮಹತ್ವದ ಭಾಗವನು ಬರೆದಿಡುವ ವಾಡಿಕೆಯಂತೆ ಇದರೊಳಗಿನ ಕೆಲವು ಭಾಗಗಳನ್ನು ಉದ್ಧೃತ ಮಾಡಿಕೊಂಡು ಗ್ರಂಥವನ್ನು ತಿರುಗಿ ಕೊಡುವವನಿದ್ದೆ. ಅಷ್ಟರಲ್ಲಿ ಅದರೊಳಗಿನ ಕೆಲವು ಭಾಗವನ್ನು ಕನ್ನಡಿಸಬೇಕೆಂಬ ವಿಚಾರವು ಹೊಳೆಯಿತು, ಈ ಸೂಕ್ಷ್ಮವಾದ ತಾತ್ವಿಕ ವಿಚಾರವು

ಒಮ್ಮೆ ಓದುವದರಿಂದಷ್ಟೇ ಮನಸ್ಸಿನಲ್ಲಿ ಚನ್ನಾಗಿ ನಾಟುವದಿಲ್ಲ. ಅದನ್ನು ಮಾತೃಭಾಷೆಯಲ್ಲಿ ಬರೆದರೆ ಗ್ರಹಿಸಲಿಕ್ಕೆ ಸುಲಭವಾಗುವದೆಂಬ ಕಲ್ಪನೆಯಿಂದ ಕನ್ನಡಿಸುವ ವಿಚಾರವು ದೃಢವಾಯಿತು. ಕೇವಲ ವಿಷಯುವನ್ನು ಚನ್ನಾಗಿ ಅರಿತುಕೊಳ್ಳಬೇಕೆಂಬ ಉದ್ದೇಶದಿಂದಲೇ ಭಾಷಾಂತರದ ಕಾರ್ಯಕ್ಕೆ ಆರಂಭಿಸಿದೆ. ಆದರೆ, ಇಂಥ ಉದ್ಗ್ರಂಥವನ್ನು ಭಾಷಾಂತರಿಸುವದು ಹೇಗೆ? ಶಬ್ದಕ್ಕೆ ಶಬ್ದವನ್ನು ಇಡೋಣದರಿಂದ ಭಾಷಾಂತರವಾಗಲಾರದು. ಶಬ್ದಕ್ಕೆ ಶಬ್ದವನ್ನು ಇಡೋಣವೆಂದರೂ, ಶ್ರೀ ಅರವಿಂದರ ವಾಙ್ಮಯದಲ್ಲಿ ಅನೇಕ ಸ್ವತಂತ್ರವಾಗಿ ಅಚ್ಚುಹಾಕಿದ ಪಾರಿಭಾಷಿಕ ಶಬ್ದಗಳಿವೆ. ಇಂಥವನ್ನು ಯೋಗ್ಯ ಅರ್ಥವಾಗುವಂತೆ ಪ್ರತಿಶಬ್ದಗಳಲ್ಲಿ ಇಡುವದೇ ಶಕ್ಯವಿಲ್ಲ. ಇಂಥ ಬಹುಪ್ರಸಂಗಗಳು ಬಂದೊದಗಿದವು. ಅದರಲ್ಲಿಯೂ, ಸುಮಾರು ಮೂವತ್ತು ವರುಷ ಕನ್ನಡ ಮಾತೆಯಿಂದ ವೃತ್ತಿಗೋಸುಗ ಅಗಲುವ ಪ್ರಸಂಗವು ಬಂದೊದಗಿದ್ದರಿಂದ ಕನ್ನಡ ವಾಙ್ಮಯದ ಪರಿಚಯುವು ಇಲ್ಲದಂತಾಗತ್ತು. ಈ ದೀರ್ಘ ಕಾಲಾಂತರದಲ್ಲಿ ಆದ ಕನ್ನಡ ವಾಙ್ಮಯದ ಪ್ರಗತಿಯಿಂದ, ನೂರಾರು ವರ್ಷಗಳ ವರೆಗೆ ಋಷಿಗಳ ಶಾಪದಿಂದ ಸುಪ್ತಾವಸ್ಥೆಯನ್ನು ಹೊಂದಿ ಒಮ್ಮೆಲೇ ಎಚ್ಚತ್ತ ಜಯಂತನಂತೆ, ದಿಗಿಲಾಗಿದ್ದೆ. ನನ್ನ ಹಳೆತಾದ ಮಾಸಿದ ಭಾಷೆಯು ಈಗಿನ ತರುಣ ಭಾಷೆಯನ್ನು ಹೇಗೆ ಸರಿಗಟ್ಟೀತು! ನಾನು ನನ್ನ ಹಳೆತಾದ ಭಾಷೆಯಿಂದ ಬರೆದರೆ, ಅದು ಪ್ರಿಯ ಕನ್ನಡಿಗರಿಗೆ ಹೇಗೆ ಮುಟ್ಟಾದೀತು! ಎಂಬ ಅನೇಕ ಕಲ್ಪನೆಗಳಿಂದ ಮತಿಯು ಕುಂಠಿತವಾಯಿತು. ಕುಸು ಹೊತ್ತಿನ ಮೇಲೆ ಮತ್ತೆ ಶ್ರೀ. ಅರವಿಂದರ ಗ್ರಂಥದ ಯಶೋದುಂದುಭಿಯು ನನ್ನನ್ನು ಎಚ್ಚರಿಸಿ "ಎಲೇ ಮಾನವನೇ ನೀನು ಗ್ರಂಥಕರ್ತನೆಂಬ ಅಹಂಕಾರದ ಕಲ್ಪನೆಯನ್ನು ಬಿಟ್ಟುಬಿಡು. ಯಶಾಪಯಶದ ಇಚ್ಛೆಯನ್ನು ಇಡದೆ, ನಿನ್ನ ಕರ್ತವ್ಯಕ್ಕೆ ತೊಡಗು. ನೀನು ಮಂದನಾದರೂ ಶ್ರೀ. ಅರವಿ ದ ಯೋಗಿಗಳ ಮಹತ್ತರವಾದ ಜ್ಞಾನ ಜ್ಯೋತಿಯೂ, ಆಶೀರ್ವಾದವೂ ನಿನ್ನ ಬೆನ್ನಹಿಂದಿದೆ. ಆ ಗ್ರಂಥದ ಮಹತ್ವವೇ ನಿನ್ನನ್ನು ಪ್ರಚೋದಿಸಿ ಕೆಲಸಕ್ಕೆ ಹಚ್ಚುತ್ತಲಿದೆ. ಸಂದೇಹ ಪಡಬೇಡ. ಗಾಲಿಗೆ ಕೈಹಾಕು" ಎನ್ನುವಂತೆ ಭಾಸವಾಯಿತು. ಕೆಲಸಕ್ಕೆ ಆರಂಭಿಸಿದೆ. ಶ್ರೀ. ಅರವಿಂದರ ವಿಚಾರಸರಣಿಯು ನೂತನ

ವಾದದ್ದು. ವಿಷಯವೂ ಅತಿ ಗಡಚಾದದ್ದು. ಭಾಷಾಂತರದ ಅರ್ಥವೂ ತಿಳಿಯದಂತಾಯಿತು. ಆದ್ದರಿಂದ ಶಬ್ದಶಃ ಭಾಷಾಂತರವನ್ನು ಬಿಟ್ಟು ಅರ್ಥಾನುವಾದವನ್ನು ಕೈಕೊಳ್ಳಬೇಕಾಯಿತು. ವಾಕ್ಯಗಳನ್ನು ಓದಿ ಅದರಲ್ಲಿಯ ಅರ್ಥವನ್ನು ಕನ್ನಡ ಭಾಷಾಸರಣಿಗೆ ಹೊಂದುವಂತೆ ಭಾಷಾಂತರದ ಅಚ್ಚುಕಟ್ಟಾದ ನಿಯಮಗಳನ್ನು ಬಿಟ್ಟು, ಹೆಚ್ಚು ವ್ಯಾಪಕವಾಗಿ ಸ್ಪಷ್ಟೀಕರಣವನ್ನು ಮಾಡಬೇಕಾಯಿತು ನನ್ನ ಪ್ರಯತ್ನದಲ್ಲಿ ತ.ಸು ಯಶಪ್ರಾಪ್ತಿಯಾಗುವಂತೆ ಕಂಡುಬಂದಿತು. ಹಿಂದಿನ ದುರ್ಬೋಧವಾದ ಸರಣಿಯನ್ನು ಬಿಟ್ಟು, ತಿರುಗಿ ಎಲ್ಲ ಭಾಗಗಳ ಅನುವಾದವನ್ನು ಮಾಡಿ, ಕೆಲವು ಗೆಳೆಯರಿಗೆ ಅದನ್ನು ಓದಿ ತೋರಿಸಿದೆ. ಭಾಷೆಯ ದುರ್ಬೋಧತೆಯು ಕಡಿಮೆಯಾದರೂ, ತತ್ವವಿಚಾರವನ್ನು ಮಾಡಿರದ ನನ್ನ ಕೆಲವು ಮಿತ್ರರಿಗೆ ಅರ್ಥಜ್ಞಾನವಾಗಿ ವಿಷಯದ ಗಾಂಭೀರ್ಯವು ಅವರ ಲಕ್ಷ್ಯದಲ್ಲಿ ಬಂದಂತೆ ಕಂಡುಬರಲಿಲ್ಲ ಅವರು ಮೂಗು ಹೊರಳಿಸಿ ಒಂದು ಚಹಾದ ಗುಟುಕಿನಷ್ಟು ಕೂಡ ಇದರಲ್ಲಿ ಸ್ವಾರಸ್ಯವು ಇರುವದಿಲ್ಲವೆಂದು ಹೇಳಿ ನನ್ನನ್ನು ಉಪಕರಿಸಿದರು. ತಿಳಿಗನ್ನಡದಲ್ಲಿ ಬರೆಯುವದರಿಂದ ಎಲ್ಲರಿಗೂ ತತ್ವಜ್ಞಾನದಲ್ಲಿ ಸಮಾನವಾದ ಆನಂದವನ್ನೂ ಆದರವನ್ನೂ ಉಂಟುಮಾಡಬಹುದೆಂಬ ನನ್ನ ಹೆಮ್ಮೆಗೆ ಒಲವಾದ ಪೆಟ್ಟು ತಗಲಿತು. ಕೆಲವು ಮಿತ್ರರು ಈ ನನ್ನ ಪ್ರಯತ್ನವನ್ನು ಹೀಯಾಳಿಸಿ ಬಗೆಬಗೆಯ ಪ್ರಶ್ನೆಗಳನ್ನು ಕೇಳಿದರು. ಅವೆಲ್ಲವುಗಳ ಉತ್ತರವನ್ನು ಅವರಿಗೆ ಕೊಡುವದು ಸಾಧ್ಯವಾಗಲಿಲ್ಲ. ಆದರೆ, ಅವರ ಸೂಚಕ ಪ್ರಶ್ನೆ ಮತ್ತು ವಿರೋಧಗಳಿಂದ, ಈ ವಿಷಯದ ಮಹತ್ವವನ್ನು ಮಂಡಿಸುವದಕ್ಕಾಗಿ ಒಂದು ಉಪೋದ್ಘಾತವನ್ನು ಬರೆಯುವ ಕಲ್ಪನೆಯು ಮನಸ್ಸಿನಲ್ಲಿ ಅಂಕುರಿಸಿತು ಆ ಪ್ರಕಾರ ಈ ಎಲ್ಲ ಪ್ರಶ್ನೆಗಳಿಗೆ ಯಥಾಮತಿ ಉತ್ತರವನ್ನು ಬರೆದು ಪ್ರಕಟಮಾಡಬೇಕೆಂಬ ಹಂಬಲದಿಂದ, ಎಪ್ಪತ್ತಾರು ಮುದ್ರಿತ ಪಾನುಗಳುಳ್ಳ ವೇದಾಂತ ಮತ್ತು ಮನುಷ್ಯ ಜೀವನ ಇವುಗಳಲ್ಲಿದ್ದ ನಿಕಟವಾದ ಹೊಂದಿಕೆಯನ್ನು ತೋರಿಸುವ ಒಂದು ಅಲ್ಪ ವಿವರಣೆಯನ್ನು ಬರೆದೆ. ನನ್ನ ಮಿತ್ರರಿಗೆ ಅದನ್ನು ಪುನಃ ಓದಿ ತೋರಿಸಿದೆ. ಹಲವರು ವಿಷಯವು ಚನ್ನಾಗಿ ಮಂಡಿಸಲ್ಪಟ್ಟಿದೆ ಅದನ್ನು ಗ್ರಂಥರೂಪದಿಂದ ಪ್ರಕಟಿಸಬೇಕೆಂದು ಪ್ರೋತ್ಸಾಹಿಸಿದರು. ಆದರೆ, ಹಲವರಿಗೆ ಅದರ ಅರ್ಥವಾಗಲಿಲ್ಲ

ಮತ್ತು ಅದು ಅವರಿಗೆ ಆಗುವದೂ ಶಕ್ಯವಿಲ್ಲೆಂದು ಕಂಡುಬಂದಿತು. ಎಲ್ಲ ಪ್ರಕಾರದ ವಾಙ್ಮಯವು ಎಲ್ಲರಿಗೂ ಸಮನಾಗಿ ಯಾಕೆ ತಿಳಿಯಬಾರದೆಂಬ ಬಗ್ಗೆ ಅನೇಕ ಕಾರಣಗಳಿವೆ. ಸೂಕ್ಷ್ಮ ಬುದ್ಧಿಯುಳ್ಳವರಿಗೆ ಮಾತ್ರ ತತ್ವಜ್ಞಾನದ ವಿಷಯವು ತಿಳಿಯುವಂತಿದೆ; ಇತರರಿಗಿಲ್ಲ. ಈ ಸೂಕ್ಷ್ಮ ಬುದ್ಧಿಯನ್ನು ಅತಿಪ್ರಯಾಸದಿಂದ ಸಂಪಾದಿಸಬೇಕಾಗುತ್ತದೆ. ಜನತೆಗೆ ಇಂಥ ಸೂಕ್ಷ್ಮಬುದ್ಧಿಯನ್ನು ಉಂಟುಮಾಡಿ ಜನಹಿತವನ್ನು ಸಾಧಿಸುವ ಹೊಣೆಯು ಸಾಹಿತಿಗಳ ಮೇಲಿರುವದರಿಂದ ಸಾಹಿತ್ಯವು ಹೇಗಿರಬೇಕೆಂಬ ಬಗ್ಗೆ ಇಲ್ಲಿ ಕೊಂಚ ವಿಚಾರವನ್ನು ಮಂಡಿಸಿದರೆ ಅಸ್ಥಾನವಾಗಲಾರದು.

ಕೆಲವು ವಾಙ್ಮಯ ಸೇವಕರು ವಾಙ್ಮಯವನ್ನು ಜನರ ಬುದ್ಧಿಯ ಮಟ್ಟಕ್ಕಿಳಿಸಿ ಅವರಿಗೆ ಸುಗಮವಾಗುವಂತೆ ಬರೆಯಬೇಕೆಂದು ಅನ್ನುವರು. ಗಂಭೀರವಾದ ಅರ್ಥವನ್ನು ಸುಲಭ ಭಾಷೆಯಲ್ಲಿ ಇಡಬೇಕೆಂದು ಇದರ ಅರ್ಥವಿದ್ದರೆ ಅವರ ಅಭಿಪ್ರಾಯವು ಗ್ರಾಹ್ಯವಾಗಬಹುದು. ಆದರೆ ಅಗ್ಗವಾದ ಗ್ರಾಮ್ಯಭಾಷೆಯಲ್ಲಿ ಗ್ರಾಮ್ಯ ಅರ್ಥಗಳ ಸಂಗ್ರಹ ಮಾಡುವದೇ ವಾಙ್ಮಯದ ಉದ್ದೇಶವಿರಬೇಕೆನ್ನುವದಾದರೆ ಇದನ್ನು ಯಾವ ವಿಚಾರವಂತರೂ ಒಪ್ಪಲಾರರು. ಇಂಥ ಗ್ರಂಥಗಳಿಗೆ ವಾಙ್ಮಯವೆನ್ನುವದಾದರೆ ಆ ಶಬ್ದದ ದುರುಪಯೋಗವೇ ಸರಿ. ಸಾಹಿತ್ಯದಲ್ಲಿ ವಾಚಕರ ಬುದ್ಧಿಯನ್ನು ಸೂಕ್ಷ್ಮಮಾಡಿ ಅವರ ವಿಚಾರದ ಮಟ್ಟವನ್ನು ಎತ್ತರಿಸುವ ಸಾಮರ್ಥ್ಯವು ಇರಬೇಕು. ಸಾಹಿತ್ಯವು ಜನತೆಯ ಕಾಮಕ್ರೋಧಾದಿ ವಿಕಾರಗಳನ್ನು ಉದ್ರೇಕಿಸಿ ಅವರ ಕ್ಷಣಿಕ ರಂಜನೆಗೆ ಕಾರಣವಾಗಿರಬಾರದು. ಸಾಹಿತ್ಯವು ಜನತೆಯ ಸಾಮಾಜಿಕ ಹಿತವನ್ನು ದುರ್ಲಕ್ಷಿಸಲಾರದು. ಮನುಷ್ಯನ ಮನೋವಿಕಾರಗಳನ್ನು ಉದ್ರೇಕಿಸುವ ವಾಙ್ಮಯದಿಂದ ಸಮಾಜದ ತಳಹದಿಯು ಎಂದಿಗೂ ಭದ್ರವಾಗಿರಲಾರದು. ವಾಚಕರ ವಿಚಾರಕ್ಕೆ ಯೋಗ್ಯವಾದ ಮಾರ್ಗವನ್ನು ತೋರಿಸಿ ಅವರ ವ್ಯವಹಾರದಲ್ಲಿ ನೀತಿಯೂ ಬುದ್ಧಿಯಲ್ಲಿ ಸ್ಥೈರ್ಯವೂ, ಮನಸ್ಸಿನಲ್ಲಿ ಸುಖ, ಶಾಂತಿ ಸಮಾಧಾನಗಳೂ ನೆಲೆಯುವಂತೆ ಮಾಡುವ ಸಾಹಿತ್ಯವೇ ನಿಜವಾದ ಸಾಹಿತ್ಯವು. ಈ ದೃಷ್ಟಿಯಿಂದ ನೋಡಲಾಗಿ ವಾಙ್ಮಯದಲ್ಲಿ ಜನತೆಗೆ ಸರ್ವಸಾಮಾನ್ಯತಃ ತಿಳಿದ ಸ್ಥೂಲ ವ್ಯಾವಹಾರಿಕ ವಿಷಯಗಳಿಂದ ತಿಳಿಯದ ಸೂಕ್ಷ್ಮ ವಿಷಯ

ಗೆ ಕಡೆಗೆ ಆಕರ್ಷಣ ಮಾಡುವ ಕೌಶಲ್ಯವು ಇರಬೇಕೆಂದು ಸ್ಪಷ್ಟವಾಗುತ್ತದೆ. ವಾಙ್ಮಯ ನಿರ್ಮಿತಿಯ ಕಾರ್ಯದಲ್ಲಿ ಯೋಗವು ಬೇಕು. ಯೋಗವೆಂದರೆ ಕೆಲಸ ಮಾಡುವಲ್ಲಿ ಕೌಶಲ್ಯ ಅಥವಾ ಕೌಶಲ್ಯದ ಕೆಲಸವೆಂಬೆನ್ನಬಹುದು. “ಯೋಗಃಕರ್ಮಸು ಕೌಶಲಮ್” ಎಂದು ಗೀತಾವಚನವಿದೆ.

ಗದ್ಯ ಪದ್ಯಾತ್ಮಕ ರೂಪವನ್ನು ಧಾರಣಮಾಡಿದ ಈ ಬ್ರಾಹ್ಮೀದೇವತೆಯ ಸಂತತಿಯು ಈಗ ಬಹಳವಾಗಿದೆ. ಕಾವ್ಯ, ನಾಟಕ, ಪ್ರಬಂಧ, ಕಾದಂಬರಿ, ವೃತ್ತಪತ್ರಗಳು, ಲೇಖಗಳು, ಚಲಚ್ಚಿತ್ರದ ಕಥಾನಕಗಳು ಮುಂತಾದ ಅನೇಕ ಪ್ರಕಾರದ ಬರಹಗಳು ಕಂಡುಬರುತ್ತವೆ. ಅವುಗಳಲ್ಲಿ ಜನತೆಯನ್ನು ಮೇಲಕ್ಕೆತ್ತುವ ಮತ್ತು ಜನರ ಸುಖಸಮಾಧಾನಗಳನ್ನು ಬೆಳೆಸುವ ಯೋಗ್ಯತೆಯು ಇಲ್ಲದಿದ್ದರೆ ಇಂಥ ಬರಹಕ್ಕೆ ಸಾಹಿತ್ಯವೆಂಬ ಹೆಸರು ಬರಲಾರದು. ಈ ವಾಗ್ದೇವತೆಯ ಪಾವಿತ್ರ್ಯವನ್ನು ಕಾಯ್ದುಕೊಳ್ಳುವ ಹೊಣೆಯು ಸಾಹಿತಿಗಳ ಮೇಲಿದೆ. ಈಗಿನ ಕೆಲವು ಬರಹಗಳಿಂದ—ಚಲಚ್ಚಿತ್ರದ ಕಥಾನಕ, ಕಾದಂಬರಿ, ನಾಟಕ ಮುಂತಾದವುಗಳಿಂದ—ಜನರ ಪ್ರವೃತ್ತಿಯು ಅನೀತಿಯ ಕಡೆಗೆ ಮತ್ತು ಸಾಮಾಜಿಕ ಅಪರಾಧಗಳ ಕಡೆಗೆ ಬೆಳೆಯುತ್ತ ನಡೆದಿರುವದೆಂದು ನಮ್ಮ ದೇಶದಲ್ಲಿಯೂ ಮತ್ತು ಪರದೇಶಗಳಲ್ಲಿಯೂ ತಜ್ಞರ ಮತವಾಗಿರುತ್ತದೆ. ಸರಕಾರದ ಅಪರಾಧ ಸಂಶೋಧನೆ ಮಾಡುವ ಖಾತೆಯ ರಿಪೋರ್ಟುಗಳ ಮೇಲಿಂದಲೂ ಈ ಮಾತು ಸಿದ್ಧವಾಗುತ್ತದೆ. ಇಂಥ ಬರಹಗಳನ್ನು ಬರೆದು ಜನತೆಯ ಮನಸ್ಸನ್ನು ಆಕರ್ಷಿಸುವದು ಸುಲಭವಾಗಿದೆ. ಯಾಕಂದರೆ ಜನರ ಮನೋವೃತ್ತಿಯು ನಿಸರ್ಗತಃ ಕೆಳಗೆ—ನೀಚತನದ ಕಡೆಗೆ ಸುಲಭವಾಗಿ ಹರಿಯುತ್ತದೆ. ಆದರೆ ಅದನ್ನು ಮೇಲಕ್ಕೆತ್ತುವ, ಅಥವಾ ಅದಕ್ಕೆ ಊರ್ಧ್ವಗತಿಯನ್ನುಂಟುಮಾಡಿ, ಉನ್ನತವಾದ ಆಧ್ಯಾತ್ಮಿಕ ಜೀವನದಲ್ಲಿ ವಿಹಾರಮಾಡುವಂತೆ ತಾತ್ವಿಕ ವಿಚಾರಗಳ ಕಡೆಗೆ ಈ ಮನೋವೃತ್ತಿಯನ್ನು ಎಳೆದುಕೊಳ್ಳುವ ವಾಙ್ಮಯ ನಿರ್ಮಾಣಮಾಡುವದು ಬಹು ದುಸ್ತರವಾದ ಕೆಲಸ. ಹಾಗೂ ಇಂಥ ಬರಹಗಳ ಮರ್ಮವನ್ನು ತಿಳಿದುಕೊಳ್ಳುವ ವಾಚಕರೂ ದುರ್ಲಭ. ಆದರೂ ಸಾಹಿತಿಗಳು ಸುಲಭವಾದ ಕ್ಷಣಿಕ ಮನೋರಂಜನದ ಲೇಖಗಳಿಂದ ಪ್ರಖ್ಯಾತಿಯನ್ನು ಪಡೆಯುವ ಹವ್ಯಾಸಪಡುವದು ತರವಲ್ಲ. ಯಾಕಂದರೆ,

ಜನತೆಯನ್ನು ಅಧೋಗತಿಗೆ ಒಯ್ದ ಪಾಪವು ಅವರ ಪಾಲಿಗೆ ಬರುತ್ತದೆ. ಆದರೆ ಇವರ ಬದಲು ಸತ್ಸಾಹಿತ್ಯವನ್ನುಂಟುಮಾಡುವ ಸಾಹಿತಿಗಳೂ ಮತ್ತು ಇಂಥ ಸಾಹಿತ್ಯದ ರಸವನ್ನು ಸೇವಿಸುವ ಸತ್ಪ್ರವೃತ್ತಿಯ ವಾಚಕರೂ ಕೂಡಿ ಒಂದು ಜ್ಞಾನಯಜ್ಞದ ಸತ್ರವನ್ನೇ ಆರಂಭಿಸುವರು. ದ್ರವ್ಯಮಯ ಯಜ್ಞಗಳಿಗಿಂತ ಜ್ಞಾನಮಯ ಯಜ್ಞವು ಹೆಚ್ಚು ಶ್ರೇಯಸ್ಕರವಾದದ್ದೆಂದು ಭಗವಂತನು ಗೀತೆಯಲ್ಲಿ ಉಪದೇಶಿಸಿರುವನು. ಈ ಪ್ರಕಾರದ ಜ್ಞಾನಮಯ ಯಜ್ಞದಿಂದ ಸಾಹಿತಿಗಳಿಗೆ ಧನಲಾಭವೂ, ವಾಚಕರಿಗೆ ಕ್ಷಣಿಕ ಮನೋರಂಜನೆಯೂ ಆದದ್ದು ಕಂಡುಬಂದಾಗ್ಯೂ, ಇಂಥ ಕೃತ್ಯಗಳಲ್ಲಿ ಜನತೆಯನ್ನು ಮೇಲಕ್ಕೆತ್ತುವ ಪ್ರಯತ್ನ, ಸಾಹಸ, ವೈಯಕ್ತಿಕ ಮತ್ತು ಸಾಮಾಜಿಕ ಸುಖ ಸಮಾಧಾನಗಳು ತಲೆದೋರುತ್ತವೆ. ಹೇಗೆ ಸಾಹಿತಿಗಳಿಗೆ ಇಂಥ ಸಾಹಿತ್ಯವನ್ನು ನಿರ್ಮಾಣ ಮಾಡುವಲ್ಲಿ ಕಷ್ಟತರವಾದ ಶಾಸ್ತ್ರಾಭ್ಯಾಸ, ತಪಶ್ಚರ್ಯೆ ಮತ್ತು ನಿಸರ್ಗದ ಸೂಕ್ಷ್ಮ ಕಾರ್ಯಗಳನ್ನು ಅರಿಯುವ ಸೂಕ್ಷ್ಮಬುದ್ಧಿ ಇವು ಅವಶ್ಯವಿರುವವೋ, ಹಾಗೆಯೇ ವಾಚಕರಲ್ಲಿ ಕೂಡ ಸೂಕ್ಷ್ಮ ವಿಚಾರಮಾಡುವ ಸಾಮರ್ಥ್ಯವು ಇರಬೇಕಾಗುತ್ತದೆ. ಈ ಸಾಮರ್ಥ್ಯವು ಉಂಟಾಗಬೇಕಾದರೆ, ಅದಕ್ಕೆ ಪ್ರಯತ್ನವು ಬೇಕು. ಇಂಥ ಸಾಹಿತ್ಯವು ಅಜ್ಞಜನತೆಯ ಮಟ್ಟಕ್ಕೆ ಎಷ್ಟೇ ಇಳಿದರೂ ಅದರ ಮರ್ಮವನ್ನು ಅರಿಯಲಿಕ್ಕೂ, ಅದನ್ನು ಓದುವ ರುಚಿಯು ಉಂಟಾಗಲಿಕ್ಕೂ, ಸೂಕ್ಷ್ಮ ತತ್ವಜ್ಞಾನದ ಬಗ್ಗೆ ಆದರ ಮತ್ತು ಪ್ರೀತಿಯು ಬೆಳೆಯಲಿಕ್ಕೂ ಪ್ರಯತ್ನವು ಬೇಕು. ತತ್ವಜ್ಞಾನದ ಗ್ರಂಥಗಳನ್ನು ಓದುವಲ್ಲಿ ಒಮ್ಮೆ ಅಭಿರುಚಿಯುಂಟಾಯಿತೆಂದರೆ, ಅದರ ಆನಂದವು ಅಸಮಾನವಾದದ್ದು. ಈ ಜಗತ್ತಿನ ದೃಷ್ಟಿಕೋನವನ್ನೇ ಅದು ಬದಲಿಸಿ ಬಿಡುತ್ತದೆ. ಮನುಷ್ಯನ ಆಚಾರ ವಿಚಾರಗಳು ಸುಧಾರಿಸಹತ್ತುತ್ತವೆ. ಆದರೆ ಈ ಪರಿಣಾಮವು ಕ್ಷಣಿಕ ಮನೋರಂಜನೆಯ ಕಡೆಗೇ ಹರಿಯುತ್ತಿರುವ ಮನೋವೃತ್ತಿಗಳ ಮೇಲೆ ಆಗಲಾರದು.

ಇವೆಲ್ಲ ಕಾರಣಗಳಿಂದ, ಅಂದರೆ, ಈ ಗ್ರಂಥದಲ್ಲಿಯ ಭಾಷೆಯನ್ನು ವಿಷಯದ ಗಾಂಭೀರ್ಯವು ನಷ್ಟವಾಗದಷ್ಟರ ಮಟ್ಟಿಗೇ ಸುಲಭಮಾಡು

ವದು ಶಕ್ಯವಿರುವದರಿಂದಲೂ, ಈ ಗ್ರಂಥದ ಅಧ್ಯಯನವು ವಾಚಕರ ಪ್ರಯತ್ನವನ್ನು ಬಯಸುತ್ತಿರುವದರಿಂದಲೂ, ಅಧ್ಯಯನದ ಫಲದ ದೃಷ್ಟಿಯಿಂದ ನೋಡಲಾಗಿ ಯಾವ ಮಹತ್ವದ ಉದ್ದೇಶವೂ ಸುಲಭವಾಗಿ ಸಾಧಿಸಲಾರದೆಂಬ ಕಾರಣದಿಂದಲೂ ವಿಷಯವು ಆರಂಭಕ್ಕೆ ತುಸು ಕಠಿಣವೆನಿಸಬಹುದು ನಹಿ सुप्तस्य सिंहस्य प्रविशति मुखे मृगाः ಎಂಬ ನ್ಯಾಯದಂತೆ, ಸಿಂಹವು ಅರಣ್ಯದ ದೊರೆಯಾದಾಗ್ಯೂ, ಅದು ಬರೇ ಬಾಯಿ ತೆರೆದು ಮಲಗೋಣದರಿಂದ ಅದರ ಬಾಯಿಯಲ್ಲಿ ತಾವಾಗಿಯೇ ಮೃಗಗಳು ಹೋಗಿ ಬೀಳಲಾರವು. ಅದಕ್ಕೂ ತನ್ನ ಹಸಿವೆಯನ್ನು ತೃಪ್ತಿಗೊಳಿಸುವದಕ್ಕೋಸ್ಕರ, ಪಶುವಿನ ಬೆನ್ನಟ್ಟಿಹೋಗಿ ಬೇಟೆಯನ್ನು ಪ್ರಯತ್ನದಿಂದಲೇ ಸಂಪಾದಿಸಬೇಕಾಗುತ್ತದೆ. ಅದೇ ಪ್ರಕಾರ, ನಮ್ಮ ಪ್ರಿಯ ಕನ್ನಡಿಗರು ಬುದ್ಧಿಶಾಲಿಗಳಾದಾಗ್ಯೂ ತತ್ವಜ್ಞಾನದ ಹಸಿವನ್ನು ತೃಪ್ತಿಗೊಳಿಸಿಕೊಳ್ಳುವದಕ್ಕೋಸ್ಕರ. ಅವರಿಗೂ ಪ್ರಯತ್ನ ಮಾಡಲಿಕ್ಕೇ ಬೇಕು.

ಈ ಗ್ರಂಥದ ಪರೀಕ್ಷಣವನ್ನು ಸಂತರಾದ ಕನ್ನಡಿಗರೇ ಮಾಡಬಲ್ಲರೆಂದು ಅವರಿಗೇ ಈ ಬಗ್ಗೆ ಕವಿ ಕಾಲಿದಾಸನ ವಚನದಿಂದಲೇ ಪ್ರಾರ್ಥಿಸುತ್ತೇನೆ

> तं संतः श्रोतुमर्हन्ति सदसद्व्यक्ति हेतवः ॥
>
> हेम्नः संलक्ष्यते ह्यग्नौ विशुद्धिः श्यामिकापि वा ॥ ಎಂದು

ಈ ಕೃತಿಯಲ್ಲಿ ತಪ್ಪುತಡೆಗಳೂ, ಕುಂದುಕೊರತೆಗಳೂ ಹಲವಾರು ಉಳಿದದ್ದನ್ನು ಬಲ್ಲೆನು. ಸ್ಖಲನಶೀಲತೆಯು ಮನುಷ್ಯ ಸ್ವಭಾವ. ಗ್ರಂಥ ಬರೆಯುವದು ಈ ಲೇಖಕನ ಉದ್ಯೋಗವಲ್ಲ. ಶರೀರ ಪ್ರಕೃತಿಯು ಅಸ್ವಸ್ಥತೆಗಾಗಿ ತೆಗೆದುಕೊಂಡ ವಿಶ್ರಾಂತಿಯ ವೇಳೆಯಲ್ಲಿ ಒಂದು ಪ್ರೀತಿಯ ವಿಷಯವೆಂದು ಇದನ್ನು ಬರೆದದ್ದಾಗಿದೆ ವಿದ್ವತ್ತೆಯನ್ನು ತೋರಿಸುವ ಹೆಮ್ಮೆಯಂತೂ ಇಲ್ಲೇ ಇಲ್ಲ. ಕನ್ನಡ ದೇವಿಯ ಪ್ರೀತಿಗೆ ಪಾತ್ರರಾದ ಅಸಂಖ್ಯ ವರಕವಿಗಳಿದ್ದು ಅವರೆದುರಿಗೆ ಈ ನರಕವಿಯ ವಿದ್ವೆಯನ್ನು ತೋರಿಸುವ ಫಲವೇನು! ಈಗಿನ ಭಾರತೀಯ ಜನತೆಯ ದುಃಸ್ಥಿತಿಗೆ ಪಾಶ್ಚಾತ್ಯರ ಶಿಕ್ಷಣ ಮತ್ತು ಭೌತಿಕ ವಿಚಾರಸರಣಿ, ಇವೇ ಕಾರಣವಿದ್ದು

ಈ ಸ್ಥಿತಿಯನ್ನು ಸುಧಾರಿಸಲಿಕ್ಕೆ ಆತ್ಮಜ್ಞಾನ ಪ್ರವಣತೆಯೊಂದೇ ಉಪಾಯವಿರುವದೆಂದು ನನ್ನ ಅಲ್ಪಮತಿಗೆ ಕಂಡುಬಂದದ್ದರಿಂದ ಈ ವಿಷಯವನ್ನು ಜನತಾ ಜನಾರ್ದನನೆದುರಿಗೆ ಇಡುವ ಪ್ರಯತ್ನವನ್ನು ಮಾಡಿದ್ದೇನೇ ಹೊರತು. ಬೇರೆ ಯಾವ ಉದ್ದೇಶವೂ ಇರುವದಿಲ್ಲ.

ಗ್ರಂಥ ಪ್ರಕಾಶನಕ್ಕೆ ಮನ್ನಣೆಯನ್ನು ಹೊಂದುವದಕ್ಕೋಸ್ಕರ ಶ್ರೀ ಅರವಿಂದಾಶ್ರಮಕ್ಕೆ ಹಸ್ತಲಿಖಿತವನ್ನು ಕಳಿಸಿದೆ. ಕೂಡಲೇ, ಆಶ್ರಮದ ಸಂಚಾಲಕರು ಮಾತಾಜಿಯವರ ಅಪ್ಪಣೆಯ ಮೇರೆಗೆ ಕೆಳಗಿನಂತೆ ತಿಳಿಸಿದರು :—

**"You have the permission of the Mother to publish your "Arwinda Darshana". It is well done... ......... The book is the first of its kind in Kannad and we wish you all success".**

"ನಿಮ್ಮ ಅರವಿಂದ ದರ್ಶನ" ವೆಂಬ ಪುಸ್ತಕವನ್ನು ಪ್ರಕಟಿಸಲಿಕ್ಕೆ ಶ್ರೀ. ಮಾತಾಜಿಯವರ ಸಮ್ಮತಿಯಿದೆ. ಅದು ಚನ್ನಾಗಿ ಬರೆದಿದೆ. ಕನ್ನಡದಲ್ಲಿ ಈ ಪ್ರಕಾರದ ಗ್ರಂಥವು ಮೊದಲನೆಯದು; ನಿಮ್ಮ ಪೂರ್ಣ ಯಶಸ್ಸನ್ನು ನಾವು ಕೋರುತ್ತೇವೆ" ಎಂತಾಗ.

ಈ ಪ್ರಕಾರ ಉತ್ತೇಜನವನ್ನಿತ್ತು ಆಶೀರ್ವದಿಸಿದ ಶ್ರೀ ಮಾತಾಜಿಯವರಿಗೆ ಅನೇಕ ನಮ್ರ ಪ್ರಣಾಮಗಳನ್ನು ಸಲ್ಲಿಸುವದು ನನ್ನ ಆದ್ಯ ಕರ್ತವ್ಯವಾಗಿದೆ. ಹಾಗೂ ಆಶ್ರಮದ ಸೆಕ್ರೆಟರಿ, ಶ್ರೀ. ನಲಿನೀಕಾಂತ ಗುಪ್ತ ಇವರು ನನಗೆ ಬೇಕಾದ ಎಲ್ಲ ಸಾಹಿತ್ಯದ ಅನುಕೂಲತೆಯನ್ನು ಮಾಡಿಕೊಟ್ಟು ಈ ಗ್ರಂಥವನ್ನು ಪರೀಕ್ಷಕರಿಗೆ ಕಳಿಸಿ ಅವರ ಅಭಿಪ್ರಾಯವನ್ನು ದೊರಕಿಸಿಕೊಟ್ಟ ಬಗ್ಗೆ ಕೃತಜ್ಞನಾಗಿದ್ದೇನೆ. ಈ ಗ್ರಂಥದ ಕೈಬರಹದ ಪ್ರತಿಯನ್ನು ಸೂಕ್ಷ್ಮವಾಗಿ ಓದಿ ಮಹತ್ವದ ತಿದ್ದುಪಡಿಗಳನ್ನು ಸೂಚಿಸಿದ ಪ್ರೊ ಎಸ್. ಎಸ್. ಮಾಳವಾಡ, ಕರ್ನಾಟಕ ಕಾಲೇಜ ಧಾರವಾಡ ಇವರನ್ನು ಎಷ್ಟು ನುತಿಸಿದರೂ ಅಲ್ಪವೆನಿಸುತ್ತದೆ ಹೆಚ್ಚಿನದಾಗಿ ಈ ಗ್ರಂಥವನ್ನು ಮುದ್ದಾಗಿ ಮುದ್ರಿಸಿ ಮನೋಹರವಾದ ಪುಸ್ತಕ ರೂಪ

ದಿಂದ ಓದುಗರ ಕೈಸೇರುವಂತೆ ಮಾಡಿದ ಸುಹೃದಯರಾದ ಶ್ರೀ ಗಣಪತಿ ಸಂಸ್ಥಾನ ಪ್ರೆಸ್ಸಿನ ಮ್ಯಾನೇಜರ, ಶ್ರೀ. ಎಸ್. ಎನ್. ದೇಶಪಾಂಡೆ, ಎಂ.ಎ, ಬಿ ಎಸ್ ಸಿ. ಇವರಿಗೆ ನನ್ನ ಕೃತಜ್ಞತೆ ಈ ಗ್ರಂಥದ ಪ್ರೆಸ್ ಕಾಪಿಯನ್ನು ತಯಾರಿಸುವ ಬಗ್ಗೆ ಸಹಾಯವನ್ನೀಡಿದ ಹಾವೇರಿ ಹಾಯ ಸ್ಕೂಲಿನ ಶಿಕ್ಷಕರಾದ ಶ್ರೀ ಶಿವರಾವ ಕರ್ಜಗಿ ಮತ್ತು ಕನ್ನಡ ಶಾಲಾ ಮಾಸ್ತರರಾದ ಶ್ರೀ ಕುಲಕರ್ಣಿ ಇವರಿಬ್ಬರಿಗೂ ನಾನು ಉಪಕೃತನಾಗಿದ್ದೇನೆ. ಕೊನೆಗೆ ಈ ಗ್ರಂಥದ ಪ್ರಕಾಶನವನ್ನು ಕೈಕೊಂಡ ವೇದಾಂತ ಗ್ರಂಥಮಾಲೆಯ ಸಂಚಾಲಕರಾದ ನಮ್ಮ ಗುರುಪುತ್ರ ಶ್ರೀ. ಯೋಗೀಶ್ವರ ದತ್ತಮೂರ್ತಿಗಳವರಿಗೆ ಅನೇಕ ಅಭಿವಂದನೆಗಳು.

ಸಾಂಗಲಿ

ತಾ. [illegible]

ರಾ. ಕೃ ಜೋಶಿ

# ಅರ್ಪಣಪತ್ರಿಕೆ

ಯಾವ ಮಹನೀಯರ ಕೃಪಾಪ್ರಸಾದದಿಂದ ಈ ಹೃದಯದಲ್ಲಿ
ಜ್ಞಾನಾಪೇಕ್ಷೆಯು ಅಂಕುರಿಸಿತೋ
ಅಂಥ

ಬ್ರಹ್ಮೀಭೂತ

**ಶ್ರೀ ಸದ್ಗುರು ಶಿವಾನಂದತೀರ್ಥಸ್ವಾಮಿ**

**ಮಹಾರಾಜ, ಬಂಕಾಪುರ**

ಇವರ

ಚರಣಕಮಲಗಳಿಗೆ ಭಕ್ತಿಪುರಃಸರ ಈ ನನ್ನ
ಪ್ರಥಮ ಕೃತಿಯನ್ನು
ಅರ್ಪಿಸುವೆನು.



ಸಮಾಧಿಸ್ಥರಾದ

**ಸ್ವಾಮಿ ಶ್ರೀಶಿವಾನಂದ ತೀರ್ಥರು**

ಸೇವಾಮಂಟಪ— ಕೋಡೀಬಾಗ— ಕಾರವಾಡ

# ವಿಷಯಾನುಕ್ರಮಣಿಕೆ





**If any one rightly understands the law of Karma, no one would be unrighteous, no one would sin and every one would strive to lead the "Life Divine" and attain God-realisation.**

*Shri Swami Shivanand, Rishikesh.*

ಕರ್ಮ ವಿಪಾಕದ ಯಥಾರ್ಥ ಜ್ಞಾನವನ್ನು ಮಾಡಿಕೊಂಡರೆ, ಎಲ್ಲರೂ ಪ್ರಾಮಾಣಿಕರಾಗುವರು; ಯಾರೂ ಪಾಪಕೃತ್ಯವನ್ನು ಮಾಡರು; ಪ್ರತಿಯೊಬ್ಬನು ದಿವ್ಯ ಜೀವನವನ್ನು ಜೀವಿಸುವ ಪ್ರಯತ್ನಮಾಡಿ ಆತ್ಮಸಾಕ್ಷಾತ್ಕಾರವನ್ನು ಪಡೆಯುವನು.

**ಶ್ರೀ. ಸ್ವಾಮೀ ಶಿವಾನಂದ, ಋಷೀಕೇಶ.**

# ಉಪೋದ್ಘಾತ



ಮಹರ್ಷಿ ಅರವಿಂದರವರ "Life Divine" ಎಂಬ ಗ್ರಂಥವನ್ನು ಓದುತ್ತಿರುವಾಗ ಅದರಲ್ಲಿಯ ಮೂರನೇ ಭಾಗದಲ್ಲಿ ಕೆಲವು ಅತ್ಯಂತ ಮಹತ್ವದ ವಿಷಯವು ನಮ್ಮ ಅವಲೋಕನದಲ್ಲಿ ಬಂದಿತು. ಶ್ರೀ ಅರವಿಂದರ ಈ ಗ್ರಂಥವು ಕೇವಲ ತತ್ವಜ್ಞಾನ ಪರವಿದ್ದು, ಆ ವಿಷಯವು ಸರ್ವ-ಸಾಮಾನ್ಯರಿಗೆ ತಿಳಿಯುದಷ್ಟು ಗಹನವಾಗಿದೆ. ಅದರಲ್ಲಿಯೂ ಶ್ರೀ ಅರವಿಂದರ ಆಂಗ್ಲಭಾಷೆಯ ಬರವಣಿಗೆಯು ಬಹು ತೊಡಕಾದದ್ದು. ಅದರಲ್ಲಿಯ ಶಬ್ದಪ್ರಯೋಗ, ವಾಕ್ಯರಚನೆ, ಪ್ರತಿಪಾದನೆ, ಇವೆಲ್ಲವೂ ವ್ಯಾವಹಾರಿಕ ಭಾಷೆಯಿಂದ ತೀರ ಭಿನ್ನವಾದದ್ದರಿಂದ, ಈ ವಿಷಯದ ಪರಿಚಯವಿಲ್ಲದ ಆಂಗ್ಲಭಾಷಾಕೋವಿದರಿಗೂ ಅದರ ಅರ್ಥವಾಗುವದು ಬಹಳ ಕಠಿಣ. ಇಂಥ ಕಠಿಣವಾದ ವಾಕ್ಯಜಾಲದಲ್ಲಿ ಅಡಗಿದ ತತ್ವಜ್ಞಾನದಂಥ ಸೂಕ್ಷ್ಮ ಅರ್ಥಗಳ ಕಣಗಳನ್ನು ಕೂಡಿಸಿ ತಿಳುವಿನ ಘಟ್ಟಿಯನ್ನು ಮಾಡುವದೆಂದರೆ, ಬಹು ಕಠಿಣವಾದ ಕೆಲಸ. ಒಬ್ಬ ವಾಚನಪಟುವಾದ ನಮ್ಮ ಮಿತ್ರನು ಶ್ರೀ ಅರವಿಂದರ ವಾಙ್ಮಯ ಸಮುದ್ರದ ತಳದಲ್ಲಿರುವ ಮುತ್ತು, ರತ್ನ, ಹವಳಗಳನ್ನು ತೆಗೆಯುವದಕ್ಕೋಸ್ಕರ ಹೆಣಗಿ ಕೊನೆಗೂ ಪಾರಸಿಗದೆ ದಣಿದು ಹಿಂತಿರುಗಬೇಕಾಯಿತೆಂದು ಹೇಳಿದನು. ಅಕಸ್ಮಾತ್ತಾಗಿ ಅವರ ಗ್ರಂಥವನ್ನು ಓದುವ ಸುಯೋಗವು ಬಂದೊದಗಿದ್ದರಿಂದ ನಾನೂ ಒಮ್ಮೆ ಪ್ರಯತ್ನ ಮಾಡಬೇಕೆಂದು ಹವಣಿಸಿದೆ. ನನಗೂ ಕೆಲಮಟ್ಟಿಗೆ ನನ್ನ ಮಿತ್ರನ ಅನುಭವವೇ ಬಂದಿತು. ಆದರೂ ಹೆದರದೆ ನನ್ನ ಪ್ರಯತ್ನವನ್ನು ಮುಂದುವರಿಸಿದ್ದರಿಂದ ಶ್ರೀ ಅರವಿಂದರ ಕೇವಲ ಕೃಪೆಯಿಂದಲೇ ಅವರ ವಾಙ್ಮಯಸಾಗರದಲ್ಲಿ ಮೂರು ನಡುಗಡ್ಡೆಗಳ ಆಸರವು ನನಗೆ ಸಿಕ್ಕಿತು. ಈ ದ್ವೀಪಗಳ ಆಶ್ರಯದಿಂದ ಅವುಗಳ ದಂಡೆಯಲ್ಲಿದ್ದ ಕೆಲವು ಮೌಲ್ಯವಾದ ಸಂಪತ್ತಿಯನ್ನು ಯಥಾಮತಿ ಒಟ್ಟುಗೂಡಿಸಿ ಕೃತಕೃತ್ಯನಾದೆ.

ಇಂಥ ಬಹು ಪ್ರಯಾಸದಿಂದ ಸಂಪಾದಿಸಿದ ಸಂಪತ್ತಿಯ ಉಪ-ಭೋಗವನ್ನು ನಾನೊಬ್ಬನೇ ಮಾಡಿಕೊಳ್ಳುವದು ಅಯೋಗ್ಯವಾಗುವದೆಂದು ಕಂಡುಬಂದದ್ದರಿಂದ, ಅದರ ಲಾಭವನ್ನು ನಮ್ಮ ಕನ್ನಡ ಬಂಧುಗಳಿಗೂ ಮಾಡಿಕೊಡಬೇಕೆಂಬ ಹಂಬಲದಿಂದ ನಾನು ಆಶ್ರಯಿಸಿದ ಈ ಮೂರೂ ನಡುಗಡ್ಡೆಗಳ ಮಾರ್ಗದರ್ಶನವನ್ನು ತಿಳಿಗನ್ನಡದಲ್ಲಿ ಮಾಡುವ ಪ್ರಯತ್ನ-ವನ್ನು ಕೈಕೊಂಡಿದ್ದೇನೆ. ಶ್ರೀ ಅರವಿಂದ ಯೋಗಿಗಳ ಆಂಗ್ಲಭಾಷೆಯಲ್ಲಿಯ ವಿಚಾರಸರಣಿಯನ್ನು ನಾನು ತಿಳಿಗನ್ನಡ ( ತಿಳಿಯುವ + ಕನ್ನಡ = ತಿಳಿಗನ್ನಡ ) ದಲ್ಲಿ ಇಟ್ಟಾಗ್ಯೂ ಅದು ಇನ್ನೂ ಹಲವರಿಗೆ ತಿಳಿಯುವದು ಕಠಿಣವಾಗಬಹುದು. ಯಾಕೆಂದರೆ ಮೊದಲನೆಯದಾಗಿ, ಸ್ಥೂಲ, ವ್ಯಾವಹಾರಿಕ ವಿಷಯಗಳ ವಿಚಾರಗಳಲ್ಲಿಯೇ ಮುಳುಗಿರುವ ನಮಗೆ ಈ ಸೂಕ್ಷ್ಮ ತಾತ್ವಿಕ ವಿಚಾರವು ಅಪರಿಚಿತವಾದದ್ದು. ತಾತ್ವಿಕ ವಿಚಾರವು ಚೆನ್ನಾಗಿ ತಿಳಿಯಬೇಕಾದರೆ ಮೊದಲು ಆ ವಿಚಾರದ ಅಭ್ಯಾಸವು ಕೆಲ ಮಟ್ಟಿಗಾದರೂ ಆಗಿರತಕ್ಕದ್ದು. ತಾತ್ವಿಕ ವಿಚಾರದಿಂದ ಸುಸಂಸ್ಕೃತವಾದ ಮನೋಭೂಮಿಕೆ ಇದ್ದವರಿಗೇ ಈ ವಿಷಯದಲ್ಲಿ ಆದರವೂ, ಮುಂದೆ ಈ ಅಭ್ಯಾಸವನ್ನು ಬಹುಕಾಲ ಮಾಡಿದವರಿಗೆ ಅದರಲ್ಲಿ ರುಚಿಯೂ ಉಂಟಾ-ಗುತ್ತವೆ. ಎರಡನೇಯದಾಗಿ ಶಾಸ್ತ್ರೀಯ ವಿಷಯದ ವಿವೇಚನೆಯನ್ನು ಮಾಡುವಾಗ ವ್ಯವಹಾರದಲ್ಲಿ ನಾವು ಕಾಣದ ಕೆಲವು ವಿಶಿಷ್ಟ ಅರ್ಥವುಳ್ಳ ಶಬ್ದಗಳ ಉಪಯೋಗ ಮಾಡಬೇಕಾಗುತ್ತದೆ. ಆ ಶಬ್ದಗಳಲ್ಲಿಯ ಕೆಲವನ್ನು ನಾವು ವ್ಯವಹಾರದಲ್ಲಿ ಉಪಯೋಗ ಮಾಗುತ್ತಿದ್ದರೂ ಅವುಗಳ ಶಾಸ್ತ್ರೀಯ ಅರ್ಥವು ನಮಗೆ ಚನ್ನಾಗಿ ತಿಳಿದಿರುವದಿಲ್ಲ. ಇಂಥ ಶಾಸ್ತ್ರೀಯ ಶಬ್ದಗಳಿಗೆ "ಪಾರಿಭಾಷಿಕ ಶಬ್ದ" ಗಳೆನ್ನುತ್ತಾರೆ. ಯಾವದೊಂದು ಶಾಸ್ತ್ರದ ವಿವೇಚನೆಯನ್ನು ಮಾಡುವಾಗ ಈ ಪಾರಿಭಾಷಿಕ ಶಬ್ದಗಳ ಉಪಯೋಗ ಮಾಡಿದ ಹೊರತು ಆ ಶಾಸ್ತ್ರದ ಯೋಗ್ಯವಾದ ಅರ್ಥಸ್ಫೋಟವು ಆಗುವದಿಲ್ಲ. ಆದ್ದರಿಂದ ಕೆಲಮಟ್ಟಿಗಾದರೂ ಆ ಶಾಸ್ತ್ರದ ಅಲ್ಪಸ್ವಲ್ಪ ಪೂರ್ವ ಪರಿಚಯ-ವಿದ್ದ ಹೊರತು ಗ್ರಂಥದ ಮರ್ಮವು ಚನ್ನಾಗಿ ತಿಳಿಯುವದಿಲ್ಲ. ಮೂರನೆಯ ದಾಗಿ ವೇದಾಂತ, ತತ್ವಜ್ಞಾನದಂಥ ಉನ್ನತ ಭೂಮಿಕೆಯಲ್ಲಿಯ ವಿಷಯದ ವಿವೇಚನೆಯನ್ನು ಅದಕ್ಕೆ ಅನುರೂಪವಾದ ಉನ್ನತ ಶಬ್ದಪ್ರಯೋಗಗಳಿಂ-

ದಲೇ ಮಾಡಬೇಕಾಗುತ್ತದೆ. ತತ್ಸಮ (ಗೀರ್ವಾಣ–ಸಂಸ್ಕೃತ) ಶಬ್ದಗಳ ಬದಲು ಕೆಲವು ದೇಶ್ಯ ಶಬ್ದಗಳ ಉಪಯೋಗ ಮಾಡಬಹುದಾದರೂ ಅರ್ಥ ಗಾಂಭೀರ್ಯವು ಉಳಿಯುವದಿಲ್ಲ. ಅಂಥ ಪ್ರಸಂಗಗಳಲ್ಲಿ ಸಂಸ್ಕೃತ ಶಬ್ದ ಗಳನ್ನೇ ಉಪಯೋಗಿಸಬೇಕಾಗುತ್ತದೆ. ಇವೆಲ್ಲ ಕಾರಣಗಳಿಂದ ವಿಷಯವು ತುಸು ಕಠಿಣವೆನಿಸಬಹುದು.

ಇರಲಿ, ಇನ್ನು ಈ ಗ್ರಂಥದ ಪ್ರತಿಪಾದ್ಯ ವಿಷಯದ ಕಡೆಗೆ ಹೊರ-ಳುವಾ. ಇದರಲ್ಲಿಯ ಮುಂದಿನ ಮೂರು ಪರಿಚ್ಛೇದಗಳಲ್ಲಿ ಅನುಕ್ರಮವಾಗಿ ಪ್ರಾಣಿಗಳ ಪುನರ್ಜನ್ಮ ಪರಲೋಕವಾಸ ಮತ್ತು ಕರ್ಮರಹಸ್ಯಗಳೆಂಬ ಮೂರು ವಿಷಯಗಳ ಬಗ್ಗೆ ವಿಚಾರ ಮಾಡಲಾಗಿದೆ. ಸರ್ವಸಾಮಾನ್ಯರ ಸ್ಥೂಲದೃಷ್ಟಿಗೆ, ಮನುಷ್ಯನನ್ನು ಒಳಗೊಂಡು ಎಲ್ಲ ಪ್ರಾಣಿಗಳೂ ಜನ್ಮ ತಾಳಿ, ಕೆಲಕಾಲ ಬಾಳಿ ಮುಂದೆ ಏನಾದರೊಂದು ಕಾರಣದಿಂದ ನಷ್ಟ ವಾಗುತ್ತವೆಂದು ಕಂಡುಬರುತ್ತದೆ. ಪ್ರಾಣಿಗಳ ಈ ಲೋಕದ ಬಾಳುವೆ ಯಲ್ಲಿ ಅವಕ್ಕೆ ಒಂದು ಸ್ಥೂಲ ಶರೀರವಿದ್ದು, ಆ ಶರೀರದಲ್ಲಿ "ನಾನು" ಎಂಬ ವ್ಯಕ್ತಿತ್ವದ ಜ್ಞಾನವೂ, ಈ ಜಗತ್ತಿನಲ್ಲಿಯ ವಸ್ತುಗಳ ಸ್ಪರ್ಶದಿಂದ, ಈ ನಾನೆಂಬ ಅಹಂಕಾರಕ್ಕೆ ಉಂಟಾಗುತ್ತಿರುವ ಸುಖ ಅಥವಾ ದುಃಖದ ಸಂವೇದನೆಯೂ, ಸುಖದ ಬಗ್ಗೆ ಪ್ರೀತಿಯೂ, ದುಃಖದ ಬಗ್ಗೆ ದ್ವೇಷವೂ ನಿಸರ್ಗತಃ ಇದ್ದದ್ದು ಕಂಡುಬರುತ್ತದೆ. ವಿಚಾರಶಕ್ತಿಯಿಲ್ಲದ ಎಲ್ಲ ಪ್ರಾಣಿ ಗಳಲ್ಲಿಯೂ ಈ ಸ್ಥೂಲದೇಹವೇ "ನಾನು' ಎಂಬ ದೃಢವಾದ ಭಾವನೆ ಯಾಗಿರುತ್ತದೆ. ಆದ್ದರಿಂದ, ಈ ದೇಹವು ನಷ್ಟವಾದರೆ, ತಾನೂ ನಾಶ ಹೊಂದುವೆನೆಂಬ ತಿಳುವಳಿಕೆಯಿಂದ ಅವನು ಭಯಪಡುತ್ತಾನೆ. ಪ್ರಾಣಿಯು ತತ್ವತಃ ಈ ಸ್ಥೂಲದೇಹವೇ ಆದ ಪಕ್ಷಕ್ಕೆ, ಈ ಸ್ಥೂಲದೇಹವು ನಾಶ ಹೊಂದಿದ ನಂತರ "ನಾನು" ಎಂಬ ವ್ಯಕ್ತಿತ್ವದ ಭಾವನೆಯೂ ಮತ್ತು ಅದರ ಸಂಗಡವೇ ಇತರ ಸಂವೇದನೆಗಳೂ ಇಲ್ಲದಂತಾಗಿ, ಜೀವಿತಾವಸ್ಥೆ ಯಲ್ಲಿ ಆ ಪ್ರಾಣಿಗೆ ಅನುಭವದಿಂದುಂಟಾದ ಎಲ್ಲ ಸಂಸ್ಕಾರಗಳೂ ನಷ್ಟ ವಾಗುತ್ತವೆ. ಅವೆಲ್ಲವೂ ಅಜ್ಞಾನಮಯ ಶೂನ್ಯದಲ್ಲಿ ಬೆರೆತು ಬಿಡುತ್ತವೆ. ಮಣ್ಣಿನಿಂದಲೇ ಉತ್ಪನ್ನನಾಗಿರುವ ನೀನು ತಿರುಗಿ ಮಣ್ಣೇ ಆಗುವಿ. ಎಂಬ

ಭಗವಾನ ಯೇಸೂಕ್ರಿಸ್ತನ ವಚನದಂತೆ, ಪಂಚಮಹಾಭೂತದ್ದಾದ ಈ ದೇಹವು ಆದರಲ್ಲಿಯೇ ಕೂಡಿ ಒಂದಾಗತಕ್ಕದ್ದು. ಈ "ನಾನು" ಎಂಬ ವ್ಯಕ್ತಿತ್ವಕ್ಕೆ ಮುಂದೆ ಅಸ್ತಿತ್ವವೇ ಇರದ್ದರಿಂದ ಪುನಃ ಅದು ಜನ್ಮತಾಳು ವದೂ ಶಕ್ಯವಿಲ್ಲ. ಈ ಪಂಚಮಹಾಭೂತಾತ್ಮಕ ಜಗತ್ತಿನ ಹೊರತು ಬೇರೆ ಮತ್ತಾವ ತತ್ವಗಳೂ ಸ್ಥೂಲದೃಷ್ಟಿಗೆ ಕಂಡುಬರದ್ದರಿಂದ, ಸೂಕ್ಷ್ಮ ಪರಲೋಕಗಳೂ ಅವುಗಳಲ್ಲಿ ಜೀವಗಳ ಇರುವಿಕೆಯೂ ಶಕ್ಯವಾಗುವದಿಲ್ಲ ನಾವು ಇಲ್ಲಿ ಮಾಡುತ್ತಿರುವ ಕೃತ್ಯಗಳಿಗೆ, ಈ ಜಗತ್ತಿನಲ್ಲಿಯೇ ನಾವು ಅನುಭವಿಸುತ್ತಿರುವ ಫಲಗಳ ಹೊರತು ಬೇರೆ ಫಲಗಳು ಇರದ್ದರಿಂದ, ಇಂಥ ಕೃತಿಗಳಿಂದುಂಟಾದ ಅಪೂರ್ವವು ಅಥವಾ ಪಾಪಪುಣ್ಯಗಳು ಜೀವನನ್ನು ಪರಲೋಕಗಳಿಗೆ ಮುಟ್ಟಿಸಲಾರವು. ಈ ಪ್ರಕಾರ ನಮ್ಮ ಸ್ಥೂಲ ಇಂದ್ರಿಯ ಗಳಿಗೆ ಕಾಣುವ ಸ್ಥೂಲಭೂತಗಳೇ ಜಗತ್ತಿನ ಆದ್ಯಂತ ತತ್ವಗಳೆಂದು ನಂಬಿರುವ ನಮ್ಮ ಸ್ಥೂಲದೃಷ್ಟಿಗೆ, ಪುನರ್ಜನ್ಮ, ಪರಲೋಕ, ಪಾಪ ಪುಣ್ಯಾದಿ ಕರ್ಮ ಫಲಗಳು ಇರಲಾರವೆಂದೇ ಕಾಣುತ್ತದೆ. ಆದರೆ ಈ ಸ್ಥೂಲ ನಂಬಿಗೆಯಿಂದ ಜಗತ್ತಿನ ಪಲವು ಮಹತ್ವದ ಪ್ರಮೇಯಗಳು ಬಿಡದೆ ಹಾಗೆಯೇ ಉಳಿಯುತ್ತವೆ. ಅವುಗಳನ್ನು ಬಿಡಿಸುವ ಪ್ರಯತ್ನ ಮಾಡುತ್ತಿದ್ದ ವಿಚಾರವಂತರಿಗೆ ಈ ಸ್ಥೂಲ ಜಗತ್ತಿನ ಹಿಂದಿನ ಸೂಕ್ಷ್ಮ ತತ್ವಗಳು ಪ್ರತ್ಯಕ್ಷವಾಗಿ ಜಗತ್ತಿನ ಸೂಕ್ಷ್ಮರಚನೆಗಳೂ, ಅವೆಲ್ಲವುಗಳಿಗೆ ಕಾರಣವಾದ ಕಾರ್ಯ ನಿಯಮಗಳೂ ಅವರ ಅನುಭವಕ್ಕೆ ಬರುತ್ತವೆ. ಈ ಜಗತ್ತಿನ ಅಡಿಯಲ್ಲಿ ಅಡಕಾಗಿದ್ದ ತತ್ವಗಳನ್ನು ಸಂಶೋಧಿಸಿ, ಅವುಗಳಿಂದ ಮನುಷ್ಯನ ವ್ಯವಹಾರದಲ್ಲಿ ಉಂಟಾಗುತ್ತಿರುವ ಅನೇಕ ಪ್ರಮೇಯಗಳನ್ನು ಬಿಡಿಸುವ ಪ್ರಯತ್ನಮಾಡಿದ ಪ್ರಾಚೀನ ತತ್ವಜ್ಞರಿಗೆ ದರ್ಶನಕಾರರೆಂಬ ಹೆಸರು. ಇಂಥ ದರ್ಶನಕಾರರು ಅಥವಾ ತತ್ವಜ್ಞರು ಆಧುನಿಕ ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ದೇಶಗಳಲ್ಲಿಯೂ ಆಗಿದ್ದು, ಅವರೇ ಸರ್ವಸಾಮಾನ್ಯ ಜನರಿಗೆ ಮಾರ್ಗದರ್ಶಕರಾಗಿರುತ್ತಾರೆ. ಯಾವ ರಾಷ್ಟ್ರಗಳಲ್ಲಿ ಇಂಥ ದರ್ಶನಕಾರರು ಹೆಚ್ಚುಪ್ರಮಾಣದಿಂದ ಹುಟ್ಟುವರೋ, ಮತ್ತು ಅವರ ಮಾರ್ಗದರ್ಶನವು ಎಷ್ಟರಮಟ್ಟಿಗೆ ನಿಸರ್ಗದ ಗೂಢವಾದ ನಿಯಮಗಳನ್ನು ಅನುಸರಿಸುವದೋ, ಅಷ್ಟರಮಟ್ಟಿಗೆ ಆ ಆ ರಾಷ್ಟ್ರಗಳ ಏರಿಳಿತ, ಹಿತ

ಅಥವಾ ನಾಶಗಳು ಅವಲಂಬಿಸಿರುತ್ತವೆ. ಆಧುನಿಕ ಜಗತ್ತಿನಲ್ಲಿ ಪಾಶ್ಚಾತ್ಯ ರಾಷ್ಟ್ರಗಳೇ ತಮ್ಮ ಚಟುವಟಿಕೆ, ಕರ್ತವ್ಯದಕ್ಷತೆ ಜ್ಞಾನ ಮುಂತಾದವು ಗಳಲ್ಲಿ ಮುಂದುವರಿದು, ತಮ್ಮ ಶಕ್ತಿಯ ವರ್ಚಸ್ಸನ್ನು ಜಗತ್ತಿನ ಮೇಲೆ ಬೀರುತ್ತವೆ. ಒಂದು ಶತಮಾನದ ಹಿಂದೆ, ಅವರ ಸಮಾಜರಚನೆ, ಅವರ ನೀತಿ, ಅವರ ವ್ಯವಹಾರ, ಉಡಿಗೆ, ತೊಡಿಗೆ, ರೀತಿರಿವಾಜುಗಳೇ ಜಗತ್ತಿಗೆ ಆದರ್ಶಭೂತವಾದವೆಂದೂ, ಇತರ ಎಲ್ಲ ರಾಷ್ಟ್ರಗಳು ಸುಧಾರಣೆ ಯಲ್ಲಿ ಹಿಂದುಳಿದವೆಂದೂ ಸರ್ವಸಾಮಾನ್ಯ ಅಜ್ಞಜನರ ಕಲ್ಪನೆಯಾಗಿತ್ತು. ಆದರೆ ಈ ಭ್ರಮವು ಈಗ ಕಡಿಮೆಯಾಗುತ್ತ ನಡೆದರೂ, ಅವರ ಸುಧಾರಣೆಯ ಹೊಳಪು ಇನ್ನೂ ನಮ್ಮ ಕಣ್ಣಲ್ಲಿ ಕಟ್ಟಿರುತ್ತದೆ. ಇದಕ್ಕೆ ಕಾರಣವೇನಂದರೆ, ಈ ಎಲ್ಲ ವ್ಯವಹಾರದ ಉಜ್ವಲತೆಯನ್ನೂ, ಸತ್ಯತೆ ಯನ್ನೂ ಆಳೆಯುವ ನಿಜವಾದ ತತ್ವಜ್ಞಾನವು ಯಾವದು ಎಂಬದು ಇನ್ನೂ ಬಹುಜನ ಸಮಾಜಕ್ಕೆ ತಿಳಿಯದಂತಾಗಿದೆ. ಆದರೆ, ಯಾವ ರಾಷ್ಟ್ರದ ಚಲನ ವಲನದ ಹಿಂದೆ ಹೆಚ್ಚು ವ್ಯಾಪಕವಾದ, ಹೆಚ್ಚು ಆಳವಾದ ತತ್ವ ಜ್ಞಾನವು ಇರುವದೋ, ಅದೇ ರಾಷ್ಟ್ರವು ಜಗತ್ತಿನ ಜೀವನ ಕಲಹದಲ್ಲಿ ಕೊನೆಗೆ ಜಯಶಾಲಿಯಾಗುವದೆಂಬದರಲ್ಲಿ ಸಂಶಯವಿಲ್ಲ

ನಮ್ಮ ಈ ಆರ್ಯಭೂಮಿಯಲ್ಲಿಯ ಸಂಸ್ಕೃತಿಯು ಅತ್ಯಂತ ಪುರಾ-ತನದ್ದು. ಈ ಸಂಸ್ಕೃತಿಯ ಕವಚಗಳು ಕಾಲಕಾಲಕ್ಕೆ ಬದಲಾದಾಗ್ಯೂ, ಅದರ ತಿರುಳಿನಲ್ಲಿ ಯಳ್ಳಷ್ಟಾದರೂ ಹೆಚ್ಚುಕಡಿಮೆಯಾಗಿರುವದಿಲ್ಲ. ಆದ್ದ ರಿಂದ ಇದಕ್ಕೆ ಸನಾತನ ಸಂಸ್ಕೃತಿ ಅಥವಾ ಧರ್ಮವೆನ್ನುವರು. ಜಗತ್ತಿನ ಇತರ ಸಂಸ್ಕೃತಿಗಳು ವರ್ಷಾಕಾಲದಲ್ಲಿ ಹುಟ್ಟುವ ನಾಯಿಯ ಕೊಡೆಗಳಂತೆ ಹುಟ್ಟಿ ನಷ್ಟವಾದಾಗ್ಯೂ, ನಮ್ಮ ಸಂಸ್ಕೃತಿಯು ಅಚ್ಚಳಿಯದೆ, ಅವ್ಯಾಹತ ವಾಗಿ ನಡೆಯುತ್ತ ಬಂದಿದೆ ಕಾಲಕಾಲಕ್ಕೆ, ಅಜ್ಞಾನ, ದ್ವೇಷಾಸೂಯೆಗಳ ಬುರುಸು ಈ ಸಂಸ್ಕೃತಿಯ ಮೇಲೆ ಕುಳಿತಾಗ್ಯೂ, ನಮ್ಮ ರಾಷ್ಟ್ರಕ್ಕೆ ಭೂಷಣರಾದ ಸಾಧು-ಸಂತರ ಮತ್ತು ಸತ್ಪುರುಷರ ಅವತಾರಗಳಿಂದ ಜನತೆಯ ಅಜ್ಞಾನವು ನಷ್ಟವಾಗಿ, ಈ ಸಂಸ್ಕೃತಿಯ ಅಥವಾ ಧರ್ಮದ ಸಂಸ್ಥಾಪನೆಯು ಆಗುತ್ತ ನಡೆದಿದೆ. ಈ ಧರ್ಮದ ಗ್ಲಾನಿಯಾಗಬಹುದು; ಆದರೆ ನಾಶವಾಗಲಾರದು. ಇಂಥ ಧರ್ಮದ ಸಂರಕ್ಷಣೆಯ ಭಾರವು, ಈ

ವಿಶ್ವರಚನೆಯ ನಾಟಕದಲ್ಲಿ ನಮ್ಮ ಪಾಲಿಗೆ ಸುದೈವದಿಂದ ಬಂದಿದೆ. ಆರ್ಯಾವರ್ತದಲ್ಲಿ ಉತ್ಪನ್ನರಾದ ಕುಲೀನ ವಿದ್ವಾಂಸರಿಂದ ಜಗತ್ತಿನ ಇತರ ಎಲ್ಲರೂ ತಮ್ಮ ತಮ್ಮ ವರ್ತನವನ್ನೂ, ಸಚ್ಚಾರಿತ್ರ್ಯವನ್ನೂ ಕಲಿಯ ತಕ್ಕದ್ದೆಂದು ಮನುಸ್ಮೃತಿಯಲ್ಲಿ ಒಂದು ಅಬಾಧಿತವಾದ ನಿಯಮವು ಹೇಳಲಾಗಿದೆ. ಜಗತ್ತಿನ ಇತಿಹಾಸದ ಕಡೆಗೆ ನೋಡಲಾಗಿ ಈ ವಚನವನ್ನು ಮನು ಮಹಾರಾಜರು ನಮ್ಮ ಜನಾಂಗದ ಅಥವಾ ಅವರಲ್ಲಿಯ ಯಾವ ದಾದರೊಂದು ವರ್ಗದ ಅಥವಾ ವ್ಯಕ್ತಿಯ ಅಹಂಕಾರಯುಕ್ತ ಜೊಳ್ಳು ಪ್ರೌಢಿಯನ್ನು ಬೆಳೆಸುವದಕ್ಕೋಸ್ಕರ ಹೇಳಿರಬಹುದೆಂದು ಅನಿಸುವದಿಲ್ಲ. ಈಶ್ವರೇಚ್ಛೆಯೆಂದೇ ಇರಲಿ, ಅಥವಾ ಈ ದೇಹದ ಭೌಗೋಲಿಕ ಇರುವಿಕೆಯೇ ಆ ಪ್ರಕಾರದ್ದಿರುವದೆಂದಾಗಲಿ, ಅಥವಾ ಈ ಜನಾಂಗದ ಮನೋರಚನೆಯೇ ಹೀಗಿರುವದೆಂದಾಗಲಿ, ಯಾವದೇ ಕಾರಣವು ಇರಲಿ, ಈ ಮಾತಿನ ಸತ್ಯವನ್ನು ಇತಿಹಾಸವು ಇನ್ನೂವರೆಗೂ ಕಂಠರವದಿಂದ ಹೇಳುತ್ತ ಬಂದಿದೆ ಜರ್ಮನ ಪಂಡಿತರಾದ ಪ್ರೊ ಮೋಕ್ಷಮುಲ್ಲರರು ಸಮಬುದ್ಧಿಯಿಂದ ಜಗತ್ತಿನ ಎಲ್ಲ ಸಂಸ್ಕೃತಿಗಳ ಅಭ್ಯಾಸಮಾಡಿ ಪಕ್ಷಪಾತ ವಿಲ್ಲದೆ, ಹಿಂದೀ ಸಂಸ್ಕೃತಿಯ ಬಗ್ಗೆ ಏನು ಬರೆದಿರುವರೆಂಬದನ್ನು ನೋಡಿರಿ! " ಉಪನಿಷತ್ತಿನ ಕಾಲದಿಂದ ಹ್ಯುಎನ್ ತ್ಸಾಂಗನ ಪ್ರವಾಸದ ಕಾಲದ ವರೆಗೂ ಇಡೀ ಹಿಂದುಸ್ತಾನ ದೇಶದಲ್ಲೆಲ್ಲ ಒಂದೇ ಒಂದಾದ ಹೆಚ್ಚಿನ ಆಸ್ಥೆಯ ವಿಷಯವು ಚರ್ಚೆಯಲ್ಲಿದ್ದದ್ದು ಕಂಡುಬರುತ್ತದೆ. ಆ ವಿಷಯವು ಯಾವದೆಂಪರೆ, ಈ ಜಗತ್ತಿನಲ್ಲಿ ಮನುಷ್ಯನ ಜೀವಿತದಲ್ಲಿಯ ಅತ್ಯಂತ ಮಹತ್ವದ ಪ್ರಶ್ನೆಯಾವದು ಎಂಬ ಚರ್ಚೆ. ಆದರೆ ಇತರ ದೇಶ ಗಳಲ್ಲಿ ಮಾತ್ರ ಜನರ ಲಕ್ಷ್ಯವು ತಮ್ಮ ರಾಷ್ಟ್ರದ ಕಲಿಪುರುಷನ ಚರಿತ್ರದ ಕಡೆಗೆ—ಅವನ ಶೌರ್ಯ, ಯುದ್ಧನೈಪುಣ್ಯ ಮತ್ತು ಕುತಂತ್ರ ಇವುಗಳ ಕಡೆಗೇ—ಇದ್ದದ್ದು ಕಂಡುಬರುತ್ತದೆ. ಹಿಂದುಸ್ಥಾನವು ವೈದಿಕ ಪಂಡಿತರ ಅಧೀನದಲ್ಲಿದ್ದು ಅವರು ಜನರಲ್ಲಿ ಧರ್ಮಪ್ರೇಮವನ್ನು ಯಾವಾಗಲೂ ಉಜ್ವಲವಾಗಿ ಇಟ್ಟಿದ್ದರು. ಇವರಲ್ಲಿಯ ಬಹುಜನರು ಬ್ರಾಹ್ಮಣವರ್ಗ ದವರೇ ಇದ್ದು, ಕೆಲವರು ಕ್ಷತ್ರಿಯರೂ ಇದ್ದದ್ದು ಕಂಡುಬರುತ್ತದೆ. ಹಿಂದುಸ್ಥಾನದ ರಾಜರು ಶೂರ ಸೇನಾಪತಿಗಳ ಸಲಹೆಗಳನ್ನು ತೆಗೆದು ಕೊಳ್ಳುವ ಬದಲು, ರಾಜ್ಯದ ಆಡಳಿತದಲ್ಲಿ ಧಾರ್ಮಿಕ ಬ್ರಹ್ಮವೃಂದದ

ಸಲಹೆಗಳನ್ನೇ ಪಡೆಯುತ್ತಿದ್ದರು. ಮತ್ತು ಸಾಮಾನ್ಯ ಪ್ರಜೆಗಳೂ ಕೂಡ ಧರ್ಮ ಮತ್ತು ತತ್ವಜ್ಞಾನದ ಬಗ್ಗೆ ಇದ್ದ ತಮ್ಮ ಸಹಜಪ್ರೇಮವನ್ನು ಬೆಳಿಸಿ ದೃಢಪಡಿಸಿಕೊಳ್ಳುತ್ತಿದ್ದರು. ಈ ವರೆಗೂ ಈ ಪ್ರೇಮವು ಅವರಲ್ಲಿ ಇಲ್ಲ-ದಂತಾಗಿರುವದಿಲ್ಲ. ......... ಈ ಪ್ರಕಾರದ ಇತಿಹಾಸವುಳ್ಳ ಮತ್ತೊಂದು ರಾಷ್ಟ್ರವನ್ನು ಜಗತ್ತಿನಲ್ಲಿ ಕಾಣಬಹುದೇ! ಶತಕಾನುಶತಕ ಒಂದೇ ವಿಚಾರದಿಂದ, ಇದೊಂದೇ ಧ್ಯೇಯದಿಂದ ಪೂರಿತವಾದ ಮತ್ತೊಂದು ರಾಷ್ಟ್ರವು ಜಗತೀತಲದಲ್ಲಿಯೇ ಇಲ್ಲ. ಮೇಲೆ ವರ್ಣಿಸಿದ ಜೀವನವು ನಮ್ಮ ಪಾಶ್ಚಿಮಾತ್ಯರಿಗೆ ಬಹು ವಿಚಿತ್ರವಾದದ್ದು ಅಥವಾ ಅವಿಶ್ವಸನೀಯವಾದದ್ದು ಕಾಣಬಹುದು. ಅದು ನಮ್ಮ ತಪ್ಪು. ಯಾಕಂದರೆ, ನಮಗಿಂತ ತೀರ ಬೇರೆಯಾದ ಬೌದ್ಧಿಕ ವಾತಾವರಣವು ಹಿಂದುಸ್ಥಾನದಲ್ಲಿ ಇರುತ್ತದೆಂಬದನ್ನು ನಾವು ಮರೆತುಬಿಡುತ್ತೇವೆ. ಹಿಂದೀಯರ ಆಧುನಿಕ ಗ್ರಂಥಗಳಿಂದ ವೈದಿಕ ಗ್ರಂಥಗಳ ವರೆಗೆ ನಾವು ಹಿಂದೆ ಹೋದಾಗ್ಯೂ ಒಂದೇ ಚಿತ್ರವು ಸ್ಪಷ್ಟವಾಗಿ ಕಾಣುತ್ತದೆ. ಅದು ಯಾವದೆಂದರೆ ಹಿಂದೀಯರ ಸಮಾಜದಲ್ಲಿಯ ಆಧ್ಯಾತ್ಮಿಕ ವಿಚಾರವು ಇತರ ಎಲ್ಲ ಭೌತಿಕ ವಿಚಾರಗಳನ್ನು ಬದಿಗೊತ್ತಿ ಒತ್ತರದಿಂದ ಮುಂದುವರಿಯುತ್ತಿರುವದೆಂಬದು ಇದು ವಿಚಾರವಂತರ ಜನಾಂಗವು; ತತ್ವಜ್ಞಾನಿಗಳ ರಾಷ್ಟ್ರವು" ಎಂದು ಮುಕ್ತಕಂಠದಿಂದ ಬಣ್ಣಿಸಿದ್ದಾರೆ.

ಇಡೀ ಜಗತ್ತನ್ನೆಲ್ಲ ಪ್ರವಾಸಮಾಡಿ ಆರ್ಯಧರ್ಮದ ಧ್ವಜವನ್ನು ಎಲ್ಲ ಕಡೆಗೂ ಮೆರೆಸಿದ ಸ್ವಾಮೀ ವಿವೇಕಾನಂದರು ಹೀಗೆ ಒಂದು ಬದಿಗೆ ಬರೆದಿದ್ದಾರೆ. "ಹಿಂದುಸ್ಥಾನದ ಜೀವಾಳವು ಎಲ್ಲಿರುವದೆಂಬದು ನಿಮಗೆ ಈಗ ಗೊತ್ತಾಗಿರಬಹುದು — ಅದು ಧರ್ಮದಲ್ಲಿದೆ. ಹಿಂದುಸ್ಥಾನದ ಮೇಲೆ ಆದ ಯಾವ ಪರಚಕ್ರಗಳಿಗೂ ಈ ಧರ್ಮವನ್ನು ನಾಶಗೊಳಿಸುವದು ಸಾಧ್ಯವಾಗಲಿಲ್ಲ. ಹಿಂದೂ ರಾಷ್ಟ್ರದ ಮೇಲೆ ಅನೇಕ ದುಸ್ತರ ಆಪತ್ತಿ-ಸಂಕಟಗಳು ಬಂದೊದಗಿದಾಗ್ಯೂ ಧರ್ಮದಿಂದಲೇ ಅವೆಲ್ಲವುಗಳನ್ನು ಅದು ನಿಸ್ತರಿಸಿಕೊಂಡು ಇನ್ನೂ ಜೀವಂತ ಇರುತ್ತದೆ. ಆಧುನಿಕ ಹಿಂದೀ ಸುಶಿಕ್ಷಿತರು ಕೇಳುವದೇನೆಂದರೆ ರಾಷ್ಟ್ರದ ಜೀವಾಳವನ್ನು ಧರ್ಮದಲ್ಲಿಯೇ ಇಡುವದರಿಂದ ಪ್ರಯೋಜನವೇನು? ಆದನ್ನು ಸಾಮಾಜಿಕ ಅಥವಾ

ರಾಜಕೀಯ ಸ್ವಾತಂತ್ರ್ಯದಲ್ಲಿ ಯಾಕಿಡಬಾರದು ? ಈ ಪ್ರಕಾರ ಆಕ್ಷೇಪಗಳನ್ನೆತ್ತುವದು ಸುಲಭವಾಗಿದೆ. ವಾದದ ಸಲುವಾಗಿ ಒಂದು ಕ್ಷಣ ನಾವು ಧರ್ಮ, ಆಧ್ಯಾತ್ಮಿಕ ಸ್ವಾತಂತ್ರ್ಯ, ಜೀವ, ಈಶ್ವರ, ಮುಕ್ತಿ ಮುಂತಾದ ಧಾರ್ಮಿಕರ ಭಾವನೆಗಳು ಸುಳ್ಳೆಂದು ಗೃಹೀತ ಹಿಡಿದಾಗ್ಯೂ, ನಾವು ನಮ್ಮ ಧ್ಯೇಯವನ್ನು ಬಿಟ್ಟರೆ ಯಾವ ಸ್ಥಿತಿಯುಂಟಾಗುವದೆಂಬದನ್ನು ನೋಡುವಾ ಒಂದೇ ಅಗ್ನಿ ತತ್ವವು ಬೇರೆ ಬೇರೆ ಪ್ರಕಾರಗಳಿಂದ— ಸೂರ್ಯ, ಬೆಂಕಿ, ಚಂದ್ರ, ನಕ್ಷತ್ರಾದಿಗಳಲ್ಲಿ—ಪ್ರಕಟವಾಗುವಂತೆ, ಒಂದೇ ಆದ ರಾಷ್ಟ್ರಶಕ್ತಿಯು ಫಿರಂಗಿಗಳ ( ಫ್ರೆಂಚ ) ರಾಷ್ಟ್ರದಲ್ಲಿ ರಾಷ್ಟ್ರೀಯ ಸ್ವಾತಂತ್ರ್ಯವಾಗಿಯೂ, ಆಂಗ್ಲರಲ್ಲಿ ವ್ಯಾಪಾರೋದ್ಯಮ, ನಮತೆಯ ಬೆಳವಣಿಗೆಯಲ್ಲಿಯೂ, ಮತ್ತು ಹಿಂದುಗಳಲ್ಲಿ ಆಧ್ಯಾತ್ಮಿಕ ಸ್ವಾತಂತ್ರ್ಯ ಅಥವಾ ಮುಕ್ತಿಯಲ್ಲಿಯೂ ಪರಿಣಮಿಸಿದೆ. ಈ ರಾಷ್ಟ್ರಪುರುಷನ ಶಕ್ತಿಯ ಪ್ರಚಂಡ ಕ್ರಿಯೆಯಿಂದ ಹಲವು ಶತಮಾನಗಳಿಂದ ಅವರು ಪಡೆದ ಸುದೈವ ಅಥವಾ ದುರ್ದೈವದ ಫಲವಾಗಿಯೇ ಈಗಿನ ಫಿರಂಗಿಗಳ ಅಥವಾ ಆಂಗ್ಲರ ಸ್ವಭಾವ ರಚನೆಯು ಆಗಿರುತ್ತದೆ. ಮತ್ತು ಅದೇ ಶಕ್ತಿಯ ಕ್ರಿಯೆಯಿಂದಲೇ ಸಾವಿರಾರು ಶತಮಾನಗಳ ಅನುಭವದಿಂದ ಈ ನಮ್ಮ ಹಿಂದೀ ರಾಷ್ಟ್ರದ ಸ್ವಭಾವವು ಬೆಳೆದಿರುವದು. ಅಂದಮೇಲೆ, ನಾನು ತಮಗೆ ಗಂಭೀರತನದ ಪ್ರಶ್ನೆಯನ್ನು ಹೀಗೆ ಮಾಡುತ್ತೇನೆ 'ಸಾವಿರಾರು ಶತಮಾನಗಳಿಂದ ತಯಾರಾದ ನಮ್ಮ ರಾಷ್ಟ್ರೀಯ ಸ್ವಭಾವವನ್ನು ಬಿಡುವದು ಸುಲಭವೋ ಅಥವಾ ನಿಮ್ಮ ನೂರು ನೂರಾಐವತ್ತು ವರ್ಷಗಳ ಹಿಂದೆ ಊರಲ್ಪಟ್ಟ ಈ ಪರರಾಷ್ಟ್ರೀಯ ಕಲಮೀ ಸ್ವಭಾವವನ್ನು ಬಿಡುವದು ಸುಲಭವೋ ?' ಬ್ರಿಟಿಶರು ತಮ್ಮ ವೀರವೃತ್ತಿಯನ್ನೂ, ಬಡಿದಾಟ ರಕ್ತಪಾತಗಳನ್ನೂ ಬಿಟ್ಟು ಧರ್ಮವನ್ನೇ ತಮ್ಮ ರಾಷ್ಟ್ರದ ಅಂತಿಮಧ್ಯೇಯವನ್ನಾಗಿ ಇಟ್ಟುಕೊಂಡು ಯಾಕೆ ಸುಮ್ಮನೆ ಶಾಂತವೃತ್ತಿಯಿಂದ ಕೂಡ್ರಬಾರದು ? ಆದರೆ, ವಸ್ತುಸ್ಥಿತಿಯು ಹೀಗಿರುವದಿಲ್ಲ. ರಾಷ್ಟ್ರನದಿಯ ಪ್ರವಾಹವು ಉಗಮದಿಂದ ಸಾವಿರಾರು ಮೈಲು ಮುಂದೆ ಹರಿದು ಬಂದಿದೆ ಅದು ತಿರುಗಿ ತನ್ನ ಉಗಮಕ್ಕೆ ಹೋದೀತೇ ? ಅಥವಾ ಯಾರ ಪ್ರಯತ್ನದಿಂದಾದರೂ ಅದು ಸಾಧ್ಯವಾಗಬಹುದೇ ? ಎಂದಿಗೂ ಇಲ್ಲ "

ಸ್ವಾಮಿಜಿಯವರ ಮತ್ತೊಂದು ಬರಹವು ಈಗಿನ ಪರಿಸ್ಥಿತಿಗೆ ಬಹಳೇ ಉದ್ಬೋಧಕವಾಗಿರುವದರಿಂದ ಅದನ್ನು ಪೂರ್ಣ ಇದ್ದಕ್ಕಿದ್ದಂತೆ ಭಾಷಾಂತರಿಸುವ ಮೋಹವು ಬಿಡದಂತಾಗಿದೆ. “ಹಿಂದುಗಳು ಅನ್ನುವದೇನಂದರೆ ರಾಷ್ಟ್ರೀಯ ಅಥವಾ ಸಾಮಾಜಿಕ ಸ್ವಾತಂತ್ರ್ಯವು ಹಿತಕರವೂ ಒಳ್ಳೆಯದೂ ಆಗಿದೆ. ನಿಜವಾದ ಸ್ವಾತಂತ್ರ್ಯವು ಮುಕ್ತಿ ಅಥವಾ ಆಧ್ಯಾತ್ಮಿಕ ಸ್ವಾತಂತ್ರ್ಯದಲ್ಲಿದೆ. ಇದೇ ನಮ್ಮ ರಾಷ್ಟ್ರದ ಇತಿಕರ್ತವ್ಯತೆಯು. ನಮ್ಮ ರಾಷ್ಟ್ರದ ಅಂಗವಾದ ವೈದಿಕ, ಜೈನ ಅಥವಾ ಬೌದ್ಧಮತಗಳನ್ನೇ ನೋಡಿರಿ ಅಥವಾ ಅದ್ವೈತ, ವಿಶಿಷ್ಟಾದ್ವೈತ ಅಥವಾ ದ್ವೈತ ಮತಗಳನ್ನೇ ಪರಿಶೀಲಿಸಿರಿ. ಇವೆಲ್ಲವೂ ಈ ಬಗ್ಗೆ ಒಂದೇ ಅಭಿಪ್ರಾಯವುಳ್ಳದ್ದಾಗಿವೆ. ಇಷ್ಟುಮಾತ್ರದಲ್ಲಿ ತಾವು ಕೈಹಾಕದೆ ನಮ್ಮ ರಾಜ್ಯದಲ್ಲಿ ಏನೇ ನೀವು ಮಾಡಿದರೂ ಹಿಂದುಗಳು ಅದರ ಕಡೆಗೆ ಎಂದೂ ಲಕ್ಷ್ಯಕೊಡುವದಿಲ್ಲ ಅವರು ಶಾಂತರೀತಿಯಿಂದ ಇರುವರು. ಆದರೆ ಜೋಕೆ! ನೀವು ಈ ಪ್ರಶ್ನೆಯಲ್ಲಿ ಉಪದ್ವ್ಯಾಪ ಮಾಡಿ ಕೈಹಾಕಿದರೆ ಮಾತ್ರ, ನಿಮ್ಮ ನಾಶವೇ ನಿಮ್ಮ ಕೈತೊಳೆದು ಬೆನ್ನು ಹತ್ತುವದು ನಿಶ್ಚಿತ. ಹಿಂದುವಿನ ಎಲ್ಲ ಸ್ವತ್ವವನ್ನೂ ನೀವು ಅಪಹರಿಸಬಹುದು, ಅವನನ್ನು ತಿರಸ್ಕರಿಸಿ ಒದೆಯಬಹುದು, ಅವನನ್ನು ಬಾಯಿಗೆ ಬಂದಂತೆ ಬೈಯಬಹುದು ಆದರೂ ಅವನ ಲಕ್ಷ್ಯವು ಅದರ ಕಡೆಗೆ ಇರುವದಿಲ್ಲ. ಅವನ ಧರ್ಮದ ಬಾಗಿಲು ನಿರಂಕುಶವಾದದ್ದೂ ಪ್ರತಿಬಂಧವಿಲ್ಲದ್ದೂ ಇದ್ದರೆ ಅವನಿಗೆ ಸಾಕು. ಹಿಂದುಸ್ಥಾನದ ಇತಿಹಾಸದ ಕಡೆಗೆ ನೀವು ತುಸು ನೋಡಿರಿ. ಅರ್ವಾಚೀನ ಕಾಲದ ಪಠಾಣ ರಾಜಮನೆತನಗಳು ಹಿಂದುಸ್ಥಾನದಲ್ಲಿ ಆಳಿ ಕೂಡಲೇ ನಾಶಹೊಂದುತ್ತಿದ್ದವು. ಅವು ಈ ಆರ್ಯಾವರ್ತದಲ್ಲಿ ಸಾಮ್ರಾಜ್ಯವನ್ನು ಸ್ಥಾಪಿಸಲಿಕ್ಕೆ ಸಮರ್ಥವಾಗಲಿಲ್ಲ. ಯಾಕಂದರೆ, ಈ ಪಠಾಣರು ಹಿಂದೂ ಧರ್ಮದ ಮೇಲೆ ಆಘಾತವಾಗುವ ಕೃತ್ಯಗಳನ್ನು ಮಾಡುತ್ತಿದ್ದರು. ಆದರೆ ಮೊಗಲರ ಸಾಮ್ರಾಜ್ಯವು ಎಷ್ಟು ಭದ್ರವಾದದ್ದೂ ವಿಶಾಲವಾದದ್ದೂ ಆಗಿತ್ತೆಂಬದು ನಿಮಗೆ ಗೊತ್ತೇ ಇದೆ. ಯಾಕಂದರೆ, ಮೊಗಲರು ಹಿಂದುಗಳ ಧಾರ್ಮಿಕ ಪ್ರಶ್ನೆಯಲ್ಲಿ ಕೈಹಾಕಲಿಲ್ಲ. ನಿಜವಾಗಿಯೂ ಹಿಂದುಗಳೇ ಮೊಗಲ ಸಾಮ್ರಾಜ್ಯದ ಆಧಾರಸ್ತಂಭರಾಗಿದ್ದರು. ಜಹಂಗೀರ, ಶಹಾಜಹಾನ, ದಾರಾಸುಕೊ! ಇದಿ ರಾಜಪುತ್ರರು

ಹಿಂದೂ ತಾಯಿಯ ಮಕ್ಕಳೆಂಬದು ಸರ್ವಶ್ರುತವಿದೆ. ಪುನಃ ಇತ್ತ ಲಕ್ಷ ಕೊಡಿರಿ! ಆ ದುರ್ದೈವೀ ಔರಂಗಜೇಬನು ಧರ್ಮದಲ್ಲಿ ಉಪದ್ವ್ಯಾಪವನ್ನು ಆರಂಭಿಸಿದ್ದರಿಂದ ಮೊಗಲರ ಸಾಮ್ರಾಜ್ಯವು ಸ್ವಪ್ನದಂತೆ ಕ್ಷಣದಲ್ಲಿ ನೀರಾಯಿತು ಬ್ರಿಟಿಶರ ರಾಜ್ಯವು ಹಿಂದುಸ್ಥಾನದಲ್ಲಿ ಯಾಕೆ ಈಗ ಭದ್ರವಾಗಿ ನೆಲೆಸಿದೆ? ಕಾರಣ ಅವರು ಆ ದೇಶದ ಧರ್ಮದಲ್ಲಿ ಯಾವ ಪ್ರಕಾರದಿಂದಲೂ ಕೈಹಾಕಿರುವದಿಲ್ಲ. ಧರ್ಮಾಂಧರಾದ ಕೆಲವು ಮಿಶನರೀ ಜನರು ಈ ಪ್ರಶ್ನೆಯನ್ನು ಪುನಃ ಎತ್ತಿದರು. ಆದರ ಪರಿಣಾಮವಾಗಿ ೧೮೫೭ ನೇ ಇಸ್ವಿಯ ಬಂಡಾಯವು ಎದ್ದಿತು. ಬ್ರಿಟಿಶರು ಈ ಸಂಗತಿಯನ್ನು ಚನ್ನಾಗಿ ಅರಿತು ಎಲ್ಲಿಯವರೆಗೆ, ಅದರಂತೆ ನಡೆದುಕೊಳ್ಳುವರೋ, ಅಲ್ಲಿಯವರೆಗೆ ಅವರ ರಾಜ್ಯವು ಈ ಭರತಖಂಡದಲ್ಲಿ ಎಂದಿಗೂ ಮಾಸದೆ, ಕೊಂಕಾಗದೆ ಉಳಿಯುವದು. ಅವರಲ್ಲಿಯ ದೂರದರ್ಶಿಗಳೂ, ಜಾಣರೂ ಆದ ಕೆಲವು ಆಂಗ್ಲರು ಈ ಸಂಗತಿಯನ್ನು ಅರಿತಿರುವರು. ಮತ್ತು ನಾನು ಹೇಳಿದ ಸಂಗತಿಯ ಸತ್ಯವನ್ನು ಅವರು ಒಪ್ಪುವರು. ಲಾರ್ಡ ರಾಬರ್ಟ ಈತನು ಬರೆದ '**Forty one years in India**' ಎಂಬ ಗ್ರಂಥವನ್ನು ಓದಿರಿ."

ಹೇಗೆ ಪ್ರತಿಯೊಬ್ಬ ಮನುಷ್ಯನ ಜೀವಿತದ ಗುರಿಯು ಬೇರೆ ಬೇರೆ ಯಾಗಿರಬಹುದೋ, ಹಾಗೆಯೇ ಪ್ರತಿಯೊಂದು ರಾಷ್ಟ್ರದ ಗುರಿಯೂ ಬೇರೆ ಬೇರೆಯಾಗಿರಬಹುದೆಂಬ ಸಂಗತಿಯು ಮೇಲಿನ ಮಹನೀಯರ ವಚನಗಳ ಅವತರಣಗಳಿಂದ ತಿಳಿದಿರಬಹುದು. ನಮ್ಮ ರಾಷ್ಟ್ರದ ಗುರಿಯು ಅನಾದಿ ಕಾಲದಿಂದ ಧರ್ಮವೇ ಆಗಿರುತ್ತದೆ. ಮತ್ತು ಈ ಗುರಿಯನ್ನು ನಾವು ಬಿಡದೆ ಕಾದುಕೊಂಡಿದ್ದರಿಂದಲೇ ನಮ್ಮ ರಾಷ್ಟ್ರವು ಇನ್ನೂ ಉಳಿದಿರುತ್ತದೆ. ಈ ಗುರಿಯನ್ನು ಬಿಟ್ಟರೆ ನಮ್ಮ ರಾಷ್ಟ್ರವು ನಾಶಹೊಂದುವದೆಂಬದರಲ್ಲಿ ಸಂದೇಹವಿಲ್ಲ. ಈ ನಮ್ಮ ರಾಷ್ಟ್ರದ ಗುರಿಯನ್ನು ಸತತ ನಮ್ಮ ಜನತೆಯ ಎದುರಿಗೆ ಇಟ್ಟು ನಮ್ಮ ಜನಾಂಗದ ಸಂರಕ್ಷಣೆಯನ್ನು ಮಾಡಿದ ಅವತಾರೀ ಪುರುಷರೂ, ಸಂತಸಜ್ಜನರೂ, ವಿದ್ವಾಂಸರಾದ ಆಚಾರ್ಯರೂ, ಶಿವಶರಣರೂ ನಮ್ಮ ಈ ಹಿಂದೂ ಜನಾಂಗದ ಮೇಲೆ ಮಹತ್ತರವಾದ ಉಪಕಾರವನ್ನು ಮಾಡಿದ್ದಾರೆ. ಈ ಉಜ್ವಲವಾದ ಧರ್ಮದ ದೀವಟಿಗೆಯನ್ನು ನಮ್ಮೆದುರಿ

ಗಿಟ್ಟು ರಾಷ್ಟ್ರವನ್ನು ಬೆಳಕಿಗೆ ತಂದ ಮತ್ತು ತರುತ್ತಿರುವ ಮಹಾಪುರುಷರ ಕೊರತೆಯು ನಮ್ಮ ರಾಷ್ಟ್ರದಲ್ಲಿ ಯಾವ ಕಾಲದಲ್ಲಿಯೂ ಆಗಿರುವದಿಲ್ಲ. ಇಂಥ ಮಹಾಪುರುಷರಲ್ಲಿ ಶ್ರೀ ಅರವಿಂದರೂ ಒಬ್ಬರಾಗಿದ್ದಾರೆ. ಮಹರ್ಷಿ ಅರವಿಂದರ ವೈಶಿಷ್ಟ್ಯವು ಅವರ ಅಲೌಕಿಕ ಚರಿತ್ರದಲ್ಲಿಯೂ ಅವರು ಬರೆದ ಗ್ರಂಥಗಳಲ್ಲಿಯೂ ಕಂಡುಬರುತ್ತದೆ. ಈ ಸಣ್ಣ ಉಪೋದ್ಘಾತದಲ್ಲಿ ಅವರ ಚರಿತ್ರವನ್ನು ಬರೆದು ಪುನರುಕ್ತಿಯನ್ನು ಮಾಡುವದು ನಮ್ಮ ಉದ್ದೇಶವಿಲ್ಲ. ಈ ಬಗ್ಗೆ ಅನೇಕ ಸ್ವತಂತ್ರ ಚರಿತ್ರಗಳು ಬರೆಯಲ್ಪಟ್ಟಿವೆ. ಅವುಗಳನ್ನು ವಾಚಕರು ಓದಬಹುದು ಆದರೆ ಈಗಿನ ಜಗತ್ತಿಗೆ ಅವರ ದಿವ್ಯ ಸಂದೇಶವೂ ಅವರ ಜೀವಿತದ ರಹಸ್ಯವೂ ಯೋಗ್ಯ ಮಾರ್ಗದರ್ಶನವನ್ನು ಮಾಡಬಲ್ಲ ವೆಂದಿಷ್ಟೇ ಇಲ್ಲಿ ಉಸುರಿದರೆ ಸಾಕು.

ಪುನರ್ಜನ್ಮ ಪರಲೋಕ, ಕರ್ಮ ಮೀಮಾಂಸೆಗಳಿಂದ ನಮಗೇನು ಪ್ರಯೋಜನ? ಬಹುಜನ ಸಮಾಜವು ಈಗ ಹಸಿವೆಯಿಂದ ಪೀಡಿತ ವಾಗಿದ್ದು "ಬುಭುಕ್ಷಿತಃ ಕಿಂ ನ ಕರೋತಿ ಪಾಪಂ" ಎಂಬಂತೆ ಸಮಾಜ ದಲ್ಲಿ ಎತ್ತ ನೋಡಿದತ್ತ ಅಸಮಾಧಾನ, ಗೊಂದಲ, ಬಡಿದಾಟಗಳು ಎದ್ದಾಗ ಇಂಥ ತಾತ್ವಿಕ ವಿಚಾರವನ್ನು ಮಾಡುವದಕ್ಕೆ ಜನರಿಗೆ ಅವಕಾಶ ವೆಲ್ಲಿ? ನಮ್ಮ ರಾಷ್ಟ್ರದ ಈ ಕ್ಷಣದ ಆವಶ್ಯಕತೆ ಉದರಪೋಷಣದಲ್ಲಿದ್ದು, ಅದನ್ನು ತೃಪ್ತಿಗೊಳಿಸುವ ಆಹಾರ ಸಮೃದ್ಧಿಯ ಪ್ರಶ್ನವನ್ನಾಗಲಿ—ಹೆಚ್ಚು ಧಾನ್ಯ ಬೆಳೆಯುವ ಯೋಜನೆಯನ್ನಾಗಲಿ, ಅಥವಾ ಅದನ್ನು ಉಂಟು ಮಾಡುವ ಮನುಷ್ಯಬಲವು ಹೇಗೆ ಉಂಟಾದೀತು ಎಂಬ ಪ್ರಶ್ನೆಗಳ ಚರ್ಚೆ ಮಾಡುವ ಬದಲು,— ಕಡಿದಷ್ಟೇ ತುರಿಸಿಕೊಳ್ಳುವದನ್ನು ಬಿಟ್ಟು,— ಈ ತತ್ವಜ್ಞಾನದ, ಪರಲೋಕದ ಅಥವಾ ಕರ್ಮಫಲದ ವಿಚಾರವನ್ನು ಯಾರು ಮಾಡಬೇಕು? ಇಂಥ ಅನವಶ್ಯಕ ಬರವಣಿಗೆಗಳಲ್ಲಿಯೂ ಅದನ್ನು ಓದುವದರಲ್ಲಿಯೂ ರಾಷ್ಟ್ರದ ಶಕ್ತಿಯು ಮತ್ತು ವೇಳೆಯು ಅಪವ್ಯಯ ಮಾಡು ವದರಲ್ಲಿ ಅರ್ಥವಿಲ್ಲವೆಂದು ಕೆಲವು ಆಕ್ಷೇಪಕರು ಅನ್ನಬಹುದು. ಹಾಗೂ ಪುನರ್ಜನ್ಮ ಪರಲೋಕಗಳು ಇರುವವೆಂದು ತಾರ್ಕಿಕ ವಾದದಿಂದ ಸಿದ್ಧ- ಮಾಡಿ ತೋರಿಸಿದಾಗಲೂ, ಇದರಿಂದ ಮನುಷ್ಯನ ಯಾವ ಪ್ರಕಾರದ ಸಮಾಧಾನವೂ ಆಗಲಾರದು. ಅಥವಾ ಅವು ಸತ್ಯವಾಗಿಯೂ ಇದ್ದುವ .

ವೆಂದು ಗೃಹೀತ ಹಿಡಿದರೂ ಮತ್ತು ಈ ಜನ್ಮ ಬರುವ ಮೊದಲು ಜೀವವು ಪರಲೋಕಗಳಲ್ಲಿತ್ತೆಂದೂ, ಮರಣೋತ್ತರ ಪುನಃ ಅಲ್ಲಿಗೆ ಹೋಗುವ ದೆಂದೂ ಸಿದ್ಧವಾದರೂ, ಅದೊಂದು ಕಾದಂಬರಿಯಂತೆ ತುಸು ಮನೋ-ರಂಜನೆಯ ಕೆಲಸವಾಗಬಹುದು. ಆದರೆ, ಈ ಲೋಕದ ನಮ್ಮ ವ್ಯವಹಾರ ದಲ್ಲಿ ಅಥವಾ ನಮ್ಮ ಸಮಾಜರಚನೆಯಲ್ಲಿ, ಅಥವಾ ನಮ್ಮ ರಾಷ್ಟ್ರದ ಏಳಿಗೆಯಲ್ಲಿ ಇಂಥ ವಿಚಾರಗಳಿಂದ ಪ್ರಯೋಜನವೇನು? ಜನತೆಯ ತಾತ್ಕಾಲಿಕ ಹಿತವು ಅಥವಾ ಸುಖಸಮಾಧಾನಗಳು ಈ ವಿಚಾರಗಳಿಂದ ಆದೀತೆಂದು ಅನಿಸುವದಿಲ್ಲನೆಂದು ಇನ್ನೂ ಕೆಲವು ವಿರೋಧಕ ಪ್ರಶ್ನೆಗಳು ಉಂಟಾಗಬಹುದು. ನಮ್ಮ ರಾಜಕಾರಣೀ ಬಂಧುಗಳು ವಾದಿಸಬಹುದಾದ ಇನ್ನೊಂದು ಆಕ್ಷೇಪವಿದೆ. ಮೇಲೆ ಪ್ರತಿಪಾದನ ಮಾಡಿದ ನಮ್ಮ ರಾಷ್ಟ್ರದ ಧಾರ್ಮಿಕ ತಳಹದಿಯ ದುರಾಗ್ರಹದಿಂದಲೇ ನಮ್ಮ ದೇಶದ ವಿಭಜನೆಯಾಗಿ ನಮಗೆ ಈಗಿನ ಅಮಾನುಷವಾದ ಘೋರ ಸಂಕಟಗಳಿಗೆ ತುತ್ತಾಗಬೇಕಾ ಗಿದೆ. ಆದ್ದರಿಂದ ರಾಜಕಾರಣದ ವಿಷಯವಾದ ರಾಷ್ಟ್ರದ ಕಟ್ಟುವಿಕೆಯಲ್ಲಿ ಧರ್ಮಕ್ಕೆ ಎಳ್ಳಷ್ಟೂ ಎಡೆಸಿಗಲಾರದು. ಧರ್ಮರಹಿತ ಸಮಾಜ, ಅಥವಾ ರಾಷ್ಟ್ರರಚನೆಯೇ ನಮ್ಮ ಗುರಿ ಇರತಕ್ಕದ್ದು. ಎಂದು ಧರ್ಮದ ಯೋಗ್ಯ-ವಾದ ಕಲ್ಪನೆಯಿಲ್ಲದ ರಾಜಕಾರಣಿಗಳು ಪ್ರತಿಪಾದಿಸಬಹುದು. ಅದ್ವೈತ ಸಿದ್ಧಾಂತಿಗಳೆನಿಸಿಕೊಳ್ಳುವ ಇನ್ನೂ ಕೆಲವರು ಅನ್ನಬಹುದೇನೆಂದರೆ "ಈ ಜಗತ್ತು, ಅನ್ಯಜಗತ್ತು, ಕರ್ಮಫಲ, ಜೀವನ ಕರ್ಮಲೇಪ, ಅವನ ಹುಟ್ಟು ಸಾವು ಇವೆಲ್ಲವೂ ಭ್ರಮಮೂಲಕವಿದ್ದು, ಆತ್ಮನೊಬ್ಬನೇ ಅಜರಾಮರನೂ ಸತ್ಯವಸ್ತುವೂ ಆಗಿರುತ್ತಾನೆ. ಆದ್ದರಿಂದ, ಕೇವಲ ಸದ್ವಸ್ತುವಾದ ಆತ್ಮನ ಚರ್ಚೆಯನ್ನು ಮಾಡುವದರಲ್ಲಿಯೇ ಪರಮಾರ್ಥ ಸಾಧನವಿದ್ದು, ಪುನರ್ಜನ್ಮ ಕರ್ಮವಿಪಾಕಾದಿ ಜೀವನ ಭ್ರಮಮೂಲಕ ಉಂಟಾದ ಭೋಗಗಳ ಅಥವಾ ಸ್ಥಿತಿಯ ವಿಚಾರ ಮಾಡುವಲ್ಲಿ ಕಾಲಹರಣ ಮಾಡುವದು ಯೋಗ್ಯವಾಗ ಲಾರದು" ಎಂದು. ಈ ಎಲ್ಲ ತರ್ಕವಿತರ್ಕಗಳಿಗೆ ಯಥಾಮತಿ ಉತ್ತರ ವನ್ನು ಕೊಡಲಿಕ್ಕೆ ಇದು ಯೋಗ್ಯ ಸ್ಥಾನವೆಂದು ತಿಳಿದು ಮುಂದಿನ ವಿಚಾರವನ್ನು ಕನ್ನಡ ಜನತೆಯ ಎದುರಿಗೆ ಇಡುವ ಪ್ರಯತ್ನವನ್ನು ಮಾಡಿದ್ದೇನೆ.

ಅಧ್ಯಾತ್ಮಿಕ ಮತ್ತು ಪಾರಲೌಕಿಕ ಕಲ್ಪನೆಗಳಿಂದ ಮನುಷ್ಯನಿಗೆ ಪ್ರಯೋಜನವೇನು ಎಂಬ ಪ್ರಶ್ನೆಯು ಮಹತ್ವದ್ದು. ನಾವು ತಿನ್ನುಣ್ಣುವ, ಉಡುವ ತೊಡುವ ವಸ್ತುಗಳನ್ನು ಸಾಕಷ್ಟು ನಿರ್ಮಾಣ ಮಾಡುವದರಿಂದಲೂ ಮತ್ತು ಇತರ ಸುಖಸಾಧನಗಳನ್ನು ಬೆಳೆಸುವದರಿಂದಲೂ, ಈ ಎಲ್ಲ ಸುಖಸಾಮುಗ್ರಿಗಳು ಎಲ್ಲರಿಗೂ ಸುಲಭವಾಗಿ ದೊರೆಯುವಂತೆ ಸಮಾಜ ರಚನೆಯನ್ನುಂಟು ಮಾಡುವದರಿಂದಲೂ, ಈ ಸಮಾಜರಚನೆಗೆ ತಕ್ಕ ಶಿಕ್ಷಣ, ಕಲಾಕೌಶಲ್ಯ ಮತ್ತು ಸುಧಾರಿಸಿದ ಜೀವನವನ್ನು ಉಂಟುಮಾಡುವದರಿಂದಲೂ, ಮನುಷ್ಯಸಮಾಜದ ಅಂತಿಮ ಸುಖಸಮಾಧಾನಗಳು ಸಾಧಿಸುವವೆಂದು ಹಲವರ ಕಲ್ಪನೆಯಾಗಿರುತ್ತದೆ ಆದ್ದರಿಂದ ಎಲ್ಲ ಮನುಷ್ಯ ಜನಾಂಗದ ಧ್ಯೇಯವು ಇದಕ್ಕಿಂತ ಹೆಚ್ಚಿನದು ಇರಲಾರದೆಂದು ಅವರ ಕಲ್ಪನೆ. ಆದರೆ, ಕೇವಲ ಅರ್ಥಶಾಸ್ತ್ರ ಮತ್ತು ಕೇವಲ ರಾಜಕಾರಣ ಇವುಗಳಿಂದ ಮನುಷ್ಯನ ಎಲ್ಲ ಆಕಾಂಕ್ಷೆಗಳ ತೃಪ್ತಿಯು ಆಗುವದೆಂದು ಇನ್ನೂ ಸಿದ್ಧವಾಗಿರುವದಿಲ್ಲ. ಈಗಿನ ಜಗತ್ತಿನ ಅಭ್ಯಾಸವನ್ನು ಹೆಚ್ಚು ಸೂಕ್ಷ್ಮರೀತಿಯಿಂದ ಮಾಡಿದವರಿಗೆ ಆಧುನಿಕ ಅರ್ಥಶಾಸ್ತ್ರ ಮತ್ತು ರಾಜ-ಕಾರಣಗಳಿಂದ ಮನುಷ್ಯನ ಮನುಷ್ಯತ್ವದ ಅಧೋಗತಿಯು ಭರದಿಂದ ಸಾಗಿದ್ದು ಅವನ ಸುಧಾರಣೆಯು ಮತ್ತು ಸಂಸ್ಕೃತಿಯು ಜೊಳ್ಳುತನವು ಹೊರ ಬೀಳಹತ್ತಿರುತ್ತದೆಂಬ ಬಗ್ಗೆ ಸಾಕಷ್ಟು ಪುರಾವೆಗಳು ಸಿಗಬಹುದು. ಆಧುನಿಕ ಅರ್ಥಶಾಸ್ತ್ರ ಅಥವಾ ರಾಜಕಾರಣಗಳ ಭೂಮಿಕೆಯ ಮೇಲಿಂದ ಮನುಷ್ಯ ವ್ಯಕ್ತಿಯ ಅಥವಾ ಜನಾಂಗದ ಮೂಲಭೂತವಾದ ಪ್ರಶ್ನೆಗಳನ್ನು ಬಿಡಿಸುವದು ಶಕ್ಯವಿಲ್ಲೆಂದು ಅನುಭವದಿಂದ ಕಂಡುಬರುತ್ತದೆ. ಮನುಷ್ಯಪ್ರಾಣಿಗೆ ಅನ್ನಬಟ್ಟೆಗಳಾಗಲಿ ಅಥವಾ ಅಭ್ಯುದಯಕಾರಕ ಇತರ ಯಾವದೇ ಸಾಧನ-ಗಳಾಗಲಿ ಅವನ ಪ್ರಗತಿಗೆ ಅನವಶ್ಯಕಗಳೆಂದು ನಮ್ಮ ಹೇಳಿಕೆಯಿಲ್ಲ. ಆದರೆ ಶ್ರೀ ಅರವಿಂದರವರು ಕೆಲವು ದಿನಗಳ ಹಿಂದೆ ಆಂಧ್ರ ವಿಶ್ವವಿದ್ಯಾಲಯಕ್ಕೆ ಕಳಿಸಿದ ತಮ್ಮ ಸಂದೇಶದಲ್ಲಿ ಹೇಳಿದಂತೆ "ಕೇವಲ ಲಷ್ಕರೀ ಸಾಮರ್ಥ್ಯವನ್ನುಂಟುಮಾಡಿ, ದೊಡ್ಡಪ್ರಮಾಣದಿಂದ ಉದ್ಯೋಗ ಧಂದೆಗಳನ್ನು ಬೆಳೆಸಿ, ಏಕಸೂತ್ರೀ ಸತ್ತೆಯ ರಾಜಕೀಯ ಸಂಘಟನೆಯನ್ನು ಮಾಡಿ ನಮ್ಮ ಸಾಮಾಜಿಕ ಜೀವನದ ಮಟ್ಟವನ್ನು ಎತ್ತರಿಸಿದರೆ ನಮ್ಮ ಕಾರ್ಯ

ಭಾಗವಾಗಲಾರದು. ಇವೆಲ್ಲವುಗಳ ಅಡಿಯಲ್ಲಿರುವ ಸ್ವಧರ್ಮದ ತಿರುಳನ್ನು ನಾವು ಕಳೆದುಕೊಂಡರೆ, ಇವೆಲ್ಲ ಸಾಧನಗಳ ಅನುಕೂಲತೆಯು ವ್ಯರ್ಥವಾದೀತು. ಇದರಿಂದ ನಮ್ಮ ಪ್ರಾಚೀನ ಭಾರತದ ಆದರ್ಶವು ಇಲ್ಲದಂತಾಗುವದು. ಕೇವಲ ಬಾಹ್ಯ ಜೀವನದಲ್ಲಿಯೇ ರಮಮಾಣರಾಗಿ ತಾವು ಆಧ್ಯಾತ್ಮಿಕ ಜೀವನಕ್ಕೆ ತಿಲಾಂಜಲಿಯನ್ನು ಕೊಡುವಿರೋ? ಎಂಬ ಪ್ರಶ್ನೆಯು ತವೆಮ್ಮೆದುರಿಗಿದೆ ಭಾರತದ ಭವಿತವ್ಯವು ಅಂತರ್ಬಾಹ್ಯ ಪ್ರಗತಿಯಲ್ಲಿ ಆದದ್ದು ಕಂಡುಬರತಕ್ಕದ್ದು."

ಇವರ ಮೇಲಿಂದ ಆಧ್ಯಾತ್ಮಿಕ ತಳಹದಿಯಿಲ್ಲದ ಎಲ್ಲ ಪ್ರಕಾರದ ಸುಧಾರಿಸಿದ ಜೀವನವು ವ್ಯರ್ಥವೆಂದೂ, ಇಂಥ ಜೀವನದಿಂದ ಮನುಷ್ಯನ ಸಮಾಧಾನವಾಗಲಾರದೆಂದೂ ತಿಳಿದವರ ಅಭಿಪ್ರಾಯವಿದ್ದದ್ದನ್ನು ನಾವು ಮಣಗಾಣಬಹುದು. ನಮ್ಮ ಪ್ರತಿಪಕ್ಷಿಗಳು ಅನ್ನುವಂತೆ ಅರ್ಥಶಾಸ್ತ್ರ ಮತ್ತು ರಾಜಕಾರಣಗಳಿಗೇ ಪ್ರಾಧಾನ್ಯವುಳ್ಳ ಸಮಾಜರಚನೆಯಲ್ಲಿ ಮನುಷ್ಯನ ಅನ್ನ ಬಟ್ಟೆ ಮತ್ತು ಇತರ ಉಪಭೋಗ್ಯ ಸಂಪತ್ತಿಗಳ ವಿಪುಲತೆಯು ಆಗಬಹುದಾದರೂ, ಇಷ್ಟರಿಂದಲೇ ಮನುಷ್ಯನ ಮೂಲಗ್ರಾಹೀ ಆಕಾಂಕ್ಷೆಗಳ ಸಮಾಧಾನವಾಗಿ ಮನುಷ್ಯಸಮಾಜವು ಸುಖಶಾಂತಿಯಿಂದ ಬಾಳಬಹುದೆಂದು ಅನಿಸುವದಿಲ್ಲ. ಈ ಶಾಸ್ತ್ರಗಳು ಮನುಷ್ಯನ ಸುಖಕ್ಕೆ ಸಾಧನವಾದ ವಸ್ತುಗಳ ಅಂದರೆ, ವಿಷಯಗಳ ವಿಚಾರವನ್ನೇ ಮಾಡುತ್ತಿದ್ದು ಈ ವಿಷಯಗಳನ್ನು ಉಪಭೋಗಿಸುತ್ತಿರುವ ಮನುಷ್ಯನ—ವಿಷಯಿಯ ವಿಚಾರವನ್ನು ಮಾಡುವದಿಲ್ಲ. ಮನುಷ್ಯನ ಸುಖೋಪಭೋಗದ ಕ್ರಿಯೆಯಲ್ಲಿ ಸುಖವು ಯಾತರಿಂದ ಉಂಟಾಗುವದೋ ಅದಕ್ಕೆ ವಿಷಯವೆಂದೂ, ಈ ಸುಖವನ್ನು ಯಾವನು ಹೊಂದುವನೋ ಅವನು ಉಪಭೋಕ್ತಾ, ಅಥವಾ ವಿಷಯಿಯೆಂದೂ ಎರಡು ಭಾಗಗಳಿವೆ. ಇತರ ಶಾಸ್ತ್ರಗಳು ಕೇವಲ ವಿಷಯಗಳ— ಅಂದರೆ ಸುಖಸಾಧನಗಳ ಉತ್ಪತ್ತಿ ಮತ್ತು ಸ್ಥಿತಿಗಳ ಉಹಾಪೋಹವನ್ನಷ್ಟೇ —ಅವುಗಳ ಗುಣಧರ್ಮಗಳನ್ನಷ್ಟೇ ವಿಚಾರಮಾಡಿ ಅವನ್ನು ಮನುಷ್ಯನ ಉಪಯೋಗಕ್ಕೆ ಯಾವ ಪ್ರಕಾರದಿಂದ ತರಬಹುದೆಂಬದಿಷ್ಟೇ— ಚರ್ಚೆಯನ್ನು ಮಾಡುವವು. ಆದರೆ ಈ ಸಾಧನಗಳು ದುಷ್ಟಮನುಷ್ಯನ ಕೈಯಲ್ಲಿ ಸಂಗ್ರಹೀತವಾದರೆ, ಅದರ ಯೋಗ್ಯ ಉಪಯೋಗವಾಗುವ ಬದಲು, ಅದರ

ದುರುಪಯೋಗವೇ ಹೆಚ್ಚಾಗಿ, ಸಮಾಜಕ್ಕೆ ಸುಖದ ಬದಲು ದುಃಖವೇ ಹೆಚ್ಚು ಪಾಲಿನಿಂದ ಉಂಟಾಗಬಹುದು. ಆದರೆ, ಈ ಶಾಸ್ತ್ರಗಳು ಉಪಭೋಗವನ್ನು ಪಡೆಯುತ್ತಿರುವ ವಿಷಯಿಯ— ಮನುಷ್ಯಪ್ರಾಣಿಯ ಗುಣಧರ್ಮಗಳನ್ನೂ, ಅವನಲ್ಲಿಯ ದುಷ್ಟ ಗುಣಗಳ ನಾಶವಾಗಿ ಸದ್ಗುಣಗಳೇ ಹೇಗೆ ಪ್ರಕಟವಾದಾವೆಂಬ ವಿಷಯವನ್ನೂ ಚರ್ಚಿಸುವದಿಲ್ಲ. ಈಗಿನ ಪಾಶ್ಚಾತ್ಯರ ಪ್ರಾಣಿ ಅಥವಾ ಮಾನುಷ ಶಾಸ್ತ್ರಗಳು—ಅಂದರೆ ಮನುಷ್ಯಪ್ರಾಣಿಗೆ ಸಂಬಂಧಪಟ್ಟ ಮಾನಸಶಾಸ್ತ್ರ, ಸಮಾಜಶಾಸ್ತ್ರ, ಅರ್ಥಶಾಸ್ತ್ರ, ರಾಜಕಾರಣ ಮುಂತಾದವುಗಳು— ಮನುಷ್ಯನ ವಿಷಯ ಸುಖವನ್ನೇ ಹೇಗೆ ಬೆಳೆಸಬೇಕೆಂಬ ಗುರಿಯನ್ನು ತಮ್ಮೆದುರಿಗೆ ಇಟ್ಟುಕೊಂಡಿವೆ ಆದರೆ ಮನುಷ್ಯನ ನಿಜವಾದ ಸ್ವರೂಪವು ಯಾವದು, ಅವನಿಗೆ ಈ ಸುಖದುಃಖಗಳು ಹೇಗೆ ಉಂಟಾಗುತ್ತವೆ, ದುಃಖದಿಂದ ಮನುಷ್ಯನನ್ನು ಪಾರುಮಾಡುವ ನಿಜವಾದ ಉಪಾಯಗಳು ಯಾವವು ಎಂಬ ಬಗ್ಗೆ ಅವು ಇನ್ನೂ ಯಾವ ನಿಶ್ಚಿತವಾದ ಮತವನ್ನೂ ಕೊಡಲಾರವು. ಅರ್ಥಾತ್ ಈ ವಿಷಯುಗಳ ಬಗ್ಗೆ ಅವರ ತತ್ವಜ್ಞಾನವು ಇನ್ನೂ ಅಪೂರ್ಣ ದೆಶೆಯಲ್ಲಿಯೇ ಇರುತ್ತವೆ. ವಿಷಯ–ವಿಷಯಿಗಳ ದ್ವಂದ್ವದಲ್ಲಿ ವಿಷಯಿಯೇ ಹೆಚ್ಚು ಮಹತ್ವದವನಾಗಿದ್ದು ಭೌತಿಕ ಶಾಸ್ತ್ರಗಳಿಂದುಂಟುಮಾಡಿದ ವಿಷಯಸಂಗ್ರಹಗಳನ್ನು ವಿಷಸಂಗ್ರಹಗಳನ್ನಾಗಿ ಮಾಡಲಿಕ್ಕೆ ಈ ವಿಚಕ್ಷಣನಾದ ವಿಷಯಿಗೆ ಬಹಳ ಕಾಲ ಹಿಡಿಯುವದಿಲ್ಲ. ವಿಷಯ ಸಂಗ್ರಹವನ್ನು ಮತ್ತು ಮನುಷ್ಯನ ಸಮಾಜವನ್ನು ವಿಶಿಷ್ಟಪ್ರಕಾರ ರಚನೆ ಮಾಡುವದರಿಂದ ಸಮಾಜಸ್ವಾಸ್ಥ್ಯವು ಉಂಟಾಗಬಹುದೆಂದು ಮಾಡಿದ ಪಾಶ್ಚಾತ್ಯ ಶಾಸ್ತ್ರಜ್ಞರ ಎಲ್ಲ ಮನೋರಾಜ್ಯಗಳೂ, ಆ ಪ್ರಕಾರ ಅವರು ಮಾಡಿದ ಎಲ್ಲ ಪ್ರಯತ್ನಗಳೂ ಅಂತ್ಯದಲ್ಲಿ ನಿಷ್ಫಲವಾದ ಅನುಭವವು ಅವರಿಗೆ ಬಂದಿದೆ ಅವರ ವಿಚಾರಸರಣಿಯನ್ನು ಅನುಸರಿಸಿದ ಎಲ್ಲ ರಾಷ್ಟ್ರಗಳಲ್ಲಿ ಇನ್ನೂವರೆಗಾದರೂ ಅಸಮಾಧಾನ, ಬಡಿದಾಟ, ಜಾತಿಕಲಹ, ವರ್ಗಕಲಹಗಳೇ ಹೆಚ್ಚಾಗುತ್ತ ನಡೆದದ್ದು ಅನುಭವಸಿದ್ಧವಾದ ಮಾತಾಗಿದೆ. ಯಾಕಂದರೆ, ಅವರು ಮನುಷ್ಯಪ್ರಾಣಿಯ ಬಗ್ಗೆ ಮಾಡಿದ ವಿಚಾರವು ಇನ್ನೂ ಅಪೂರ್ಣ ಸ್ಥಿತಿಯಲ್ಲಿಯೇ ಇರುತ್ತದೆ. ಆದರೆ, ಹಿಂದುಸ್ಥಾನದಲ್ಲಿಯ ನಮ್ಮ ಪೂರ್ವಜರಾದ ಆರ್ಯಋಷಿಗಳು ಈ ವಿಷಯವನ್ನು ಹೆಚ್ಚು

ಆಳವಾಗಿ ವಿಚಾರಮಾಡಿದ್ದಾರೆ ಈ ಅವರ ಅನುಭವಸಿದ್ಧವಾದ ವಿಚಾರವು ಆಧ್ಯಾತ್ಮಿಕ ತತ್ವಜ್ಞಾನದಲ್ಲಿ ಪರಿಣಮಿಸಿದೆ. ಮತ್ತು ಈ ತತ್ವಜ್ಞಾನವೇ ನಮ್ಮ ಎಲ್ಲ ಧರ್ಮಾಚರಣೆಯ ಅಡಿಗಲ್ಲಾಗಿದೆ. ಈ ಆಧ್ಯಾತ್ಮಿಕ ಶಾಸ್ತ್ರವು ಮನುಷ್ಯತ್ವದ ರಚನೆಯನ್ನು ಸಾಂಗವಾಗಿ ಊಹಾಪೋಹ ಮಾಡುತ್ತದೆ ಒಂದೆಡೆಯಲ್ಲಿ ಶ್ರೀ ಅರವಿಂದರು ಅನ್ನುವದೇನಂದರೆ "ಮನುಷ್ಯರಿಗೆ ತಾವು ಯಾರಿರುವೆವೆಂಬದು ತಿಳಿದಿರುವದಿಲ್ಲ ಅವರು ತಮ್ಮ ಅಸ್ತಿತ್ವದ ಅನೇಕ ವಿಭಾಗಗಳನ್ನು ವಿಂಗಡಿಸಿ, ಅದರಲ್ಲಿಯ ತಾರತಮ್ಯವನ್ನು ಅರಿಯಲಿಕ್ಕೆ ಇನ್ನೂ ಕಲಿತಿರುವದಿಲ್ಲ. ಅವರು ತಮ್ಮ ಬೇರೆ ಬೇರೆ ಭಾಗಗಳ ಒಂದು ಗಂಟನ್ನು ಮಾಡಿ ಅವೆಲ್ಲದಕ್ಕೂ ಅವಿವೇಕದಿಂದ ಮನಸ್ಸೆಂಬ ಹೆಸರನ್ನು ಕೊಡುತ್ತಾರೆ. ಯಾಕಂದರೆ, ಇವೆಲ್ಲವೂ ಕೂಡಿ ಒಂದಾದ ಬಾಹ್ಯ ಎಚ್ಚರಿಕೆ ಅಥವಾ ಹೊರಗಿನ ಜಾಗ್ರತ ಜ್ಞಾನದಿಂದಷ್ಟೇ ಜನರು ಇವೆಲ್ಲವು ಗಳನ್ನು ತಿಳಿಯುತ್ತಾರೆ, ಅನುಭವಿಸುತ್ತಾರೆ. ಅದ್ದರಿಂದ, ತಮ್ಮ ನಿಜವಾದ ಸ್ಥಿತಿ ಅಥವಾ ತಮ್ಮ ಎಲ್ಲ ಶಕ್ತಿ ಇವುಗಳ ಅರಿವು ಅವರಿಗಾಗುವದಿಲ್ಲ. ಕೆಲಮಟ್ಟಿಗೆ ಈ ಅರಿವು ಕೇವಲ ಹೊರಗಿನ ಭಾಗದ್ದಷ್ಟೇ ಆಗುತ್ತದೆ ನಮ್ಮ ಸ್ವಭಾವದಲ್ಲಿಯ ವಿವಿಧತೆಯ ಅರಿವನ್ನುಂಟು ಮಾಡುವದೇ, ನಮ್ಮ ಜೀವನವನ್ನು ನಡಿಸುತ್ತಿರುವ ಅನೇಕ ಶಕ್ತಿಗಳನ್ನು ಕಣ್ಣಾರೆ ಕಂಡು, ಅವುಗಳ ಮೇಲೆ ಆಧಿಪತ್ಯವನ್ನು ನಡೆಸುವ ಮತ್ತು ಮಾರ್ಗದರ್ಶನ ಮಾಡುವ ಜ್ಞಾನವನ್ನು ಸಂಪಾದಿಸುವದೇ ಯೋಗಶಾಸ್ತ್ರದ ಗುರಿಯಾಗಿರುತ್ತದೆ." ಶ್ರೀ ಅರವಿಂದರವರು ಇಲ್ಲಿ ಉಪಯೋಗಿಸಿದ ಯೋಗಶಾಸ್ತ್ರ ಈ ಶಬ್ದದ ಪರ್ಯಾಯವೇ ನಾವು ಮೇಲೆ ಉಪಯೋಗಿಸಿದ "ಅಧ್ಯಾತ್ಮಿಕ ತತ್ವಜ್ಞಾನ" ಈ ಶಬ್ದವಿರುತ್ತದೆ.

ಮನುಷ್ಯನ ನಿತ್ಯನೈಮಿತ್ತಿಕ ವ್ಯವಹಾರದಲ್ಲಿ ತತ್ವಜ್ಞಾನದ ಅವಶ್ಯಕತೆ ಯಿರುವದಿಲ್ಲವೆಂಬ ತಿಳುವಳಿಕೆಯು ತಪ್ಪು. ಇದರ ವಿರುದ್ಧವಾಗಿ ಪ್ರತಿ ಯೊಬ್ಬ ಮನುಷ್ಯನ ವ್ಯವಹಾರವು ಅವನು ಗ್ರಹಿಸಿದ ತತ್ವಜ್ಞಾನದ ಮೇಲೆಯೇ ಅವಲಂಬಿಸಿರುತ್ತದೆ. ಮನುಷ್ಯನ ತಾತ್ವಿಕ ವಿಚಾರವು ಆಳವಾಗುತ್ತ ನಡೆದಂತೆ, ಅವನ ವ್ಯಾವಹಾರಿಕ ಆಚರಣೆಯಲ್ಲಿಯೂ ಅಂತರವು ಕಂಡುಬರುತ್ತದೆ ಸ್ವತಃ ತಾನು, ತನ್ನ ಕುಟುಂಬ, ತನ್ನ

ನೆರೆಹೊರೆಯವರು, ತನ್ನ ರಾಷ್ಟ್ರ, ಅನ್ಯರಾಷ್ಟ್ರಗಳು, ತಾನು ವಾಸಿಸುತ್ತಿರುವ ಈ ಜಗತ್ತು, ಈ ಲೋಕ, ಪರಲೋಕಗಳು—ಇವೆಲ್ಲವುಗಳ ಬಗ್ಗೆ ಇರುವ ಯಾವನೊಬ್ಬನ ವಿಚಾರವೇ ಅವನ ತತ್ವಜ್ಞಾನವು. ವ್ಯಕ್ತಿಯು ಈ ಚರಾಚರ ಸೃಷ್ಟಿಯ ಒಂದು ಭಾಗವೇ ಇದ್ದು, ಅವನು ಈ ಸೃಷ್ಟಿಯ ಬಗ್ಗೆ ಮಾಡಿಕೊಂಡ ಕಲ್ಪನೆಗಳ ಅಥವಾ ವಿಚಾರಗಳ ಮೇಲೆಯೇ ಅವನ ಈ ಜಗತ್ತಿನಲ್ಲಿಯ ವ್ಯವಹಾರವು ಅವಲಂಬಿಸಿರಬೇಕೆಂಬದು ಸ್ಪಷ್ಟವಿದೆ. ಆದರೆ ಯಾವದೊಂದು ವ್ಯಕ್ತಿಯ ಈ ಜಗತ್ತಿನ ಅನುಭವವು ಬೆಳೆದಂತೆ ಅವನ ವಿಚಾರದಲ್ಲಿಯೂ ಬೆಳವಣಿಗೆಯು ಆಗಲಿಕ್ಕೇ ಬೇಕು. ಉದಾಹರಣಾರ್ಥವಾಗಿ, ಈ ಜಗತ್ತಿನ ಅನುಭವವಿಲ್ಲದ ವ್ಯಕ್ತಿಯು ಪ್ರಥಮದಲ್ಲಿ, ತನ್ನ ವ್ಯಕ್ತಿಗತ ಸಂಕುಚಿತ ಸ್ವಾರ್ಥ ಮತ್ತು ಸುಖಗಳಷ್ಟೇ ಜಗತ್ತಿನಲ್ಲಿ ಸಂಪಾದಿಸತಕ್ಕ ಗುರಿಯೆಂದು ತಿಳಿದುಕೊಳ್ಳುತ್ತಾನೆ. ಇಂಥ ಮನುಷ್ಯನು ಅನ್ಯರ ಸುಖದ ಕಡೆಗೆ ನೋಡಲಾರನು. ಅದನ್ನು ಸಾಧಿಸಲಿಕ್ಕೆ ಪರಹಿತದ ಘಾತವಾಗುತ್ತಿದ್ದರೂ ಅದರ ಕಡೆಗೆ ಅವನ ಲಕ್ಷ್ಯವಿರುವದಿಲ್ಲ. ಯಾಕಂದರೆ, ಅವನ ಸಂಕುಚಿತವಾದ ಸ್ವಾರ್ಥಬುದ್ಧಿಗೆ ಅದನ್ನು ಯಾವ ಪ್ರಕಾರದಿಂದಾದರೂ ( ಯೇನ ಕೇನ ಪ್ರಕಾರೇಣ ) ಸಂಪಾದಿಸುವದೇ ತರ್ಕಶುದ್ಧವಾದ ವಿಚಾರವೆನಿಸುತ್ತದೆ. ಆದ್ದರಿಂದ ಪರಹಿತದ ಘಾತಮಾಡುವದು ಅವನ ನೀತಿಯ ಹೊರಗಿನ ಕೆಲಸವಾಗಲಾರದು. ಆದರೆ ಹೆಚ್ಚು ಅನುಭವದಿಂದ ಅವನ ಈ ಸಂಕುಚಿತ ಹಿತವು, ತನ್ನ ಆಪ್ತೇಷ್ಟರ, ನೆರೆಹೊರೆಯವರ, ಹಿತವನ್ನು ನಾಶಗೊಳಿಸುವದರಿಂದ ಆಗಲಾರದೆಂದು ಅವನು ಕಂಡುಹಿಡಿಯುವನು ಈ ಜ್ಞಾನವು ನಿಶ್ಚಿತವಾದನಂತರ, ಅವನು ತನ್ನ ಹಿತಕ್ಕೆ ಅಡ್ಡಬರುವ ಪರರ ಅಹಿತವನ್ನು ಬಯಸುವದಿಲ್ಲ. ಆದರೆ ಹೆರವನು ದುರ್ಬಲನಿದ್ದು, ಅವನ ಅಹಿತದಿಂದ ಅಥವಾ ಅವನ ಹಿತವನ್ನು ದುರ್ಲಕ್ಷಿಸುವದರಿಂದ, ತನ್ನ ಹಿತವಾಗುವದೆಂದು ಕಂಡುಬಂದರೆ, ಅವನು ಆ ಪ್ರಕಾರ ವರ್ತಿಸಲಿಕ್ಕೆ ಹಿಂದೆಮುಂದೆ ನೋಡಲಾರನು. ಇದಕ್ಕೂ ಹೆಚ್ಚಿನ ಅನುಭವವನ್ನು ಪಡೆದ, ಮನುಷ್ಯನಿಗೆ ತನ್ನ ಈ ಪ್ರಕಾರದ ವರ್ತನದಿಂದ ಹೆರವರು ಸಂಘಶಕ್ತಿಯಿಂದ ಬಲಸಂಪಾದನೆ ಮಾಡಿ ತನ್ನ ವಿಘಾತಕ್ಕೆ ಎಳೆಸುವರೆಂದೂ, ಅವರ ಹಿತದ ಕಡೆಗೇ ಕೆಲಮಟ್ಟಿಗೆ ನೋಡುವದರಿಂದ

ತನ್ನ ಹಿತವೂ ಸಾಧಿಸುವದೆಂದೂ ತಿಳಿದುಬರವದು. ಮತ್ತು ಅವನ ವಿಚಾರದಲ್ಲಿ ಆ ಪ್ರಕಾರ ಪರಿವರ್ತನವುಂಟಾಗುತ್ತದೆ. ಹೀಗೆ ತನ್ನ ಹಿತದ ನಾಶವಾಗುವ ಹೆದರಿಕೆಯಿಂದಾಗಲಿ ಅಥವಾ ತನ್ನ ಹಿತಸಾಧನೆಯ ಉಪಾಯವೆಂದಾಗಲಿ, ಅವನು ಎರಡನೆಯವರ ಹಿತವನ್ನು ಸಾಧಿಸುತ್ತಾನೆ. ಆದರೆ, ತನ್ನ ಹಿತವು ಎರಡನೆಯವರ ಅಹಿತದಿಂದ ಸಾಧಿಸುತ್ತಿದ್ದಲ್ಲಿ ಮತ್ತು ಈ ಅಹಿತವನ್ನು ಮಾಡುವದರಿಂದ ತನ್ನ ಹಿತವು ನಾಶವಾಗುವದಿಲ್ಲವೆಂದು ಮನುಷ್ಯನ ದೃಷ್ಟಿಯು ಎಲ್ಲಿಯವರೆಗೆ ಹರಿಯುವದೋ ಅಲ್ಲಿಯವರೆಗೆ ವಿಚಾರಮಾಡಿ ಕಂಡುಬಂದಲ್ಲಿ, ಅವನು ಈ ಅಹಿತ ಕೃತ್ಯವನ್ನು ಮಾಡುವದಕ್ಕೆ ಹಿಂಜರಿಯನು. ಇದು ಅವನ ಮಟ್ಟಿಗೆ ತರ್ಕಶುದ್ಧವಾದ ವಿಚಾರವೇ ಸರಿ. ಭೌತಿಕ ಹಿತಾಹಿತದ ಗುರಿಯನ್ನಷ್ಟೇ ಇಟ್ಟುಕೊಂಡ ವ್ಯಕ್ತಿಯ ವಿಚಾರವು ಇದಕ್ಕೂ ಮುಂದೆ ಹೋಗಲಾರದು. ಇಂಥ ಸಮಾಜದ ಗುರಿಯು ಹೆಚ್ಚು ಜನರಿಗೆ ಹೆಚ್ಚು ಸುಖವನ್ನುಂಟುಮಾಡುವ ಸಮಾಜರಚನೆಯಾಗುತ್ತದೆ ಭೌತಿಕ ಸುಖಪ್ರಧಾನ ಸಮಾಜ ಅಥವಾ ರಾಷ್ಟ್ರದಲ್ಲಿಯ ಸಮಾಜ ರಚನೆಯು ಈ ನಿಯಮಗಳಿಗನುಸರಿಸಿಯೇ ಇರತಕ್ಕದ್ದು. ಎಲ್ಲ ಸಾಮಾಜಿಕ ಕಟ್ಟಳೆಗಳೂ, ನೀತಿಯೂ, ಧರ್ಮವೂ ಈ ಸುಖವನ್ನು ಹೆಚ್ಚಿಸುವ ಕಡೆಗೇ ನೋಡುವವು ಇಂಥ ರಾಷ್ಟ್ರಗಳಲ್ಲಿಯ ತತ್ವಜ್ಞಾನ, ಶಿಕ್ಷಣಪದ್ಧತಿ, ಕಲಕೌಶಲ್ಯ, ಕಾವ್ಯಪ್ರಬಂಧ ಶಾಸ್ತ್ರಾದಿಗಳು ಈ ಸುಖದ ಮಹತ್ವವನ್ನೇ ಸತತ ವರ್ಣಿಸಿ ಅದನ್ನು ಬೆಳೆಸುವ ಕಡೆಗೇ ಅವು ಲಕ್ಷ್ಯ ಕೊಡುತ್ತವೆ ಭೌತಿಕ ಸುಖದ ವಿಕಾಸವೇ ಇವೆಲ್ಲವುಗಳ ಗುರಿಯಾಗಿರುತ್ತದೆ.

ಆದರೆ ಇಂಥ ಸಮಾಜದಲ್ಲಿಯ ಸುಖಸಾಧನೆಗಳು ಕೆಲಮಟ್ಟಿಗೆ ಬೆಳೆದಾಗ್ಯೂ, ಅದರಲ್ಲಿ ಸಮಾಜ ವಿಘಾತಕವಾದ ಮನೋವೃತ್ತಿಯನ್ನು ತಡೆಹಿಡಿಯುವ ಸಾಮರ್ಥ್ಯವು ಇರುವದಿಲ್ಲ. ಯಾಕೆಂದರೆ, ತನ್ನ ಹಿತವು ಎರಡನೆಯವರ ಅಹಿತವನ್ನು ಬಗೆಯುವದರಿಂದಲೇ ಸಾಧಿಸುತ್ತಿದ್ದರೆ, ಅದನ್ನು ಯಾಕೆ ಮಾಡಬಾರದು ಎಂಬ ಮೂಲಭೂತವಾದ ಪ್ರಶ್ನೆಗೆ ಯಥಾಯೋಗ್ಯ ಉತ್ತರವು ಈ ತತ್ವಜ್ಞಾನದಲ್ಲಿ ಇರುವದಿಲ್ಲ. ಆದ್ದರಿಂದ ಇಂಥ ಸಮಾಜಗಳಲ್ಲಿಯ ವ್ಯಕ್ತಿಗಳ ನಿಜವಾದ ಸುಖಸಮಾಧಾನಗಳು ಪರಿಮಿತವಾದವೂ, ಎಲ್ಲ ಜೀವಿತದ ಆಕಾಂಕ್ಷೆಗಳನ್ನು ಪೂರೈಸಲಿಕ್ಕೆ ಅಸಮರ್ಥ

ವಾದವೂ ಆಗುತ್ತವೆ. ವ್ಯಕ್ತಿಯ ಮತ್ತು ರಾಷ್ಟ್ರದ ಹೆಗ್ಗುರಿಯಾದ ಆತ್ಯಂತಿಕ ಸುಖವನ್ನು ಸಂಪಾದಿಸಲಿಕ್ಕೆ ಈ ಸಮಾಜರಚನೆಯಲ್ಲಿಯ ಶಕ್ತಿಯು ಸಾಕಾಗದು. ಆದ್ದರಿಂದ ಈ ಸಮಾಜದಲ್ಲಿಯ ಅಸಮಾಧಾನವು ಎಂದೂ ನಷ್ಟವಾಗುವದಿಲ್ಲ. ಈಗ ಪಾಶ್ಚಿಮಾತ್ಯ ದೇಶಗಳಲ್ಲಿ ಕಂಡುಬರುವ ಮತ್ತು ಅವರ ಅನುಕರಣದಿಂದ ನಮ್ಮ ಆರ್ಯ ಭೂಮಿಯಲ್ಲಿಯೂ ಉಂಟಾಗುವ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಘಟನೆಗಳಲ್ಲಿ ಈ ಪ್ರಕಾರದ ಅಸಮಾಧಾನವೇ ಹಬ್ಬಿರುವದು. ಕೇವಲ ಐಹಿಕ ಸುಖಕ್ಕೆಳೆಸಿದ ವ್ಯಕ್ತಿಗಳಿಂದ ಕೂಡಿದ ಸಮಾಜದಲ್ಲಿ ಯಾವ ವ್ಯವಸ್ಥೆ ಇದ್ದರೂ, ಅದು ಆ ಸಮಾಜದ ಅಥವಾ ರಾಷ್ಟ್ರದ ಸಮಾಧಾನಕ್ಕೆ ಕಾರಣವಾಗಲಾರದು. ಮತ್ತು ಈ ಮೂಲಭೂತ ತತ್ವವನ್ನರಿಯದ ಸಮಾಜದ ಧುರೀಣರು ಸಮಾಜದ ಬೇರೆ ಬೇರೆ ಅಂಗಗಳಾದ ವರ್ಗ ಅಥವಾ ಜಾತಿಗಳಲ್ಲಿಯ ಯಾವದಾದರೊಂದು ವಿಶಿಷ್ಟವರ್ಗ ಅಥವಾ ಜಾತಿಗಳ ಅಸ್ತಿತ್ವವೇ ಈ ಅಸಮಾಧಾನಕ್ಕೆ ಕಾರಣವೆಂಬ ತಪ್ಪುತಿಳುವಳಿಕೆಯಿಂದ ಸಮಾಜದಲ್ಲಿ ಅಂತಃಕಲಹಕ್ಕೆ ಪ್ರಚೋದನೆಯನ್ನುಂಟುಮಾಡುವರು. ರಾಷ್ಟ್ರರೂಪೀ ವಿರಾಟ್‌ಪುರುಷನ ಬೇರೆ ಬೇರೆ ಅಂಗಗಳಾದ ವರ್ಗ ಅಥವಾ ಜಾತಿಗಳಲ್ಲಿ ಕೆಲವುಸಾರೆ, ಕೆಲವು ಪರಿಸ್ಥಿತಿಗಳಲ್ಲಿ ಬಾಹ್ಯತಃ ವಿರೋಧವು ಕಂಡುಬಂದಾಗ್ಯೂ ಅವೆಲ್ಲವುಗಳಲ್ಲಿ ನಿಸರ್ಗತಃ ಸುಸಂಗತ ರಚನೆಯು ಇದ್ದೇ ಇರುತ್ತದೆ. ಅವೆಲ್ಲ ಭಾಗಗಳು ಕೂಡಿಯೇ ಆ ರಾಷ್ಟ್ರಪುರುಷನ ಏಕತ್ವವು ಸಂಭವಿಸುತ್ತದೆ ಈ ಏಕತ್ವದ ಗುಟ್ಟನ್ನರಿಯದೆ, ಬಾಹ್ಯಭೇದಗಳನ್ನು ಮುರಿಯುವ ಕಟ್ಟಳೆಗಳಿಂದ ಸಾಮಾಜಿಕ ಕ್ಷೋಭವು ಹೆಚ್ಚಾಗುವದೆಂಬ ಅನುಭವವು ಸುಜ್ಞರಾದ ಕುಯುಜೀ ಪಂಡಿತರಿಗೆ ಬಂದಿರಬಹುದು. ಸೃಷ್ಟಿಯ ರಚನೆಯಲ್ಲಿ ಹೇಗೆ ಗೂಢವಾದ ಏಕತ್ವವು ನಿಸರ್ಗಸಿದ್ಧವಾಗಿರುವದೋ, ಹಾಗೆಯೇ ಬಾಹ್ಯ ಅನೇಕತ್ವವೂ ನಿಸರ್ಗಸಿದ್ಧವಾದದ್ದೇ ಇದೆ ಈ ಅನೇಕತ್ವದಲ್ಲಿ ಯಾವನು ಏಕತ್ವವನ್ನು ಕಾಣುವನೋ ಅವನೇ ನಿಜವಾದ ಜ್ಞಾನಿಯು (ಭ ಗೀ. ೧೩-೨೦) ನಿಸರ್ಗದ ಕೇವಲ ಅನೇಕತ್ವದ ಅರಿವು ಯಾವನಿಗಿರುವದೋ, ಅವನ ಜ್ಞಾನವು ರಾಜಸೀ ಜ್ಞಾನವೆಂದೂ ಸ್ಥೂಲ ನಿಸರ್ಗದ ಅನೇಕತ್ವವನ್ನು ನಷ್ಟಮಾಡಿ ಯಾವನು ಬಾಹ್ಯ ಏಕತ್ವವನ್ನು ರಚಿಸಲಿಕ್ಕೆ ಹವಣಿಸು

ವನೋ ಅವನ ಜ್ಞಾನವು ತಾಮಸೀ ಜ್ಞಾನವೆಂದೂ, ವಿಭಕ್ತವಾದ ನಾನಾ ಭೂತಗಳಲ್ಲಿ ಏಕತ್ವವನ್ನು ಕಾಣುವದೇ ಸಾತ್ವಿಕ ಜ್ಞಾನವೆಂದೂ ಗೀತೆಯಲ್ಲಿ ಹೇಳಲಾಗಿದೆ (ಭ. ಗೀ. ೧೮ ಶ್ಲೋ. ೨೦-೨೨) ಸಮತೆ ಮತ್ತು ವಿಷಮತೆಯ ರಹಸ್ಯವನ್ನು ಅರಿಯಲಿಕ್ಕೆ ಆರ್ಯ ತತ್ವಜ್ಞರಿಗೇ ಶರಣು ಹೋಗಬೇಕು. ಇರಲಿ.

ಮೇಲೆ ವರ್ಣಿಸಿದ ರಾಜಸೀ ಮತ್ತು ತಾಮಸೀ ಜ್ಞಾನದಿಂದ ರಾಷ್ಟ್ರದಲ್ಲಿಯು ವ್ಯಕ್ತಿಗಳಲ್ಲಿ ಕಾಮಾತ್ಮತೆಯು ಬೆಳೆಯುತ್ತ ಹೋಗುತ್ತದೆ. ( कामात्मता न प्रशस्ता न चैवेहास्त्यकामता — मनु २२ ) ಕರ್ತವ್ಯ ಅಥವಾ ಧರ್ಮಪ್ರವಣತೆಯು ಕಡಿಮೆಯಾಗಿ ಕೇವಲ ಅದರ ಫಲದ ಕಡೆಗೇ ಅಂದರೆ ಸುಖದ ಕಡೆಗೇ—ದೃಷ್ಟಿಯು ಬೆಳೆಯುತ್ತ ಹೋದಂತೆ ಕಾಮ ಕ್ರೋಧಾದಿ ಸಮಾಜ ವಿಘಾತಕವಾದ ವೃತ್ತಿಗಳು ಹೆಚ್ಚುತ್ತ ನಡೆಯುತ್ತವೆ. ಈ ವಿಕಾರಗಳ ಬೀಜವು ಐಹಿಕ ಸುಖಪ್ರಧಾನ ಸಮಾಜರಚನೆಯಲ್ಲಿಯೇ ಇದ್ದು, ಇದನ್ನು ತ್ಯಜಿಸಿದ ಹೊರತು, ಸಮಾಜದ ಬೇರೆ ಬೇರೆ ಅಂಗಗಳಲ್ಲಿಯ ವಿಸಂಗತಿಯು ಇಲ್ಲದಂತಾಗಿ, ಸುಸಂಗತಿಯು ಉಂಟಾಗಲಾರದು. ಯಾಕಂದರೆ, ಐಹಿಕ ಸುಖವು ಕರ್ತವ್ಯದಕ್ಷತೆ-ಅಥವಾ ಧರ್ಮಾಚರಣೆಯ ಫಲವಾಗಿದ್ದು, ಅದೇ ಮನುಷ್ಯನ ಜೀವಿತದ ಗುರಿಯಾಗಲಾರದು. ಐಹಿಕ ಸುಖವೇ ಮನುಷ್ಯವ್ಯಕ್ತಿಯ ಅಥವಾ ಸಮಾಜದ ಗುರಿಯಾದಲ್ಲಿ ಸಮಾಜಕ್ಕೆ ವಿಘಾತವನ್ನುಂಟುಮಾಡುವ ಆಚರಣೆಗಳಿಂದ ವ್ಯಕ್ತಿಯು ಅದನ್ನು ಯಾಕೆ ಸಂಪಾದಿಸಬಾರದು ಎಂಬ ನೀತಿಯ ಮೂಲಭೂತವಾದ ಪ್ರಶ್ನೆಗೆ ಉತ್ತರವು ದೊರೆಯುವದಿಲ್ಲ ಭೌತಿಕ ತತ್ವಜ್ಞಾನದಲ್ಲಿಯ ವ್ಯಕ್ತಿ ಮತ್ತು ಸಮಾಜ ಇವುಗಳಲ್ಲಿಯ ಈ ಪ್ರಕಾರದ, ಒಂದಕ್ಕೊಂದು ವಿರದ್ಧವಾದ ತತ್ವಗಳಿಂದ ಸಮಾಜದಲ್ಲಿ ಶಾಂತಿಯು ಉಂಟಾಗುವದಿಲ್ಲ. ತತ್ವತಃ ಈ ವಿರೋಧವು ಈ ಪ್ರಕಾರದ ಸಮಾಜರಚನೆಯಲ್ಲಿಯೇ ಇದ್ದಾಗ್ಯೂ ಅದು ಸ್ಥೂಲದೃಷ್ಟಿಗೆ ಯಾವದಾದರೊಂದು ಸಮಾಜದ ಅಂಗದಲ್ಲಿ ಇದ್ದಂತೆ ಭಾಸಮಾನವಾಗುತ್ತದೆ. ಅದ್ದರಿಂದ ಸಮಾಜದಲ್ಲಿ ನಿಸರ್ಗತಃ ಉಂಟಾದ ಸಮಾಜರಚನೆಯು ಅಯೋಗ್ಯವಾದವ್ದೆಂದು ತಿಳಿದು ಮನುಷ್ಯನು ತನ್ನ ಬುದ್ಧಿಯ ಬಲದಮೇಲೆ

ಹೊಸಹೊಸ ಪ್ರಕಾರಗಳ ಸಮಾಜರಚನೆಯನ್ನು ಕಲ್ಪಿಸಿ ಅದನ್ನು ಸಮಾಜದ ಮೇಲೆ ಹೊರಿಸುತ್ತಾನ. ರಾಜಪ್ರಧಾನ ( **Monarchical** ) ರಾಜ್ಯ-ಪದ್ಧತಿಯಿಂದ, ಅಸಂತುಷ್ಟನಾದವನು, ಸಭಾಪ್ರಧಾನ ( **Parliamentary** ) ಪದ್ಧತಿಯಲ್ಲಿ ಸಮಾಧಾನವು ಸಿಗಬಹುದೆಂದೂ ; ಇಲ್ಲಿ ದುಃಖಿಯಾದವನು, ಪ್ರಜಾಪ್ರಧಾನ ( **Republic** ) ಪದ್ಧತಿಯಲ್ಲಿ ಶಾಂತಿಯು ಸಿಗಬಹುದೆಂದೂ ; ಇಲ್ಲಿಯೂ ಅಸಮಾಧಾನವನ್ನು ಹೊಂದಿ, ಸುಖವು ಸಮತಾಪ್ರಧಾನ ( **Socialistic** ) ಪದ್ಧತಿಯಲ್ಲಿ ಉಂಟಾಗಬಹುದೆಂದೂ ಅವನು ಕಲ್ಪಿಸುತ್ತಾನೆ ಇದೇ ಪ್ರಕಾರ ಆರ್ಥಿಕ ಭೂಮಿಕೆಯಲ್ಲಿಯೂ, ಜಮೀನದಾರ–ಕುಳ, ಭಾಂಡವಾಳದಾರ–ಮಜೂರ, ಅಧಿಕಾರಿ–ನೌಕರ ಮುಂತಾದ ದ್ವಂದ್ವಗಳಲ್ಲಿಯು ಅಸಮಾಧಾನದಿಂದ ಸಮಾಜದಲ್ಲಿ ಕಲಹಗಳು ಉಂಟಾಗಿ, ಕುದಿಯುವ ನೀರಿನಂತೆ, ಅದರಲ್ಲಿ ಅಸ್ಥಿರತೆಯು ಬೆಳೆಯುತ್ತ ಹೋಗುತ್ತದೆ. ಈ ಸಮಾಜರಚನೆಗಳಲ್ಲಿಯು ಪಾಶ್ಚಾತ್ಯ ಪಂಡಿತರ ತತ್ವಜ್ಞಾನದ ವಿಚಾರವನ್ನು ಇಲ್ಲಿ ಸಾಂಗವಾಗಿ ಮಾಡುವದು ಶಕ್ಯವಿಲ್ಲ. ಆದರೆ, ಸಾಮಾಜಿಕ ಅಸಮಾಧಾನಕ್ಕೆ ಮೂಲಭೂತವಾದ ಕಾರಣವೇನೆಂಬ ಬಗ್ಗೆ ಇಲ್ಲಿ ವಿಚಾರವನ್ನು ಮಾಡಿದ್ದೇವೆ.

ಆದರೆ, ವೈಯಕ್ತಿಕ ಅಥವಾ ಸಾಮಾಜಿಕ ಸುಖದ ವಿಚಾರ-ಮಾಡುವ ಮತ್ತೊಂದು ತರವಿದೆ, ಅದು ಹೆಚ್ಚು ಮೂಲಗ್ರಾಹಿಯಾದ ಶಾಸ್ತ್ರೀಯ ವಿಚಾರವು. ಈ ಭೌತಿಕ ಸುಖದ ಅನುಭವವನ್ನು ಪಡೆಯುತ್ತಿದ್ದ ವ್ಯಕ್ತಿಯು ಆ ಸುಖದ ಶಾಸ್ತ್ರೀಯ ವಿಶ್ಲೇಷಣೆ ಅಥವಾ ಪೃಥಕ್ಕರಣವನ್ನು ಮಾಡುವನು. ಈ ಸುಖವು ತನಗೆ ಇಷ್ಟವಿದ್ದ ವಿಷಯುಗಳ ಇಂದ್ರಿಯ ಸಂಯೋಗದಿಂದ ಮತ್ತು ದುಃಖವು ಅನಿಷ್ಟ ವಿಷಯುಗಳ ಇಂದ್ರಿಯ ಸಂಯೋಗದಿಂದಾಗಲಿ, ಅಥವಾ ಇಷ್ಟವಿಷಯುಗಳ ವಿಯೋಗದಿಂದಾಗಲಿ ಆಗುವದೆಂದು ಕಂಡುಹಿಡಿಯುವನು. ಈ ಇಷ್ಟವಸ್ತುಗಳ ಸ್ವರೂಪವು ಸ್ವಭಾವತಃ ನಾಶವುಳ್ಳದ್ದು ಇರುವ ಕಾರಣ ಈ ಸುಖವು ಆ ವಸ್ತುವಿನ ವಿಯೋಗದಿಂದ ಒಮ್ಮಿಲ್ಲೊಮ್ಮೆ ನಷ್ಟವಾಗಿ ದುಃಖದಲ್ಲಿ ಪರಿಣಮಿಸುವದು ನಿಶ್ಚಿತ ಮತ್ತು ಆ ಇಷ್ಟ ವಸ್ತುವನ್ನು ಉಂಟುಮಾಡುವಲ್ಲಿ, ಅದನ್ನು ರಕ್ಷಣೆ

ಮಾಡುವಲ್ಲಿ ಪುನಃ ಕಷ್ಟವು ಬೇಕೇ ಬೇಕು ಆದ್ದರಿಂದ ಈ ವಿಷಯಗಳಿಂದುಂಟಾಗುವ ಕ್ಷಣಿಕ ಸುಖವು ಕಷ್ಟತರವಾದದ್ದೆಂದು ಅವನ ವಿವೇಕಯುಕ್ತ ಬುದ್ಧಿಯಲ್ಲಿ ಹೊಳೆಯುವದು. ಆದರೆ ಮನುಷ್ಯನ ಸುಖದ ಆಶೆಯು ಮಾತ್ರ ಇಷ್ಟರಿಂದಲೇ ಇಲ್ಲದಂತಾಗುವದಿಲ್ಲ. ಆದ್ದರಿಂದ ಅವನು ಪುನಃ ಈ ಸುಖದ ನಿಜವಾದ ಸ್ವರೂಪವು ಯಾವ ಪ್ರಕಾರದ್ದು ಎಂಬ ಬಗ್ಗೆ ವಿಚಾರ ಮಾಡುವನು. ಸುಖದ ಸಂವೇದನೆಯು ಉಂಟಾಗಬೇಕಾದರೆ ಅದರಲ್ಲಿ ಮೂರು ಹೇತುಗಳು ಇರುತ್ತವೆ ಈ ಸುಖದ ಅನುಭವವನ್ನು ಪಡೆಯುತ್ತಿದ್ದ 'ಭೋಕ್ತಾ' ಅಥವಾ 'ವಿಷಯಿ'; ಎರಡನೆಯದು 'ಭೋಗ್ಯವಸ್ತು' ಅಥವಾ 'ವಿಷಯ'; ಮತ್ತು ಮೂರನೆಯದು ಭೋಗಾರ್ಹವಾದ ಕೇವಲ ಸುಖ. ಈ ಸುಖವು ಕೇವಲ ವಸ್ತುಗಳಲ್ಲಿದ್ದರೆ, ಎಲ್ಲರಿಗೂ ಎಲ್ಲ ಕಾಲದಲ್ಲಿಯೂ ಆ ವಸ್ತುವಿನಿಂದ ಸುಖವು ಉಂಟಾಗಬೇಕಾಗಿತ್ತು. ಆದರೆ ಈ ಪ್ರಕಾರದ ಅನುಭವವು ಕಂಡುಬರುವದಿಲ್ಲ. ಒಬ್ಬನಿಗೆ ಸುಖಕಾರಕವಾದ ವಸ್ತುವು ಮತ್ತೊಬ್ಬನಿಗೆ ದುಃಖವನ್ನುಂಟು ಮಾಡುವದು. ಒಬ್ಬನ ಆಹಾರವು ಮತ್ತೊಬ್ಬನ ವಿಷವೆಂಬ ನಾಣ್ಣುಡಿಯೇ ಇರುತ್ತದೆ. ಅಥವಾ ಅದೇ ವಸ್ತುವು ಒಂದೇ ವ್ಯಕ್ತಿಗೆ ಒಂದು ಕಾಲಕ್ಕೆ ಸುಖಕರವಾಗಿಯೂ ಮತ್ತೊಂದು ಕಾಲಕ್ಕೆ ದುಃಖಕರವಾಗಿಯೂ ಕಾಣುತ್ತದೆ. ಅಂದಮೇಲೆ, ಆ ಸುಖವು ವಸ್ತುವಿನಲ್ಲಿರದೆ ಅದೊಂದು ಭೋಗಲೋಲುಪನಾದ ವ್ಯಕ್ತಿಯ ಮನಸ್ಸಿನ ಸ್ಥಿತಿಯೆಂದು ಕಂಡುಬರಬಹುದು ಆದ್ದರಿಂದ ಈ ಸುಖವು ಆ ವ್ಯಕ್ತಿಯ ಮನಸ್ಸಿನಲ್ಲಿಯೇ ಇದ್ದು ವಿಷಯ ಭೂತವಾದ ವಸ್ತುವಿನಲ್ಲಿಲ್ಲವೆಂಬ ಮಾತನ್ನು ಮನಗಾಣಬಹುದು ತನ್ನ ಮನಸ್ಸಿನಲ್ಲಿಯೇ ಈ ಸುಖವು ಇದ್ದ ಪಕ್ಷಕ್ಕೆ, ಈ ಇಷ್ಟವಾದ ಸುಖವು ಸರ್ವಕಾಲವೂ ಯಾಕೆ ಇರಬಾರದು ಎಂಬ ಸಂಶಯವು ಅವನಲ್ಲಿ ಉಂಟಾಗುತ್ತದೆ. ಮುಂದೆ ಅವನು ತನ್ನ ವ್ಯಕ್ತಿತ್ವದ ವಿಶ್ಲೇಷಣೆಯನ್ನೇ ತನ್ನ ಸೂಕ್ಷ್ಮ ಬುದ್ಧಿಯಿಂದ ಮಾಡಹತ್ತುತ್ತಾನೆ. ಇಲ್ಲಿಂದ ಧರ್ಮಕ್ಕೆ ಆರಂಭವಾಗುತ್ತದೆ. ಮತ್ತು ನಾವು ಹಿಂದೆ ಹೇಳಿದ (ಪಾ. ೧೬) ಅರವಿಂದರ ವಚನದಂತೆ ತಾನು ಯಾರೆಂಬ ಪ್ರಶ್ನೆಯು ಪೂರ್ಣ ಸಮಾಧಾನವಾಗುವವರೆಗೆ, ಈ ತನ್ನತನವ ಬೇರೆ ಬೇರೆ ಭಾಗಗಳ ಸಂಶೋಧನೆಯನ್ನು ಅವನು ಮಾಡುತ್ತಾನೆ. ಈ ಸಂಶೋಧನೆಯಲ್ಲಿ

ಅವನಿಗೆ ತನ್ನ ನಿತ್ಯ ಸುಖಸ್ವರೂಪವಾದ ಆತ್ಮನ ಜಾಗ್ರತ ಅರಿವು, ಸದ್ಗುರುವಿನ ಮಾರ್ಗದರ್ಶನದಿಂದ, ಉಂಟಾಗುತ್ತದೆ. ಈ ಅರಿವು ಉಂಟಾದ ಮನುಷ್ಯನಿಗೆ ಸಿದ್ಧಪುರುಷನೆಂದೂ, ಸ್ಥಿತಪ್ರಜ್ಞನೆಂದೂ, ಬ್ರಹ್ಮಜ್ಞಾನಿಯೆಂದೂ, ಮುಕ್ತನೆಂದೂ ಅನೇಕ ಹೆಸರುಗಳುಂಟು ಈ ಸ್ಥಿತಿಯನ್ನು ಮುಟ್ಟುವದೇ ಮನುಷ್ಯವ್ಯಕ್ತಿಯ ಅಥವಾ ಜನಾಂಗದ ಅಂತಿಮ ಗುರಿಯು. ಮತ್ತು ಈ ಗುರಿಯನ್ನು ಮುಟ್ಟಿಸುವ ಮಾರ್ಗವೇ ಧರ್ಮವು

ಆದರೆ ಈ ದೇಹವು ಜೀವಂತ ಇರುವ ವರೆಗೆ, ಮುಮುಕ್ಷುವಿಗಾಗಲಿ, ಮುಕ್ತನಿಗಾಗಲಿ, ಅನ್ನವಾಸ ವಸ್ತ್ರಾದಿಗಳ ಅವಶ್ಯಕತೆ ಇದ್ದೇ ಇರುತ್ತದೆ ಆದ್ದರಿಂದ ಅದನ್ನು ಸಂಪಾದಿಸುವ ಪ್ರಯತ್ನವನ್ನು ಅವನು ಮಾಡಲೇಬೇಕು. ಅಂದರೆ ಕರ್ಮಮಾರ್ಗವನ್ನು ಅವನು ಅನುಸರಿಸಲೇಬೇಕು ಆದರೆ ಈ ಸ್ಥಿತಿಯಲ್ಲಿ ಅವನ ಮನೋಭೂಮಿಕೆಯು ಮಾತ್ರ ಬೇರೆ ಪ್ರಕಾರದ್ದಿರುತ್ತದೆ. ಶಾಸ್ತ್ರಗಳ ಅಧ್ಯಯನದಿಂದ ಮತ್ತು ಗುರುಗಳ ಉಪದೇಶದಿಂದ ಆತ್ಮನು ಇರುವನೆಂಬ ದೃಢವಾದ ಬುದ್ಧಿಯು ಯಾವನಲ್ಲಿ ಉಂಟಾಗಿರುವದೋ ಅವನಿಗೆ ಪರೋಕ್ಷ ಜ್ಞಾನಿಯೆಂದೂ, ಮುಂದೆ ಅಭ್ಯಾಸದಿಂದ ಸಾಧನ ಚತುಷ್ಟಯ ಸಂಪನ್ನನಾಗಿ ಆ ಆತ್ಮನೇ ತಾನೆಂಬ ಅನುಭವಜನ್ಯ ಜ್ಞಾನವು ಯಾವನಿಗೆ ಉಂಟಾಗುವದೋ ಅವನಿಗೆ ಅಪರೋಕ್ಷ ಜ್ಞಾನಿಯೆಂದೂ ಹೆಸರು. ಈ ಎರಡೂ ಪ್ರಕಾರದ ಜ್ಞಾನಿಗಳ ವ್ಯವಹಾರ ಭೂಮಿಕೆಯು ಅಥವಾ ವ್ಯವಹಾರದ ದೃಷ್ಟಿಕೋನವು ಸರ್ವಸಾಮಾನ್ಯ ಅಜ್ಞಮನುಷ್ಯನ ಭೂಮಿಕೆಯಿಂದ ಬೇರೆಯಾದದ್ದು ಇರುತ್ತದೆ या निशा सर्व भूतानां तस्यां जागर्ति संयमी । यस्यां जाग्रति भूतानि सा निशा पश्यतो मुनेः ।। ವ್ಯವಹಾರೀ ಜನರಿಗೆ ಯಾವದು ರಾತ್ರಿಯ ಕತ್ತಲೆಯಂತೆ ಕಾಣುವದೋ ( ಅಂದರೆ ಅಜ್ಞಾತವಾಗಿರುವದೋ ), ಅಂಥ ಪರಮಾತ್ಮ ಸ್ವರೂಪದಲ್ಲಿ ಸಂಯಮೀ ಪುರುಷನು ಜಾಗ್ರತನಾಗಿರುತ್ತಾನೆ ( ಅಂದರೆ ಆ ತತ್ವವನ್ನು ಚನ್ನಾಗಿ ಅರಿತಿರುತ್ತಾನೆ. ) ಮತ್ತು ಸಾಮಾನ್ಯರು ಯಾವ ವಸ್ತುವಿನ ಬಗ್ಗೆ ಜಾಗ್ರತರಾಗಿರುವರೋ, ಅಂಥ ವಿಷಯ ಸುಖವು ಈ ತತ್ವಜ್ಞಾನಿಯಾದ ಮುನಿಗೆ ಕತ್ತಲೆಯಾಗಿರುತ್ತದೆ ( ಅಂದರೆ, ಈ ವಿಷಯ ಸುಖವನ್ನು

ಅವನು ದುರ್ಲಕ್ಷಿಸುತ್ತಾನೆ) ಇಂಥ ತತ್ವಜ್ಞಾನಿಗಳ ವ್ಯವಹಾರದಲ್ಲಿ ಕಾಮಕ್ರೋಧಾದಿ ವಿಕಾರಗಳಿಗೆ ಎಡೆ ಇರುವದಿಲ್ಲ. ಅಜ್ಞ ಜನತೆಯು ವ್ಯವಹಾರದಲ್ಲಿ ಕಂಡುಬರುವ ಸಮಾಜ ವಿಘಾತಕ ವೃತ್ತಿಯು ಎಂದಿಗೂ ಇವರಲ್ಲಿ ಉಂಟಾಗುವದಿಲ್ಲ. ಯಾಕಂದರೆ, ಎಲ್ಲವೂ ತನ್ನ ಆತ್ಮವೇ ಅಥವಾ ಎಲ್ಲ ಜಗತ್ತೂ ತನ್ನ ಸ್ವರೂಪವೇ ಎಂಬ ನಿಶ್ಚಯವುಂಟಾದ ಬುದ್ಧಿಯಲ್ಲಿ ಅನ್ಯತ್ವ ಕಲ್ಪನೆಯೇ ಇರದ್ದರಿಂದ, ಅನ್ಯರ ವಿಘಾತವನ್ನೆಳಿಸುವ ಮನೋ-ವೃತ್ತಿಗೂ ಸ್ಥಾನವಿರುವದಿಲ್ಲ. ಇಂಥ ಜ್ಞಾನಿಯು ವ್ಯವಹಾರದಲ್ಲಿ ನಿರುಪ-ಯುಕ್ತನಾಗುವನೆಂದು ಕೆಲವರ ಕಲ್ಪನೆ ಇದೆ. ಇದು ತಪ್ಪು. ಮಹಾಜ್ಞಾನಿಗಳಾದ ವಿದ್ಯಾರಣ್ಯ ಮುನಿಗಳು ತಮ್ಮ ಪಂಚದಶಿ ಗ್ರಂಥದಲ್ಲಿ "ಜೀವನ್ಮುಕ್ತನಾದವನ ಮನೋಬುದ್ಧ್ಯಾದಿ ವ್ಯವಹಾರ ಸಾಧನಗಳ ಉಪಮರ್ದವಾಗಿರದ್ದರಿಂದ (ಅವು ನಷ್ಟವಾಗಿರದ್ದರಿಂದ) ರಾಜ್ಯಪರಿಪಾಲನಾದಿ ಮಹತ್ವದ ಕೆಲಸವನ್ನೂ ಕೂಡ ಅವನು ಉತ್ತಮ ರೀತಿಯಿಂದ ಮಾಡಬಲ್ಲನು" ಎಂದು ಬರೆದಿದ್ದಾರೆ. (पंचदशी अ. ९ श्लो ११४) ಇಷ್ಟೇ ಅಲ್ಲ ಜ್ಞಾನಿಯು ಕಾಮ–ಕ್ರೋಧಾದಿ ಎಲ್ಲ ಮನೋವಿಕಾರಗಳ ಮೇಲೆ ಜಯವನ್ನು ಸಂಪಾದಿಸಿರುವ ಕಾರಣ, ಅಜ್ಞಾನಿಗಿಂತ ನ್ಯಾಯದಿಂದಲೂ ಸತ್ಯಪ್ರಿಯತೆಯಿಂದಲೂ ವ್ಯವಹಾರವನ್ನು ಮಾಡುವನು. ಜನಕ, ಶ್ರೀಕೃಷ್ಣ, ಬಸವೇಶ್ವರ, ವಿದ್ಯಾರಣ್ಯಾದಿ ಮುಕ್ತಪುರುಷರು ಸರ್ವ ವ್ಯವಹಾರವನ್ನು ಉತ್ತಮ ರೀತಿಯಿಂದ ಮಾಡಿ ಇತರರಿಗೆ ಮಾರ್ಗದರ್ಶಕರಾದ ಉದಾಹರಣೆಗಳು ಅನೇಕ ಇವೆ. ಭಗವದ್ಗೀತೆಯಲ್ಲಿ ಪರಮಜ್ಞಾನಿಯಾದ ಭಗವಂತನು ಲೋಕ ಸಂಗ್ರಹಾರ್ಥವಾಗಿ ನಿತ್ಯನೈಮಿತ್ತಿಕ ಕರ್ಮಗಳ ಆಚರಣೆಯನ್ನು ಜ್ಞಾನಿಯೂ ಕೂಡ ಮಾಡಬೇಕೆಂದು ಉಪದೇಶಿಸಿರುತ್ತಾನೆ. ಜ್ಞಾನಿಯು ಕರ್ಮ ಮಾಡಲು ಅಸಮರ್ಥನಾಗುತ್ತಿದ್ದರೆ ಈ ಉಪದೇಶವೇ ಸಂಭವಿಸುತ್ತಿರಲಿಲ್ಲ.

ಇಂಥ ಜೀವನ್ಮುಕ್ತರಿಗೆ ಪ್ರಾಧಾನ್ಯವುಳ್ಳ ಆರ್ಯರ ಸಮಾಜದಲ್ಲಿ ಸಂಕುಚಿತವಾದ ಭೌತಿಕ ಹಿತಕ್ಕೆ ಮಹತ್ವವಿರುವದಿಲ್ಲ ಈ ಹಿತವು ಆ ಸಮಾಜದ ಧ್ಯೇಯವಾಗಿರದೆ, ಅದೊಂದು ಹೆಚ್ಚು ಉನ್ನತವಾದ ಆಧ್ಯಾತ್ಮಿಕ ಪ್ರಗತಿಯನ್ನು ಪಡೆಯುವ ಸಾಧನವಾಗುತ್ತದೆ. ಇಲ್ಲಿ ಕಾಮ ಕ್ರೋಧಾದಿ

ವಿಕಾರಗಳಿಂದ ತುಂಬಿದ ಮನಸ್ಸಿನ ಇಚ್ಛೆಗೆ ಎಡೆ ಇರುವದಿಲ್ಲ. ಈಗಿನ ವ್ಯಕ್ತಿಸ್ವಾತಂತ್ರ್ಯ ಅಥವಾ ಯಥೇಚ್ಛಾಚರಣಕ್ಕೆ ಈ ಸಮಾಜದಲ್ಲಿ ಮಾನ್ಯತೆಯು ದೊರೆಯಲಾರದು. ಒಂದು ಉದಾಹರಣೆಯನ್ನು ಇಲ್ಲಿ ಕೊಟ್ಟರೆ ನಮ್ಮ ಅಭಿಪ್ರಾಯವು ವಾಚಕರಿಗೆ ಹೆಚ್ಚು ಸ್ಪಷ್ಟವಾಗಬಹುದು. ಪಾಶ್ಚಾತ್ಯ ದೇಶಗಳಲ್ಲಿ ತಿರುಗಾಡಿ ಬಂದ, ನಮ್ಮ ಸಮಾಜರಚನೆಯ ರಹಸ್ಯವನ್ನರಿಯದ ಕೆಲವು ಹಿಂದೀಯರು ಅಲ್ಲಿಯ ಸಾಮಾಜಿಕ ಸ್ವಾತಂತ್ರ್ಯ ಮತ್ತು ಸಮತೆಯ ವರ್ಣನೆಯನ್ನು ರಸಭರಿತ ಶಬ್ದಗಳಿಂದ ಮಾಡುತ್ತಿರುವದನ್ನು ನಾವು ಕಾಣಬಹುದು. ಹಾಗೂ ನಮ್ಮ ಸಮಾಜದಲ್ಲಿಯ ಬಂಧನಗಳನ್ನೂ ಶಿಷ್ಟಾಚಾರಗಳನ್ನೂ ತಿರಸ್ಕಾರದಿಂದ ಹಳಿಯುತ್ತಿರುವದನ್ನೂ ಕಾಣಬಹುದು. ಅಮೇರಿಕೆ ಅಥವಾ ಆಂಗ್ಲದೇಶಗಳಲ್ಲಿ ಧೂಮ್ರಪಾನವನ್ನು ಅನಿರ್ಬಂಧವಾಗಿ ಯಥೇಚ್ಛ ಮಾಡಬಹುದು. ನೌಕರನು ತನ್ನ ಧನಿಯ ಎದುರಿಗೆ, ಮಗನು ತನ್ನ ತಂದೆಯ ಮತ್ತು ಗುರುಹಿರಿಯರ ಎದುರಿಗೆ, ಅಥವಾ ವಿದ್ಯಾರ್ಥಿಯು ತನ್ನ ಗುರುವಿನ ಎದುರಿಗೆ ಏನೂ ಆತಂಕವಿಲ್ಲದೆ ತನ್ನ ದುಷ್ಟ ಚಟಗಳನ್ನು ಸೇವಿಸಬಹುದು. ಇದರಿಂದ ಧನಿಯಾಗಲಿ, ಗುರುಹಿರಿಯರಾಗಲಿ ಯಾವ ಪ್ರಕಾರದಿಂದಲೂ ತಮಗೆ ಅಪಮಾನವಾಗುವದೆಂದು ತಿಳಿಯುವದಿಲ್ಲ. ಆ ಸಮಾಜ ರಚನೆಯ ಗುರಿಯೇ ವೈಷಯಿಕ ಭೋಗವಿರುವದರಿಂದ ಆ ಸಮಾಜಗಳಲ್ಲಿ ವಿಷಯ ಭೋಗಗಳಿಗೆ ಎಲ್ಲರಿಗೂ ಸಮತೆಯು ಇದ್ದದ್ದು ಕಂಡುಬರುತ್ತದೆ. ಆದರೆ ಈ ಉಪಭೋಗಗಳನ್ನು ಉತ್ಪಾದನೆ ಮಾಡುವ ಸಾಧನಗಳಲ್ಲಿ ಮಾತ್ರ ಸಮತೆಯು ಎಂದಿಗೂ ಇರಲಾರದು. "ಸಾಧನಾನಾಂ ಅನೇಕತಾ" ಎಂಬ ನಿಯಮವು ಸರ್ವತ್ರ ಅಬಾಧಿತವಾದದ್ದು. ಸಾಧನಗಳಲ್ಲಿ ಮಾತ್ರ ವಿವಿಧತೆಯು ಅವಶ್ಯವಾಗಿ ಬೇಕೇಬೇಕು. ಅಲ್ಲಿ ಸಮತೆಯು ಇರಲಾರದು. ಉತ್ಪಾದನ ಕ್ರಿಯೆಯ ವಿವಿಧ ಅಂಗಗಳನ್ನು, ವಿವಿಧ ಜನರು, ತಮ್ಮ ಯೋಗ್ಯತೆಗನುಸರಿಸಿ, ವಿವಿಧ ಪ್ರಕಾರಗಳಿಂದಲೇ ಮಾಡತಕ್ಕದ್ದು. ಇಲ್ಲಿ ಸಮತೆಯನ್ನು ನಾವು ಎಲ್ಲಿಯೂ ಕಾಣಲಾರೆವು. ಧನಿಯ ಆಜ್ಞೆಯನ್ನು ಸೇವಕನೂ, ಗುರುವಿನ ಆಜ್ಞೆಯನ್ನು ವಿದ್ಯಾರ್ಥಿಯೂ, ಗುರುಹಿರಿಯರ ಆಜ್ಞೆಯನ್ನು ಅಜ್ಞರಾದ ಚಿಕ್ಕವರೂ, ಅಧಿಕಾರಿಯ ಆಜ್ಞೆಯನ್ನು ಅವನ ಕೈಕೆಳಗಿನ ನೌಕರರೂ, ಪ್ರಾಮಾಣಿಕ

ತನದಿಂದ ಅವಶ್ಯವಾಗಿ ಪಾಲಿಸಲಿಕ್ಕೇ ಬೇಕು. ಇಲ್ಲದಿದ್ದರೆ ಯಾವ ಸಮಾಜವೂ ಸುಸೂತ್ರವಾಗಿ ನಡೆಯಲಾರದು. ಸಾಮಾಜಿಕ ಧ್ಯೇಯವನ್ನು ಸಾಧಿಸಲಿಕ್ಕೆ ಎಲ್ಲರಿಗೂ ಸ್ವಾತಂತ್ರ್ಯ ಮತ್ತು ಸಮತೆಯು ಇರಲೇಬೇಕು ಆದರೆ ಸಾಧನಗಳಲ್ಲಿ ಮಾತ್ರ ವಿಷಮತೆಯೂ ಅಪರಿಹಾರ್ಯವಾದ ಕಟ್ಟಳೆಗಳೂ ಬೇಕೇ ಬೇಕು. ಆರ್ಯಸಮಾಜದ ಗುರಿಯು ಆತ್ಯಂತಿಕ ಕಲ್ಯಾಣವಿದ್ದು, ಇದನ್ನು ಸಾಧಿಸುವ ಹಕ್ಕು ಮನುಷ್ಯಮಾತ್ರದ್ದಿರುತ್ತದೆ ಇತರ ಸಾಧನಗಳಲ್ಲಿ ಕಂಡುಬರುವ ವಿಷಮತೆಯು ಇಲ್ಲಿಯೂ ಸಾಧ್ಯದ ನಿಯಮಗಳಿಗನುಸರಿಸಿಯೇ ಇರುತ್ತದೆ ಆ ಆ ಸಾಮಾಜಿಕ ಧ್ಯೇಯಗಳಿಗೆ ಅನುಕೂಲವಾಗಿ ರಚಿಸಿದ, ಕಟ್ಟಳೆ ಮತ್ತು ನೀತಿಯ ನಿಯಮಗಳನ್ನು ಅದರಲ್ಲಿಯ ಪ್ರತಿಯೊಬ್ಬ ವ್ಯಕ್ತಿಯು ಉಚ್ಚ ನೀಚ ಭಾವನೆಗೆ ವಶನಾಗದೆ ಪಾಲಿಸತಕ್ಕದ್ದು. ಅಂದರೇ ಯಾವದೊಂದು ಸಮಾಜ-ರಚನೆಯ ಗುರಿಯು ಸಾಧ್ಯವಾಗುವದು.

ಈ ಆರ್ಯಭೂಮಿಯು ಧರ್ಮದ ತವರುಮನೆಯೂ ಧಾರ್ಮಿಕರ ಯೋಗ್ಯಸ್ಥಾನವೂ ಆಗಿದೆ. ಧರ್ಮಭಾವನೆಯಿಂದಲೂ ದೈವೀ ಸಂಪತ್ತಿಯಿಂದಲೂ ಹಿಂದುಸ್ಥಾನವು ಜಗತ್ತಿನ ಎಲ್ಲ ರಾಷ್ಟ್ರಗಳಲ್ಲಿ ಎಲ್ಲರಿಗೂ ಅಭಿಮಾನಪಡುವಂಥ ಪ್ರಥಮಸ್ಥಾನವನ್ನು ಪಡೆದಿತ್ತು ಮತ್ತು ಈಗಲೂ ಕೆಲಮಟ್ಟಿಗೆ ಈ ಸ್ಥಾನವನ್ನು ಅದು ಇಟ್ಟುಕೊಂಡಿದೆ. ಧರ್ಮವು ಪಶು ಸ್ವಭಾವದ ಮನುಷ್ಯನನ್ನು ದೇವತ್ವಕ್ಕೆ ಮುಟ್ಟಿಸುತ್ತದೆ. ಅಪಕ್ವ ಮತ್ತು ಸಂಕುಚಿತ ಸ್ವಭಾವದ ಮನುಷ್ಯನಿಗೆ ಧರ್ಮವು ಪೂರ್ಣತ್ವದ ಮತ್ತು ಯಶಸ್ಸಿನ ಮಾರ್ಗವನ್ನು ತೋರಿಸುತ್ತದೆ. ಜೀವಾತ್ಮನ ಈ ದುಃಖಮಯ ಜೀವನವನ್ನು ಆನಂದರೂಪನಾದ ಪರಮಾತ್ಮನಲ್ಲಿ ಬೆರಿಸಿ ಆತ್ಯಂತಿಕ ಸುಖವನ್ನೀಯುವದೇ ಧರ್ಮವು ಈಶ್ವರನ ಕಡೆಗೆ ಏರುವ ಸೋಪಾನವೇ ಧರ್ಮವು. ಆತ್ಮಸಾಕ್ಷಾತ್ಕಾರ— ಅಂದರೆ ತಾನು ನಿಜವಾಗಿಯೂ ಯಾರು, ತನ್ನ ಸತ್ಯ ಸ್ವರೂಪವು ಯಾವದು ಎಂಬದನ್ನು ತಿಳಿಯುವದೇ ಎಲ್ಲಕ್ಕಿಂತ ಹೆಚ್ಚಿನ ಧರ್ಮವು. ಧರ್ಮವೇ ಹಿಂದುಗಳ ಆಚಾರ, ವಿಚಾರ ಮತ್ತು ನೀತಿಯ ಹೃದಯ ಅಥವಾ ಉಗಮಸ್ಥಾನವಾಗಿದೆ. ಈಶ್ವರನೇ ಧರ್ಮದ ಮಧ್ಯಬಿಂದುವಾಗಿದ್ದಾನೆ. ಹಿಂದುಸ್ಥಾನದ ಇತಿಹಾಸವೆಂದರೆ ಧರ್ಮದ ಇತಿಹಾಸವೇ ಸರಿ. ಹಿಂದುಗಳ ಸಾಮಾಜಿಕ ಮತ್ತು ಆರ್ಥಿಕ ಕಾನೂನು

ಗಳು–ಕಟ್ಟಳೆಗಳು ಧರ್ಮದ ಭದ್ರವಾದ ತಳಹದಿಯ ಮೇಲೆಯೇ ನಿಂತಿವೆ. ಹಿಂದೂಧರ್ಮದೊಳಗಿನ ಧಾರ್ಮಿಕ ಆಚಾರ–ವಿಚಾರ, ಕರ್ಮ–ಭಕ್ತಿ–ಜ್ಞಾನಗಳಿಂದ ಕೂಡಿದ ಅವರ ತತ್ತ್ವಜ್ಞಾನ, ಇವುಗಳಿಂದ ಹಿಂದುಗಳನ್ನು ಬೇರ್ಪಡಿಸಿದರೆ, ರಾಮಕೃಷ್ಣಾದಿ ಅವತಾರೀ ಪುರುಷರಿಂದಲೂ, ನಳ, ನಹುಷ, ಧರ್ಮ, ಅರ್ಜುನ, ಪ್ರತಾಪಸಿಂಹ, ಶಿವಾಜೀ ಮುಂತಾದ ಧರ್ಮಪ್ರಾಣರಾದ ಐತಿಹಾಸಿಕ ಶೂರ ಪುರುಷರಿಂದಲೂ, ವಿದುರ, ಸುದಾಮ, ಶಬರಿ, ಕಬೀರ, ತುಲಸೀದಾಸ, ಬಸವೇಶ್ವರ, ರಾಮದಾಸ, ತುಕಾರಾಮ ಮುಂತಾದ ಸಾಧು ಪುರುಷರ ಜೀವನ ಚರಿತ್ರದಿಂದಲೂ ನಮ್ಮನ್ನು ವಿಂಗಡಿಸಿದಂತಾಗಿ, ಹಿಂದಿನ ಅನಾದಿಕಾಲದ ನಮ್ಮ ಉಜ್ವಲ ಇತಿಹಾಸವನ್ನು ನಾವು ಕಳೆದುಕೊಳ್ಳುವೆವು ಇಂಗ್ಲಂಡ ದೇಶವು ಹೇಗೆ ಕಲ್ಲಿದ್ದಲಿ ಕಬ್ಬಿಣಗಳ ಬಗ್ಗೆ, ಅಮೇರಿಕೆಯು ತನ್ನ ಸಂಪತ್ತಿಯ ಬಗ್ಗೆ, ಇಟಲೀ ದೇಶವು ಶಿಲ್ಪಕಲೆಯ ಬಗ್ಗೆ ಸುಪ್ರಸಿದ್ಧವಾಗಿರುವವೋ, ಹಾಗೆಯೇ ಹಿಂದುಸ್ಥಾನವು ಧರ್ಮ ಮತ್ತು ಈಶ್ವರ ಪ್ರೇಮದ ಬಗ್ಗೆ, ಯೋಗಿಗಳ ಮತ್ತು ಸಾಧುಸಂತರ ಬಗ್ಗೆ ಹೆಸರಾಗಿರುವದು. ವ್ಯಾಪಾರ ಮತ್ತು ಧನ-ಸಂಚಯದ ಕಡೆಗೆ ಅಮೇರಿಕೆಯ ಲಕ್ಷ್ಯವಿದೆ ಪರರಾಷ್ಟ್ರಗಳನ್ನು ಕುಟಿಲ ನೀತಿಯಿಂದ ಪರಾಭವಗೊಳಿಸಿ ತನ್ನ ಸಾರ್ವಭೌಮತ್ವವನ್ನು ಸ್ಥಾಪಿಸುವ ಗುರಿಯನ್ನು ಇಂಗ್ಲಂಡವು ತನ್ನೆದುರಿಗೆ ಇಟ್ಟುಕೊಂಡಿದೆ. ಆದರೆ ನಮ್ಮ ಭರತಭೂಮಿಯ ಜೀವನೋದ್ದೇಶವು ಆತ್ಮಜ್ಞಾನ ಮತ್ತು ಈಶ್ವರ ಸಾಕ್ಷಾ-ತ್ಕಾರವಾಗಿರುತ್ತದೆ. ಹಿಂದುಗಳು ಪರರಾಷ್ಟ್ರಗಳನ್ನು ಗೆದ್ದು ತಮ್ಮ ಪಾಶವೀ ಸಾಮರ್ಥ್ಯವನ್ನು ಪರರಿಗೆ ತೋರಿಸಿಲ್ಲ. ಆದರೆ ಅವರು ತಮ್ಮ ಧಾರ್ಮಿಕ ಆಚರಣೆಯಿಂದ ಜಗತ್ತನ್ನು ದಿಗಿಲುಗೊಳಿಸಿದ್ದಾರೆ ಹಿಂದುಗಳ ರಾಜ್ಯವು ಮನುಷ್ಯನ ಸ್ಥೂಲದೇಹದ ಮೇಲಿರದೆ, ಅದು ಅವನ ಮನಸ್ಸು, ಬುದ್ಧಿ ಮತ್ತು ಆತ್ಮದ ಮೇಲಿದೆ. ರೋಮನ ರೋಲಾಂಡ ಎಂಬ ಫ್ರೆಂಚ ಪ್ರವಾಸಿಯು ಬರೆದ ರಾಮಕೃಷ್ಣ ಪರಮಹಂಸರ ಚರಿತ್ರದಲ್ಲಿ ಅವರು ಅನ್ನುವದೇನಂದರೆ— "**If there is any one place on the face of the earth where all the dreams of living men have found a home from the very earliest days, when man**

**began the dream of existence, it is India".** ಈ ಜಗತ್ತಿನಲ್ಲಿ ಮನುಷ್ಯಪ್ರಾಣಿಯು ಎಲ್ಲ ಆಕಾಂಕ್ಷೆಗಳೂ ಸುಖಸ್ವಪ್ನಗಳೂ, ಕಾಲದ ಆರಂಭದಿಂದ ಎಲ್ಲಿಯಾದರೂ ಪೂರ್ಣವಾಗಿದ್ದರೆ, ಅದು ಹಿಂದುಸ್ಥಾನದಲ್ಲಿಯೇ ಎಂದು ಬರೆದಿದ್ದಾರೆ.

ಇದರ ಮೇಲಿಂದ ಪಾಶ್ಚಾತ್ಯ ದೇಶಗಳಲ್ಲಿ, ಯಾವ ಪ್ರಕಾರದ ಧಾರ್ಮಿಕ ಯತ್ನಗಳೂ, ಸಾಧುಸಂತರ ಅವತಾರಗಳೂ ಆಗಲೇ ಇಲ್ಲವೆಂದೂ, ಧರ್ಮದ ಯಾವ ಅಂಗದ ಕಲ್ಪನೆಯೂ ಅದರಲ್ಲಿ ಇರಲಿಲ್ಲವೆಂದೂ ಕಲ್ಪಿಸಬಾರದು. ಅಲ್ಲಿಯೂ ಯೇಸೂಕ್ರಿಸ್ತ ಮುಹಮ್ಮದ ಮುಂತಾದ ಧರ್ಮಸ್ಥಾಪಕರಾದ ಸಂತರೂ, ಸೆಂಟಪಾಲ, ಅಗಸ್ಟಾಯಿನ, ಇಬ್ರಾಹಿಮ, ಹಸನ ಮುಂತಾದ ಈಶ್ವರ ಭಕ್ತರೂ, ಟೆರೆಸಾನಂಥ ಅನುಭಾವಿಯರೂ, ಹಲವರು ಆಗಿಹೋದರು. ಆ ದೇಶದಲ್ಲಿ ಧರ್ಮವು ಕೇವಲ ಸಗುಣ ಅಥವಾ ನಿರ್ಗುಣ ಪರಮೇಶ್ವರನ ಆರಾಧನೆಯು ಬೇರೆ ಬೇರೆ ಬಾಹ್ಯರೂಪಗಳಾಗಿವೆ ವೇದಪ್ರಣೀತ ವ್ಯಾಪಕವಾದ ಮೋಕ್ಷಧರ್ಮದ ಒಂದೊಂದು ಪಂಥ, ಸಾಂಪ್ರದಾಯ ಅಥವಾ ಮಾರ್ಗಗಳು ಅವು ಆಗಿದ್ದು ಆ ಧರ್ಮದ ಹಿನ್ನೆಲೆಗೆ ವ್ಯಾಪಕವಾದ ತತ್ವಜ್ಞಾನವಿಲ್ಲ. ಶಾಸ್ತ್ರವಿಲ್ಲ. ಆದರೆ, ಆರ್ಯರ ವೈದಿಕ ಧರ್ಮದಲ್ಲಿ ಇದಕ್ಕಿಂತ ಹೆಚ್ಚಿನ ವಿಶೇಷವನ್ನು ಕಾಣಬಹುದು. ಇಲ್ಲಿ ನಮ್ಮ ಋಷಿಗಳಿಂದ ಪ್ರಣೀತವಾದ ಧರ್ಮದಲ್ಲಿ ಅಭ್ಯುದಯ ಮತ್ತು ನಿಃಶ್ರೇಯಸಗಳೆರಡೂ ಧರ್ಮದ ಫಲವಾಗಿರುವವೆಂದು ಕಂಠರವದಿಂದ ಹೇಳಲಾಗಿದೆ. धर्मादर्थश्च कामश्च स किमर्थन्न सेव्यते ॥ ಐಹಿಕ ಮತ್ತು ಪಾರಲೌಕಿಕ ಸುಖ ಮತ್ತು ಮೋಕ್ಷ ಇವೆಲ್ಲವೂ ಧರ್ಮದಿಂದಲೇ ಸಾಧಿಸುವವೆಂದೂ, ಧರ್ಮ ವಿಹೀನ ಆಚರಣೆಯಿಂದ, ಇವುಗಳಲ್ಲಿ ಯಾವವೂ ಸಾಧಿಸಲಾರವೆಂದೂ ಸ್ಪಷ್ಟವಾಗಿಯೇ ಹೇಳಲಾಗಿದೆ. ಈ ಧರ್ಮಕ್ಕೆ ವೇದಾಂತ ತತ್ವಜ್ಞಾನದ ಅಭೇದ್ಯವಾದ ನೆಲಗಟ್ಟು ಇರುತ್ತದೆ ಆದ್ದರಿಂದಲೇ ಆರ್ಯಧರ್ಮವು ಇತರ ಧರ್ಮಗಳಂತೆ ಕೇವಲ ವೈಯಕ್ತಿಕ ಶ್ರದ್ಧೆಯ ವಿಷಯವಾಗಿರದೆ, ಅದೊಂದು ಶಾಸ್ತ್ರವಾಗಿದೆ. ಅದು ಮಾನವ ಜಾತಿಯ ಆಧ್ಯಾತ್ಮಿಕ ಗರಜನ್ನೂ ಆಕಾಂಕ್ಷೆಯನ್ನೂ ಪೂರೈಸುವ ಅಕ್ಷಯವಾದ ನಿಧಿಯಾಗಿದೆ. ಅದೊಂದು ಇಹ ಮತ್ತು ಪರ ಸುಖವನ್ನು ಸಾಧಿಸುವ

ಅಪೌರುಷ್ಯ ಸ್ವಾರೂಪವಾಗಿದೆ ಆದ್ದರಿಂದ ಆರ್ಯೇತರ ಧರ್ಮಗಳಂತೆ ಇದು ಸಂಕುಚಿತವಾದ ವಿಶಿಷ್ಟ ಶ್ರದ್ಧೆಯ ಮತ್ತು ಆಚರಣೆಯ ಅಚ್ಚಾಗಿರದೆ, ಅತಿ ವ್ಯಾಪಕವಾದ ಮತ್ತು ಸರ್ವಸಂಗ್ರಾಹಕ ಧರ್ಮವಾಗಿದೆ.

ಪಾಶ್ಚಾತ್ಯರಲ್ಲಿ ಧರ್ಮ, ನೀತಿ, ತತ್ವಜ್ಞಾನ ಮತ್ತು ವ್ಯವಹಾರ ಇವು ಒಂದಕ್ಕೊಂದು ಸಂಬಂಧವಿಲ್ಲದ, ಹಲವು ಸಾರೆ, ಒಂದಕ್ಕೊಂದು ವಿರುದ್ಧವಾದ ಕಲ್ಪನೆಗಳಾಗಿವೆ. ಆರ್ಯರ 'ಧರ್ಮ' ಈ ಶಬ್ದದಲ್ಲಿ ನಿಗಡಿತವಾದ ಎಲ್ಲ ಅರ್ಥವು ಪಾಶ್ಚಾತ್ಯರ "ರಿಲಿಜನ" ಎಂಬ ಶಬ್ದದಲ್ಲಿ ಬರುವದಿಲ್ಲ. ಪಾಶ್ಚಾತ್ಯ ವಿದ್ವಾಂಸರ ಕಲ್ಪನೆಯ ಪ್ರಕಾರ ಧಾರ್ಮಿಕರು ಇಹಲೋಕದ ಎಲ್ಲ ಸುಖಾಪೇಕ್ಷೆಯನ್ನೂ ವ್ಯವಹಾರವನ್ನೂ ತೊರೆದು, ಕೇವಲ ಮೋಕ್ಷ ಮತ್ತು ಅನ್ಯಲೋಕಗಳ ಕಡೆಗೇ ದೃಷ್ಟಿಯನ್ನಿಟ್ಟು ವ್ಯವಹರಿಸುತ್ತಿರುವದರಿಂದ, ಅವರು ಸಂಕುಚಿತ ಮನೋವೃತ್ತಿಯುಳ್ಳವರೂ ಸಮಾಜದ ಉನ್ನತಿಯನ್ನು ಉಪೇಕ್ಷಿಸುವವರೂ ಆಗಿರುತ್ತಾರೆ. ಆದರೆ ಆರ್ಯರ ಧರ್ಮದಲ್ಲಿ, ನೀತಿ, ತತ್ವಜ್ಞಾನ, ಸದಾಚಾರಯುಕ್ತ ವ್ಯವಹಾರ ಇವೆಲ್ಲವೂ ಒಂದ-ಕ್ಕೊಂದು ವಿರೋಧವಿಲ್ಲದ ಧರ್ಮದ ಅಂಗಗಳೇ ಆಗಿವೆ. ಮನುಷ್ಯನ ಎಲ್ಲ ಚಟುವಟಿಕೆಗಳನ್ನು ಆರ್ಯರು ಧರ್ಮ ಮತ್ತು ಅಧರ್ಮವೆಂದು ವಿಭಾಗಿಸಿದ್ದು ಧರ್ಮದಲ್ಲಿ ಮನುಷ್ಯನಿಗೆ ಹಿತಕರವಾದ ಎಲ್ಲ ವ್ಯವಹಾರವೂ ಬರುತ್ತದೆ. ಇದರಲ್ಲಿ ಮನುಷ್ಯನ ಎಲ್ಲ ವೈಯಕ್ತಿಕ ಮತ್ತು ಸಾಮಾಜಿಕ ಆಚಾರಗಳು ಒಳಪಟ್ಟಿವೆ. ಆದ್ದರಿಂದ ಆರ್ಯರ ಆಚಾರಧರ್ಮವನ್ನು ವಿವರಿಸುವ ಸ್ಮೃತಿಗ್ರಂಥಗಳಲ್ಲಿ ಅರ್ಥಶಾಸ್ತ್ರ, ರಾಜನೀತಿ, ಸಮಾಜಗಲ್ಲಿಯ ವ್ಯಕ್ತಿವ್ಯಕ್ತಿಗಳ ಸಂಬಂಧ, ಸ್ತ್ರೀಪುರುಷರ ಸಂಬಂಧ ಇವೆಲ್ಲವುಗಳ ನಿಯಮಗಳನ್ನು ವರ್ಣಿಸಲಾಗುತ್ತದೆ. ಹಾಗೂ ಮೋಕ್ಷಕ್ಕೆ ಪ್ರತ್ಯಕ್ಷ ಸಾಧನವಾದ ಆತ್ಮಸಾಕ್ಷಾತ್ಕಾರದ ಮಹತ್ವವನ್ನೂ ವರ್ಣಿಸಲಾಗಿದೆ ಈ ಧರ್ಮಾಚರಣೆಯ ಫಲವು ಐಹಿಕ ಮತ್ತು ಆಮುಷ್ಮಿಕ ಸುಖವೇ ಇದ್ದು ಮನುಷ್ಯ ವ್ಯಕ್ತಿಯ ಅಥವಾ ಸಮಾಜದ ಮೇಲೆ ಬಂದೊದಗುವ ಎಲ್ಲ ಆಪತ್ತಿಗಳೂ ಕಷ್ಟಗಳೂ ಅಧರ್ಮಾಚರಣೆಯ ಮೂಲಕವೇ ಎಂದು ಆರ್ಯರ ಸಿದ್ಧಾಂತವಿದೆ. ಆದ್ದರಿಂದ ಈ ಧರ್ಮವು ಐಹಿಕ, ಪಾರಲೌಕಿಕ ಮತ್ತು

ಆಧ್ಯಾತ್ಮಿಕ ಸುಖವನ್ನು ಅಪೇಕ್ಷಿಸುವ ಎಲ್ಲ ಮಾನವ ವ್ಯಕ್ತಿಗಳ ಧರ್ಮ ವಾಗಬಲ್ಲದು.

ಅಭ್ಯುದಯ ಮತ್ತು ನಿಃಶ್ರೇಯಸ್ ಇವೆರಡೂ ಆರ್ಯಧರ್ಮದ ಗುರಿಯೆಂದು ಹೇಳಲಾಯಿತು. ಆದರೆ ಈ ಜಗತ್ತಿನಲ್ಲಿ ನಿಃಶ್ರೇಯಸದ ಅಂದರೆ ಕೇವಲ ಮೋಕ್ಷದ ಅಪೇಕ್ಷೆಯುಳ್ಳವರು ಅತಿ ವಿರಲವಿದ್ದು, ಅಭ್ಯುದಯದ ಅಂದರೆ ಐಹಿಕ ಸುಖದ ಅಪೇಕ್ಷಿಗಳೇ ಬಹಳವಾಗಿದ್ದಾರೆಂಬದು ಎಲ್ಲರ ಅನುಭವದ ಮಾತಾಗಿದೆ. ಆದ್ದರಿಂದ ಪಾಶ್ಚಾತ್ಯ ದೇಶಗಳಲ್ಲಿಯ ಅಭ್ಯುದಯಾರ್ಥಿಗಳು ತಮ್ಮ ಧರ್ಮದಲ್ಲಿ ಇಷ್ಟಾರ್ಥವನ್ನು ಕಾಣದೆ ಭೌತಿಕ ಶಾಸ್ತ್ರಗಳ ಸಂಶೋಧನೆಯಲ್ಲಿ ತೊಡಗಿದರು ಅವರ ಧರ್ಮವು ಅವರ ಎಲ್ಲ ಕೋರಿಕೆಗಳನ್ನು ತೃಪ್ತಿಗೊಳಿಸಲಿಕ್ಕೆ ಸಮರ್ಥವಾಗಲಿಲ್ಲ ಮೋಕ್ಷಸಾಧನೆಗೂ ಯೋಗ್ಯ ಅಧಿಕಾರವು ಬೇಕು ಈ ಜಗತ್ತಿನ ಪೂರ್ಣ ಅನುಭವವನ್ನು ಪಡೆದು ಇಲ್ಲಿ ಸಿಗತಕ್ಕ ಕೊಂಚ ವಿಷಯಸುಖಕ್ಕೆ ಬೇಸತ್ತು, ಇದನ್ನು ಬುದ್ಧಿಪೂರ್ವಕ ತ್ಯಾಗಮಾಡಿ ಯಾವನ ಮನಸ್ಸು ನಿವೃತ್ತವಾಗಿರುವದೋ ಮತ್ತು ಆಧ್ಯಾತ್ಮಶಾಸ್ತ್ರದ ಅಧ್ಯಯನದಿಂದ ಮೋಕ್ಷಾಪೇಕ್ಷೆಯು ತೀವ್ರತೆಯು ಯಾವನಲ್ಲಿ ಬೆಳೆಯುತ್ತ ಹೋಗಿರುವದೋ ಅವನೇ ಮೋಕ್ಷಕ್ಕೆ ಅಧಿಕಾರಿಯು ಇಂಥ ಮೋಕ್ಷಾಧಿಕಾರಿಯು ಎಲ್ಲ ಸಂಸಾರವನ್ನು ತ್ಯಾಗಮಾಡಿ ಕೇವಲ ಈಶ್ವರ ಪ್ರಣಿಧಾನಪೂರ್ವಕ ಆತ್ಮಧ್ಯಾನ ಪರಾಯಣನಾಗುತ್ತಾನೆ. ಆದರೆ ಇಂಥ ಅಧಿಕಾರಿಗಳು ಅತಿವಿರಲ. ಇತರರೆಲ್ಲರೂ ಅಭ್ಯುದಯಾರ್ಥಿಗಳೇ ಹೊರತು ಮೋಕ್ಷಸುಖದ ಮಸುಕಾದ ಕಲ್ಪನೆಯು ಬಂದಾಗ್ಯೂ ವಿಷಯಸುಖವನ್ನು ಬಿಟ್ಟುಕೊಡುವಷ್ಟು ತ್ಯಾಗಬುದ್ಧಿಯು ಇವರಲ್ಲಿರುವದಿಲ್ಲ. ಇವರ ಮನಸ್ಸು ಕೇವಲ ವಿಷಯ ಸುಖಕ್ಕೇ ಅಂಟಿಕೊಂಡಿರುತ್ತದೆ ಧನ, ದನ, ಸ್ತ್ರೀ, ಸಂತಾನ, ವಿದ್ಯಾ, ರಾಜ್ಯ, ಅಧಿಕಾರ, ಆರೋಗ್ಯ ಮುಂತಾದ ಅನೇಕ ಸುಖಕ್ಕೆ ವಿಷಯವಾದ ವಸ್ತುಗಳ ಅಪೇಕ್ಷೆಯುಳ್ಳವರಿಂದಲೇ ಈ ಜಗತ್ತು ತುಂಬಿಹೋಗಿದೆ. ಅಂದಮೇಲೆ ಕೇವಲ ಮೋಕ್ಷಧರ್ಮದ—ನಿವೃತ್ತಿಮಾರ್ಗದ ಉಪದೇಶವು ಇವರಿಗೆ—ಬೋರ್ಗಲ್ಲ ಮೇಲೆ ಮಳೆಗರೆದರಾ ಕಲ್ಲು ನೀರ್ಕುಡಿಯ ಬಹುದೇ! ಎಂಬ ಸರ್ವಜ್ಞ ವಚನದಂತೆ

ನಿರುಪಯುಕ್ತವಾಗುವದು. ಇಂಥ ಜನರಿಗೋಸ್ಕರ, ಆರ್ಯಧರ್ಮವು ಪ್ರವೃತ್ತಿಮಾರ್ಗವನ್ನು ತೋರಿಸುವದು. ಈ ಪ್ರಕಾರ ಮೇಲೆ ವರ್ಣಿಸಿದ ಸಾತ್ವಿಕ ಮತ್ತು ರಾಜಸೀ ಸ್ವಭಾವದ ಜನರಿಗೆ ಧರ್ಮವು ಬೇರೆ ಬೇರೆ ಪ್ರಕಾರಗಳಿಂದ ವಿಷಯವಾಗಬಹುದು. ಆದರೆ, ಸಮಾಜದಲ್ಲಿ ಧರ್ಮದ ಈ ಸೂಕ್ಷ್ಮವಾದ ಅರ್ಥವನ್ನು ಅರಿಯದ ಇನ್ನೊಂದು ಗುಂಪು ಇದೆ. ಇವರಿಗೆ ಕೇವಲ ಐಹಿಕ ಸುಖವೇ ಜೀವನದ ಕೊನೆಯಾಗಿದ್ದು, ಅದನ್ನು ಅವರು ಯೇನ ಕೇನ ಪ್ರಕಾರದಿಂದ ಸಂಪಾದಿಸುವಲ್ಲಿಯೇ ಮಗ್ನರಾಗಿರುತ್ತಾರೆ. ಇವರ ದೃಷ್ಟಿಯಿಂದ ಪರಲೋಕ ಮತ್ತು ಮೋಕ್ಷಗಳೆಂಬ ಪದಾರ್ಥಗಳು ಕೇವಲ ಕಾಲ್ಪನಿಕವಿದ್ದು, ಅವು ಮನುಷ್ಯನ ಮನಸ್ಸಿನ ಸಮಾಧಾನಕ್ಕಾಗಿ—ಈ ಕಲ್ಪನೆಗಳಿಂದ ಮನುಷ್ಯನು ತನುಹೊತ್ತು ಮನೋರಾಜ್ಯದ ಸುಖವನ್ನು ಹೊಂದಬೇಕೆಂದು—ಮನುಷ್ಯನೇ ಕಲ್ಪಿಸಿದ ಕಾದಂಬರಿಗಳಾಗಿವೆ. ಅಥವಾ ಒಂದು ಶ್ರೇಷ್ಠವರ್ಗವು ಕೆಳಗಿನ ವರ್ಗವನ್ನು ತಮ್ಮ ಆಧೀನದಲ್ಲಿ ಇಟ್ಟು ಕೊಳ್ಳಬೇಕೆಂದು ಪರಲೋಕ ಮತ್ತು ಪಾಪಪುಣ್ಯ ಧರ್ಮಾದಿಗಳ ಕಲ್ಪನೆಯನ್ನು ಅವರಲ್ಲಿ ಬಿತ್ತಿರುವದು ಈ ಎಲ್ಲ ಧಾರ್ಮಿಕ ಕಲ್ಪನೆಗಳು ಮಿಥ್ಯಾವಾದವೂ, ಒಂದು ವರ್ಗದ ದಬ್ಬಾಳಿಕೆಯನ್ನು ಮತ್ತೊಂದು ವರ್ಗದ ಮೇಲೆ ಹೇರಬೇಕೆಂದು ರಚನೆ ಮಾಡಿದವೂ ಆಗಿರುತ್ತವೆ. ಆದ್ದರಿಂದ ಈ ದೃಶ್ಯವಾದ ವಿಷಯಸುಖವೇ ಎಲ್ಲರಿಗೂ ಸಮನಾಗಿ ಸಿಗುವಂತೆ ಸಮಾಜದ ರಚನೆಯನ್ನು ಮಾಡುವದೇ ಇವರಿಗೆ ಸಾಮಾಜಿಕ ಸುಖದ ತಳಹದಿಯಾಗುತ್ತದೆ. ಇವರಿಗೆ ತಾಮಸೀ ಅಥವಾ ಆಸುರೀ ಸಂಪತ್ತಿಯ ಜನರೆಂದು ಭಗವದ್ಗೀತೆಯಲ್ಲಿ ಹೇಳಲಾಗಿದೆ. ಆದ್ದರಿಂದಲೇ ಅಲ್ಲಿ द्वौ भूत सर्गौ लोकेस्मिन् दैव आसुर एवच ಎಂದು ಭಗವಂತನು ಎಲ್ಲ ಜೀವಗಳ ವಿಭಾಗವನ್ನು ದೈವ ಮತ್ತು ಆಸುರ ಎಂಬ ಎರಡು ವರ್ಗಗಳಲ್ಲಿ ಮಾಡಿದ್ದಾನೆ.

ದೈವೀ ಸಂಪತ್ತಿಯ ತಳಹದಿಯ ಮೇಲೆ ಯಾವ ಸಮಾಜದ ರಚನೆಯಾಗಿರುವದೋ ಅದಕ್ಕೆ ಆರ್ಯಸಮಾಜವೆಂದೂ, ಆಸುರೀ ಸಂಪತ್ತಿಯ ತಳಹದಿಯ ಮೇಲೆ ಯಾವ ಸಮಾಜದ ರಚನೆಯಾಗಿರುವದೋ ಅದಕ್ಕೆ ಅನಾರ್ಯ ಅಥವಾ ರಾಕ್ಷಸೀ ಸಮಾಜವೆಂದೂ ಅನ್ನಬಹುದು. ಈ ದೈವೀ ಮತ್ತು ಆಸುರೀ ಸಂಪತ್ತಿಗಳ ಪರಸ್ಪರ ಬಡಿದಾಟದಿಂದಲೇ ಈ ಸಂಸಾರವು

ಸಾಗಿದೆ ಕೆಲವು ಸಾರೆ ಆಸುರೀ ಸಂಪತ್ತು ಪ್ರಬಲವಾಗಿ ದೈವೀ ಸಂಪತ್ತನ್ನೂ, ಇನ್ನು ಕೆಲವು ಸಾರೆ ದೈವೀ ಸಂಪತ್ತು ಪ್ರಬಲವಾಗಿ ಆಸುರೀ ಸಂಪತ್ತನನ್ನು ಪರಾಭವಗೊಳಿಸುತ್ತವೆ. ಈ ಬಡಿದಾಟದ ವರ್ಣನೆಯನ್ನು ಭಗವದ್ಗೀತೆಯ ೧೪ ನೇ ಅಧ್ಯಾಯದ ೧೦ ನೇ ಶ್ಲೋಕದಲ್ಲಿಯೂ, ಆಸುರೀ ಮತ್ತು ದೈವೀ ಸಂಪತ್ತುಗಳ ಯಥಾಯೋಗ್ಯ ವರ್ಣನೆಯನ್ನು ೧೬ ನೇ ಅಧ್ಯಾಯದಲ್ಲಿಯೂ ವಾಚಕರು ಓದಬಹುದು. ದೈವೀ ಸಂಪತ್ತಿಯ ಫಲವು ಮೋಕ್ಷವೂ ಆಸುರೀ ಸಂಪತ್ತಿಯ ಫಲವು ಬಂಧನವೂ ಆಗಿರುವದೆಂದು ಅಲ್ಲಿಯೇ ಹೇಳಲಾಗಿದೆ ದैवी संपद्विमोक्षाय निबंधायासुरी मता । ಎಂದು. ಕಾಲ ಮತ್ತು ಕರ್ಮಗತಿಯಿಂದ ಈ ಆರ್ಯರ ಸಮಾಜದಲ್ಲಿ ಆಸುರೀ ಸಂಪತ್ತಿಯ ವ್ಯಕ್ತಿಗಳು ಜನ್ಮತಾಳಿ ಈ ಸಮಾಜದ ಮೂಲಭೂತವಾದ ತತ್ವಗಳನ್ನು ಮರೆತು ಕಾಮಕ್ರೋಧಾದಿ ಹೀನತರದ ಮನೋವಿಕಾರಗಳಿಗೆ ವಶರಾಗಿ ಈ ಸನಾತನ ಧರ್ಮದ ಬೇರೆ ಬೇರೆ ಅಂಗಗಳಾದ ಕಿಂಬಹುನಾ ಈ ಸೂಕ್ಷ್ಮವಾದ ಸನಾತನ ಧರ್ಮವೇ ವಿಕಾಸಹೊಂದಿ ಪರಿಣತವಾದ, ವ್ಯಕ್ತಿಧರ್ಮ, ರಾಷ್ಟ್ರಧರ್ಮ, ವರ್ಣಧರ್ಮ, ಆಶ್ರಮಧರ್ಮ, ಕುಲಧರ್ಮ, ಜಾತಿಧರ್ಮ, ಯುಗಧರ್ಮ ಮುಂತಾದ ಧರ್ಮ–ಶಾಖೆಗಳ ತಾರತಮ್ಯ ವನ್ನರಿಯದೆ ರಾಗದ್ವೇಷಯುಕ್ತ ಪಕ್ಷಪಾತದ ಆಚರಣೆಯಿಂದ, ಅಥವಾ ಈ ಧರ್ಮಗಳ ಪರಿತ್ಯಾಗಮಾಡಿ, ಅವರು ಗೀತೆಯಲ್ಲಿ ವರ್ಣಿಸಿದ ಸಂಕರ ವನ್ನುಂಟು ಮಾಡಿದರು. ಇದರಿಂದ ಸಮಾಜದಲ್ಲಿ ಆಸುರೀ ಶಕ್ತಿಯು ಬಲಶಾಲಿಯಾಗಿ, ಸ್ವಾರ್ಥ, ಕ್ರೂರತೆ ಮತ್ತು ಅಹಂಕಾರಗಳು ಸಾಮಾಜಿಕ ಐಕ್ಯವನ್ನೂ ಸ್ವಸಂರಕ್ಷಣೆಯ ಸಾಮರ್ಥ್ಯವನ್ನೂ ಇಲ್ಲದಂತೆ ಮಾಡಿದವು. ಇಂಥ ಸಮಾಜಸ್ಥಿತಿಯಲ್ಲಿ ಪರಚಕ್ರಗಳು ಆರ್ಯಾವರ್ತದ ಮೇಲೆ ದಾಳಿ ಮಾಡಿ, —ಅನಾರ್ಯ ರಾಷ್ಟ್ರಗಳು ಆರ್ಯರನ್ನು ಗೆದ್ದು ತಮ್ಮ ಪ್ರಭಾವ ಮತ್ತು ವರ್ಚಸ್ಸನ್ನು ಅವರ ಮೇಲೆ ಹೇರಿದರು. ಇದರಿಂದ ಆರ್ಯರ ಸಾಮಾಜಿಕ ಸ್ಥಿತಿಯು ಮತ್ತಿಷ್ಟು ಹೀನದೆಸೆಗೆ ಮುಟ್ಟಿತು. ಈ ತಾತ್ವಿಕ ವಿವೇಚನೆಯ ಸತ್ಯತ್ವವನ್ನು ನಾವು ನಮ್ಮ ದೇಶದ ಕಳೆದ ಹದಿನೈದುನೂರು ವರ್ಷಗಳ ಇತಿಹಾಸದಲ್ಲಿ ಕಾಣಬಹುದು. "**Discovery of India**" ಎಂಬ ಗ್ರಂಥದಲ್ಲಿ ಪಂ. ಜವಾಹಿರಲಾಲ ನೆಹರು ಅವರು ಅನ್ನುವದೇನಂದರೆ

"ಕ್ರಿಸ್ತೀಶಕದ ಮೊದಲನೆಯ ಒಂದು ಸಾವಿರ ವರ್ಷಗಳಲ್ಲಿಯೇ ಈ ನಮ್ಮ ಸಂಸ್ಕೃತಿಯು ಕೆಡಹತ್ತಿತ್ತು. ಈ ಕಾಲದಲ್ಲಿ ಈ ಸಂಸ್ಕೃತಿಯ ಅಲ್ಪಕಾಲಿಕ ಉನ್ನತಿ ಅವನತಿಗಳನ್ನು ಕಾಣಬಹುದಾದರೂ, ನೂರಾರು ವರ್ಷಗಳಿಂದ, ಉತ್ತರದಲ್ಲಿ ಆರಂಭವಾಗಿ ದಕ್ಷಿಣದ ಕೊನೆಯವರೆಗೆ ಸಾವಕಾಶವಾಗಿ ಹಬ್ಬುತ್ತಿದ್ದ ಆಂತರಿಕ ಕೊಳೆಯು ನಡೆದೇ ಇತ್ತು. ಈ ನಮ್ಮ ಸಾಂಸ್ಕೃತಿಕ ಮತ್ತು ರಾಜಕೀಯ ಅವನತಿಯ ಕಾರಣವೇನು? ವಯಸ್ಸಿನಿಂದ ಮನುಷ್ಯವ್ಯಕ್ತಿಯು ಸವೆಯುವಂತೆ ಸಂಸ್ಕೃತಿಯ ನಾಶವೂ ಕಾಲ ಮಹಿಮೆಯೇ ಆಗಿರಬಹುದೇ! ಅಥವಾ ಹೊರಗಿನ ಪರಚಕ್ರಗಳ ದಾಳಿಗಳು ಇದಕ್ಕೆ ಕಾರಣವಾಗಿರಬಹುದೇ! ಪ್ರೊ. ರಾಧಾಕೃಷ್ಣನ್ನರು ರಾಷ್ಟ್ರೀಯ ಸ್ವಾತಂತ್ರ್ಯವು ನಷ್ಟವಾದದ್ದರಿಂದ ನಮ್ಮ ತತ್ವಜ್ಞಾನದ ಪ್ರಭಾವವು ನಷ್ಟ-ವಾಯಿತೆಂದು ಹೇಳುವರು ........ರಾಷ್ಟ್ರದ ಪಾರತಂತ್ರ್ಯವು ಸಂಸ್ಕೃತಿಯ ನಾಶಕ್ಕೆ ಕಾರಣವಾಗತ್ತದೆಂಬದೇನೊ ನಿಜ. ಆದರೆ, ರಾಷ್ಟ್ರದ ರಾಜಕೀಯ ಸ್ವಾತಂತ್ರ್ಯವು ನಷ್ಟವಾಗುವ ಮೊದಲು ಸಾಮಾಜಿಕ ಕೊಳೆಯು ಇದ್ದ ಹೊರತು, ಈ ಸ್ವಾತಂತ್ರ್ಯವು ಯಾಕೆ ನಷ್ಟವಾಗಬೇಕು? ಒಂದು ಸಣ್ಣ ರಾಷ್ಟ್ರವು ಅದಕ್ಕಿಂತ ಹೆಚ್ಚು ಬಲಾಢ್ಯವಾದ ರಾಷ್ಟ್ರದಿಂದ ಪರಾಭೂತ ವಾಗಬಹುದು. ಆದರೆ, ಹಿಂದುಸ್ಥಾನದಂಥ ವಿಸ್ತೀರ್ಣವಾದ ಸುಸಂಸ್ಕೃತ ಮತ್ತು ಸಮೃದ್ಧವಾದ ರಾಷ್ಟ್ರವು ತನ್ನಲ್ಲಿಯೇ ಕೊಳೆ ಇದ್ದ ಹೊರತು, ಅಥವಾ ಪರಚಕ್ರಗಳ ಯುದ್ಧಕಲೆಯು ಹೆಚ್ಚು ಪ್ರಭಾವಶಾಲಿಯಾಗಿದ್ದ ಹೊರತು, ವೈರಿಗಳ ಹೊಡೆತಕ್ಕೆ ನುಗ್ಗಾಗುವದು ಶಕ್ಯವಿಲ್ಲ. ಈ ಪ್ರಕಾರದ ಆಂತರಿಕ ಕೊಳೆಯು ಹಿಂದುಸ್ಥಾನದಲ್ಲಿ ಕ್ರಿಸ್ತೀ ಶಕದ ಮೊದಲನೆಯ ಸಾವಿರ ವರ್ಷಗಳ ಕೊನೆಯ ಶತಮಾನದಲ್ಲಿಯೇ ಉಂಟಾದ ಚಿನ್ಹಗಳು ಸ್ಪಷ್ಟವಾಗಿ ಕಂಡುಬರುತ್ತವೆ. ಯಾವದೇ ಸಂಸ್ಕೃತಿಯು ಹೊರಗಿನ ಆಘಾತಗಳಿಗಿಂತ, ಒಳಗಿನ ಕೊಳೆಗೇ ತುತ್ತಾಗುವ ಸಂಭವವು ಹೆಚ್ಚು".

ಈ ಪ್ರಕಾರದ ಆಂತರಿಕ ಕೊಳೆಯೇ ನಮ್ಮ ಸಾಮಾಜಿಕ ಮತ್ತು ರಾಜಕೀಯ ಪಾರತಂತ್ರ್ಯಕ್ಕೆ ಕಾರಣವಾಯಿತೆಂಬ ಬಗ್ಗೆ ಯಾರ ಮತ ಭೇದವೂ ಇಲ್ಲ. ಆದರೆ, ಈ ಕೊಳೆಗೆ ಕಾರಣವೇನೆಂಬ ಬಗ್ಗೆ ಮಾತ್ರ

ರಾಷ್ಟ್ರಭಕ್ತರು ಬೇರೆ ಬೇರೆ ಮೀಮಾಂಸೆಯನ್ನು ತಮ್ಮ ತಮ್ಮ ವಿಚಾರದ ಭೂಮಿಕೆಯಿಂದ ಮಾಡುತ್ತಿದ್ದಾರೆ. ಹಿಂದುಗಳ ಕಟ್ಟಾದ ವರ್ಣವ್ಯವಸ್ಥೆಯಿಂದ ರಾಷ್ಟ್ರದ ಬೆಳವಣಿಗೆಯು ನಿಂತು, ಅವರ ಜೀವನ ಪ್ರವಾಹವು ಹೆತ್ತು ಗಟ್ಟಿಯಾಗಿ ಜಡಭಾವವನ್ನು ಹೊಂದಿತೆಂದು ಕೆಲವರ ಅಭಿಪ್ರಾಯವಿದೆ. ಕ್ಷತ್ರಿಯರ ಕರ್ತವ್ಯವು ರಾಷ್ಟ್ರಸಂರಕ್ಷಣೆಯನ್ನು ಮಾಡುವದಿದ್ದು, ಇತರರಿಗೆ ಇದರಲ್ಲಿ ಆಸ್ತೆ ಇರಲಿಲ್ಲವಿಷ್ಟೇ ಅಲ್ಲ, ಇತರರಿಗೆ ಈ ಕರ್ತವ್ಯವನ್ನು ಮಾಡುವದು ಧರ್ಮಬಾಹ್ಯವಾಗಿತ್ತು; ಅದೇ ಪ್ರಕಾರ, ಬ್ರಾಹ್ಮಣ ಅಥವಾ ಕ್ಷತ್ರಿಯರು ವ್ಯಾಪಾರೋದ್ಯಮವನ್ನಾಗಲಿ ಸೇವೆಯನ್ನಾಗಲಿ ಮಾಡುವದು ಅಧರ್ಮವೆಂದು ತಿಳಿದಿದ್ದರು. ಶೂದ್ರರಿಗೆ ಶಿಕ್ಷಣ ಮತ್ತು ಮೇಲ್ತರಗತಿಯ ಜೀವನ ಸಾಧನಗಳನ್ನು ದೊರಕಿಸಲಿಕ್ಕೆ ಸಮಾಜದಲ್ಲಿ ಯೋಗ್ಯ ಸಂಧಿಯು ದೊರಕುತ್ತಿರಲಿಲ್ಲ. ಅವರು ಮೇಲಿನ ವರ್ಗಗಳ ಸೇವೆ ಮಾಡುವದೇ ಅವರ ಧರ್ಮವೆಂದು ಅವರಿಗೆ ಹೇಳಲಾಗುತ್ತಿತ್ತು. ಈ ವ್ಯವಸ್ಥೆಯಿಂದಲೇ ಹಿಂದುಗಳ ರಾಷ್ಟ್ರಜೀವನದಲ್ಲಿ ಬೇರೆ ಬೇರೆ ವಿಭಾಗಗಳಾಗಿ ರಾಷ್ಟ್ರದ ಬೆಳವಣಿಗೆಯು ನಿಂತಿತೆಂದೂ, ಅಂತಃಕಲಹಗಳು ಬೆಳೆದು ರಾಷ್ಟ್ರಹಾನಿಯಾಯಿತೆಂದೂ ಅವರ ಅಭಿಪ್ರಾಯ. ಆದ್ದರಿಂದ ಈ ವ್ಯವಸ್ಥೆಯನ್ನು ಪೂರ್ಣವಾಗಿ ನಷ್ಟಗೊಳಿಸಿ, ಪಾಶ್ಚಾತ್ಯರ ಅನುಕರಣಮಾಡಿ ವರ್ಣವಿಹೀನವಾದ ರಾಷ್ಟ್ರವನ್ನು ನಿರ್ಮಾಣಮಾಡುವದೇ ನಮ್ಮ ಗುರಿ ಇರಬೇಕೆಂದು ಅವರು ಪ್ರತಿಪಾದಿಸುತ್ತಾರೆ. ಆದರೆ, ಈ ವರ್ಣವ್ಯವಸ್ಥೆಯಿಂದ ಹಿಂದೂ ಜನಾಂಗದ ಮೇಲಾದ ಲಾಭಗಳನ್ನು ಈ ವ್ಯವಸ್ಥೆಯ ವಿರೋಧಕರೇ ಮುಕ್ತಕಂಠದಿಂದ ವರ್ಣಿಸಿದ್ದಾರೆ. ಪಂಡಿತ ಜವಾಹಿರಲಾಲರು ಉಪರೋಕ್ತ ತಮ್ಮ ಗ್ರಂಥದಲ್ಲಿ ಹಿಂದುಸ್ತಾನದ ಕಳೆದ ಇತಿಹಾಸವನ್ನು ಸೂಕ್ಷ್ಮರೀತಿಯಿಂದ ಅವಲೋಕನ ಮಾಡಿ ಪಾಶ್ಚಾತ್ಯರ ವರ್ಣವಿಹೀನ ಸಾಮಾಜಿಕ ರಚನೆಗಿಂತ ಆರ್ಯರ ವರ್ಣವ್ಯವಸ್ಥೆಯಲ್ಲಿ ವಿರೋಧಕ ಶಕ್ತಿಯನ್ನು ಹಿಮ್ಮೆಟ್ಟುವ ಆಶ್ಚರ್ಯಕರವಾದ ಜಿಗಟುತನವು ಇದ್ದದ್ದು ಕಂಡುಬರುತ್ತದೆಂದು ಹೇಳಿದ್ದಾರೆ. ಪಾಶ್ಚಾತ್ಯ ರಾಷ್ಟ್ರಗಳಲ್ಲಿ—ಉದಾಹರಣಾರ್ಥವಾಗಿ ರೋಮನರ ಸಾಮ್ರಾಜ್ಯದಲ್ಲಿ—ಉಂಟಾದ ಆಂತರಿಕ ಕೊಳೆಯಿಂದ ಅವರ ಸಂಸ್ಕೃತಿಯು ವಿರೋಧಕ ಶಕ್ತಿಗಳೆದುರಿಗೆ ಒಮ್ಮೆಲೇ ಕುಸಿದು ಬಿದ್ದಂತೆ,

ಆರ್ಯ ಸಂಸ್ಕೃತಿಯು ನಷ್ಟವಾಗಲಿಲ್ಲ. ಆದರೆ, ಹಿಂದುಗಳ ಜಾತಿವ್ಯವಸ್ಥೆಯಿಂದ ಒಂದಕ್ಕೊಂದು ಸೇರಿಕೆ ಇಲ್ಲದ ಬಿರುಸುತನವೂ ಜಾಡ್ಯತೆಯೂ ಉಂಟಾಗಿ ಈಗಿನ ಹಿಂದೂ ಸಮಾಜದ, ಅವನತಿಯಾಯಿತೆಂದೂ, ಹಿಂದಿನ ಪರಿಸ್ಥಿತಿಗೆ ವರ್ಣಾಶ್ರಮ ವ್ಯವಸ್ಥೆಯು ಉಪಯುಕ್ತವಾದಾಗ್ಯೂ ಈಗಿನ ಬದಲಾದ ಪರಿಸ್ಥಿತಿಯಲ್ಲಿ ಆ ಧ್ಯೇಯವು ಹಿಂದೀ ಸಮಾಜದ ಪುನಃರಚನೆಯಲ್ಲಿ ತ್ಯಾಜ್ಯವಾಗಿರುವದೆಂದೂ ಅವರ ತರ್ಕವಿದ್ದಂತೆ ತೋರುತ್ತದೆ. ಈ ತರ್ಕವು ಎಷ್ಟರ ಮಟ್ಟಿಗೆ ಯೋಗ್ಯವಾದದ್ದೆಂಬದು ವಿಚಾರಾರ್ಹವಾಗಿದೆ.

ಸಮಾಜದ ಸ್ಥೂಲ ವ್ಯವಹಾರದಲ್ಲಿ ಯಾವದಾದರೊಂದು ವ್ಯವಸ್ಥೆಯು ಬೇಕೇ ಬೇಕು. ವ್ಯವಸ್ಥೆಯಿಲ್ಲದ ಸಮಾಜವು ಅವ್ಯವಹಾರ್ಯವಾಗಿ ಕೂಡಲೇ ನಷ್ಟವಾಗುವದು. ಅದ್ದರಿಂದ, ಒಂದಿಲ್ಲೊಂದು ಪ್ರಕಾರದ ಅನುಲ್ಲಂಘನೀಯವಾದ ಕಟ್ಟಳೆಗಳಿಂದೊಡಗೂಡಿದ ವ್ಯವಸ್ಥೆಯು ಪ್ರತಿಯೊಂದು ಸಮಾಜದಲ್ಲಿ ಕಂಡೇ ಬರುತ್ತದೆ. ಆದರೆ, ಈ ವ್ಯವಸ್ಥೆಯ ಸ್ವರೂಪವು ಮಾತ್ರ ಆ ಆ ಸಾಮಾಜಿಕ ಧ್ಯೇಯಗಳ ವಿವಿಧತೆಯ ಮೂಲಕ ವಿವಿಧವಾಗಬಹುದು ಇದಲ್ಲದೆ ಎಲ್ಲ ಸಾಮಾಜಿಕ ವ್ಯವಹಾರಗಳಲ್ಲಿ ವ್ಯಕ್ತಿಗಳ ಗುಣ ಮತ್ತು ಕರ್ಮಗಳ ವಿವಿಧತೆಯಿಂದ ವ್ಯಕ್ತಿಸ್ವಭಾವದ ವಿವಿಧತೆಯೂ, ಉಚ್ಚ-ನೀಚ ಭಾವವೂ ಕಂಡುಬರುತ್ತವೆ. ಈ ವಿವಿಧತೆಯನ್ನು ನಷ್ಟಮಾಡುವದು ಯಾವ ಸಮಾಜಕ್ಕೂ ಇಂದಿನವರೆಗೆ ಶಕ್ಯವಾಗಿರುವದಿಲ್ಲ. ಈಗಿನ ಆದರ್ಶಭೂತ ಪುರೋಗಾಮಿ ಪಾಶ್ಚಾತ್ಯ ಸಮಾಜಗಳ ಅವಲೋಕನೆಯನ್ನು ಮಾಡಿದವರಿಗೂ ಈ ಮಾತು ಸ್ಪಷ್ಟವಾಗಿ ಕಾಣುವಂತಿದೆ. ಪಾಶ್ಚಾತ್ಯ ಸಮಾಜ ಶಾಸ್ತ್ರಜ್ಞರು ವ್ಯಕ್ತಿಗತ ಸ್ವಾತಂತ್ರ್ಯ ಸಮತೆ ಮತ್ತು ಬಂಧುತೆಗಳ ಮೇಲೆ ಸಮಾಜರಚನೆಯನ್ನು ಮಾಡಿ ಈ ಸಾಮಾಜಿಕ ವಿವಿಧತೆಯನ್ನು ನಷ್ಟಮಾಡಲು ಹವಣಿಸುತ್ತಿದ್ದಾರೆ. ಆದರೆ, ಅದರ ಪರಿಣಾಮವಾಗಿ ಸಾಮಾಜಿಕ ಅವ್ಯವಸ್ಥೆಯೇ ಉಂಟಾದದ್ದು ಕಂಡುಬರುತ್ತದೆ. ಈ ವಿವಿಧತೆಯು ಸಮಾಜ ರಚನೆಯಲ್ಲಿಯ ದೋಷಗಳ ಮೂಲಕ ಉಂಟಾಗಿದ್ದು, ನಿರ್ದುಷ್ಟ ಸಮಾಜ ರಚನೆಯನ್ನು ಉಂಟುಮಾಡುವದರಿಂದ ಗುಣ ಮತ್ತು ಕರ್ಮಗಳ ವಿವಿಧತೆಯು ನಷ್ಟವಾಗಿ

ಜನತೆಯು ಸುಖಸಮಾಧಾನಗಳಿಂದ ನೆಲೆಯುಬಹುದೆಂದು ಅವರ ಕಲ್ಪನೆ. ಆದರೆ, ಸಾಮಾಜಿಕ ಸಮತೆಯನ್ನುಂಟುಮಾಡುವದರಿಂದ ಗುಣ ಮತ್ತು ಕರ್ಮಗಳ ಸಮತೆಯು ಉಂಟಾಗುವದೋ, ಅಥವಾ ಈ ಗುಣಕರ್ಮಗಳು ನಿಸರ್ಗತಃ ವಿಷಮವಿದ್ದು, ಅವು ವಿಷಮ ಸಮಾಜವನ್ನುಂಟುಮಾಡುವವೋ ? ಎಂಬ ಮೂಲಭೂತ ಪ್ರಶ್ನೆಯಲ್ಲಿಯ ಯಥಾರ್ಥ ಕಾರ್ಯಕಾರಣ ಭಾವವನ್ನು ತಿಳಿದುಕೊಳ್ಳುವದರಿಂದ ಈ ಪ್ರಮೇಯವು ಬಿಡುವಂತಿದೆ.

ಇಲ್ಲಿ ಒಂದು ಉದಾಹರಣೆಯನ್ನು ಕೊಡಬಹುದು. ಮನೆಗೆ ನೀರು ಹಾಕುವ ಸೇವಕನು ಪ್ರತಿದಿನ ಮುಂಬಂಡಿಯನ್ನು ಮುಂದೆ ನೂಕುತ್ತ ನೀರು ತರುವದನ್ನು ಒಬ್ಬ ಬಾಲಕನು ಕಂಡಿದ್ದನು. ಅವನ ಅನುಭವದಂತೆ ಗಾಡಿಯ ಹಿಂದೆ ನಿಂತು ಸೇವಕನು ಗಾಡಿಯನ್ನು ನೂಕುತ್ತಿದ್ದ ಕಾರಣ ನೂಕುವ ಶಕ್ತಿಯು ಯಾವಾಗಲೂ ಹಿಂದಿನದೆಂದೂ ನೂಕಲ್ಪಡುವ ವಸ್ತುವು ಮುಂದಿನದೆಂದೂ ಅವನ ಭಾವನೆಯಾಗಿತ್ತು. ಒಂದು ದಿನ ಅವನು ಎರಡು ಎತ್ತುಗಳಿಂದ ಎಳೆಯಲ್ಪಡುವ ಚಕ್ಕಡಿಯನ್ನು ಪ್ರಥಮದಲ್ಲಿಯೇ ಕಂಡನು. ಆ ಮಗುವು ತಂದೆಯನ್ನು ಕೇಳಿದ್ದೇನೆಂದರೆ “ ಅಪ್ಪಾ! ಈ ಚಕ್ಕಡಿಯು ಎತ್ತನ್ನು ಎಲ್ಲಿಗೆ ನೂಕುತ್ತ ನಡೆದಿದೆ ? ” ತಂದೆ :— “ ಹುಚ್ಚಾ ! ಎತ್ತು ಗಾಡಿಯನ್ನು ನೂಕುವದೋ ? ಗಾಡಿಯು ಎತ್ತನ್ನು ನೂಕುವದೋ ? ” ಮಗು :— “ ಹಿಂದಿನ ವಸ್ತುವು ಯಾವಾಗಲೂ ಮುಂದಿನ ವಸ್ತುಹನ್ನು ನೂಕುವದೆಂಬದನ್ನು ನಾನು ಪ್ರತಿದಿನ ನೋಡುತ್ತೇನೆ. ಅದರಂತೆ ಹಿಂದಿನ ಗಾಡಿಯೇ ಎತ್ತನ್ನು ನೂಕುತ್ತದೆ. ” ಈ ಉದಾಹರಣೆಯಲ್ಲಿಯ ಆ ಬಾಲಕನ ತರ್ಕವು ಅತಿ ಶುದ್ಧವಾದದ್ದಿದೆ. ಆದರೆ ಅನುಭವ ರಹಿತನಾದ ಆ ಬಾಲಕನ ತರ್ಕವು ವಸ್ತುಸ್ಥಿತಿಗೆ ಮಾತ್ರ ವಿಪರೀತವಾದದ್ದು. ಚೇತನ ವಸ್ತುವಿನಲ್ಲಿಯೇ ಈ ಶಕ್ತಿಯನ್ನುಂಟುಮಾಡುವ ಸಾಮರ್ಥ್ಯವಿರುವದೆಂಬ ಅನುಭವದ ಮಾತು ಆ ಅಜ್ಞಬಾಲಕನಿಗೇನು ಗೊತ್ತು ? ಅದೇ ಪ್ರಕಾರ ಪಾಶ್ಚಾತ್ಯರ ಜಡವಾದದಲ್ಲಿಯೇ ನುರಿತ ನಮಗೆ ಜಡರೂಪದ ಸಮಾಜ ರಚನೆಯಿಂದ ಚೇತನ ಸ್ವರೂಪನಾದ ಮನುಷ್ಯನಲ್ಲಿ ಜಡತ್ವ ಅಥವಾ ಚಪಲತ್ವಾದಿ ಗುಣಗಳು ಉತ್ಪನ್ನವಾಗದೆ ಚೇತನ

ಸ್ವರೂಪನಾದ ಮನುಷ್ಯನೇ ಈ ಜಡಸಮಾಜ ರಚನೆಯಲ್ಲಿ ಚೇತನತ್ವ ವನ್ನುಂಟು ಮಾಡುವನೆಂಬ ಸಂಗತಿಯು ಇನ್ನೂ ಚನ್ನಾಗಿ ತಿಳಿದಂತೆ ಕಾಣುವದಿಲ್ಲ. ಆದರೆ ಮನುಷ್ಯನ ಬುದ್ಧಿಕೌಶಲ್ಯದ ಪ್ರಕಾರ ಅವನ ಸಮಾಜ ರಚನೆಯು ಹೆಚ್ಚು ಬಲಶಾಲಿಯಾದದ್ದು ಅಥವಾ ದುರ್ಬಲ ವಾದದ್ದು ಇರಬಹುದು. ಮನುಷ್ಯನು ತಯಾರಿಸಿದ ಚಕ್ಕಡಿಗಿಂತ ಅವನೇ ತಯಾರಿಸಿದ ಉಗಿಬಂಡಿಯು ಹೆಚ್ಚು ಪ್ರಭಾವಶಾಲಿಯಾಗಬಹ ದು. ಆದರೆ ಮನುಷ್ಯನಲ್ಲಿಯ ಈ ರಚನಾ-ಕೌಶಲ್ಯದ ಉತ್ಪತ್ತಿ ಅಥವಾ ನಾಶವು ಮಾತ್ರ ತಯಾರಾದ ಚಕ್ಕಡಿ ಅಥವಾ ಉಗಿಬಂಡಿಯ ಮೇಲೆ ಅವಲಂಬಿಸಿರಲಾರದು. ಮನುಷ್ಯನ ಸ್ವಭಾವ ರಚನೆಯಲ್ಲಿಯ ಸದ್ಗುಣಗಳ ಉತ್ಪತ್ತಿ ಅಥವಾ ನಾಶವು ಬೇರೊಂದು ಸಂಗತಿಯ ಮೇಲೆ ಅವಲಂಬಿಸಿರುವದೆಂಬದನ್ನು ನಾವು ತಿಳಿಯತಕ್ಕದ್ದಿದೆ. ಆದರೆ ಈ ಗುಣಗಳ ವಿಕಾಸಕ್ಕೆ ಕೆಲವು ಸಮಾಜ ರಚನೆಯಿಂದ ಹೆಚ್ಚು ಉತ್ತೇಜನ ದೊರೆಯಬಹುದು ಅಥವಾ ಅದರಿಂದ ಅವನಲ್ಲಿ ಮೂಲತಃ ಇದ್ದ ಸದ್ಗುಣ ಅಥವಾ ದುರ್ಗುಣಗಳು ಯೋಗ್ಯ ವಿಕಾಸವನ್ನು ಹೊಂದದೆ ಉಳಿಯಬಹುದು. ಆದ್ದರಿಂದ, ಮನುಷ್ಯ ಸ್ವಭಾವದಲ್ಲಿಯ ಎಲ್ಲ ಸದ್ಗುಣಗಳು ವಿಕಾಸಹೊಂದಿ ದುರ್ಗುಣಗಳ ವಿಕಾ ಸಕ್ಕೆ ಅವಕಾಶ ದೊರೆಯದಂತೆ ಸಮಾಜದ ರಚನೆ ಮಾಡಲಿಕ್ಕೆ ಮನುಷ್ಯ ಸ್ವಭಾವದ ಆಳವಾದ ಜ್ಞಾನದ ಆವಶ್ಯಕತೆ ಇರುತ್ತದೆ. ನಮ್ಮ ಶ್ರುತಿಸ್ಮೃತಿ ಸಮ್ಮತವಾದ ಸಮಾಜದ ರಚನೆಯನ್ನು ಮಾಡಿದ ಋಷಿಗಳು ಈಗಿನ ಪಾಶ್ಚಾತ್ಯ ಸಮಾಜಶಾಸ್ತ್ರಜ್ಞರಿಗಿಂತ ಹೆಚ್ಚು ಬುದ್ಧಿಶಾಲಿಗಳೂ ಸೂಕ್ಷ್ಮ ದೃಷ್ಟಿಯುಳ್ಳವರೂ ಆಗಿದ್ದರೆಂಬ ಸಂಗತಿಯನ್ನು ಆರ್ಯರ ವರ್ಣ ವಿಶಿಷ್ಟ ಸಮಾಜರಚನೆಯು ಪಾಶ್ಚಾತ್ಯರ ಸಮತಾವಿಶಿಷ್ಟ ಸಮಾಜರಚನೆಗಿಂತ ಹೆಚ್ಚು ಹಿತಕರವಾದದ್ದೂ, ಮನುಷ್ಯನ ಅಂತಿಮ ಗುರಿಯನ್ನು ಮುಟ್ಟಲಿಕ್ಕೆ ಹೆಚ್ಚು ಬಲಶಾಲಿಯಾದದ್ದೂ ಆಗಿರುವದೆಂಬ ಸಂಗತಿಯ ಮೇಲಿಂದ ಕಂಡು ಹಿಡಿಯಬಹುದು. ನಮ್ಮ ಸಮಾಜರಚನೆಯು ಹೇಗೆ ಹೆಚ್ಚು ಯೋಗ್ಯ ವಾಗಿರುವದೆಂಬದನ್ನು ತುಲನಾತ್ಮಕ ದೃಷ್ಟಿಯಿಂದ ಮುಂದೆ ಸ್ವಲ್ಪದರಲ್ಲಿ ನಮಗೆ ತೋರಿಸುವದಿದೆ. ಆದರೆ, ಇಲ್ಲಿ ಪಾಶ್ಚಾತ್ಯ ಶಿಕ್ಷಣದ ಪ್ರಭಾವದಿಂದ ನಮ್ಮಲ್ಲಿ ನೆಲೆ ಊರಿದ ಮತ್ತು ಅವರ ಸಮಾಜರಚನೆಯ ತಳಹದಿಯಾದ

ಕೆಲವು ತತ್ವಗಳ ಊಹಾಪೋಹ ಮಾಡಿ, ಅದನ್ನು ನಮ್ಮ ತತ್ವಜ್ಞಾನದ ಸಂಗಡ ತುಲನಾತ್ಮಕ ದೃಷ್ಟಿಯಿಂದ ವಾಚಕರೆದುರಿಗೆ ಇಡುವದು ಹೆಚ್ಚು ಉದ್ಬೋಧಕವಾಗಬಹುದೆಂದೆನಿಸುತ್ತದೆ.

ಪಾಶ್ಚಾತ್ಯ ದೇಶಗಳಲ್ಲಿ ಭೌತಿಕ ಶಾಸ್ತ್ರಗಳ ಪ್ರಭಾವವು ಹೆಚ್ಚು ಬೆಳೆದಿದ್ದರಿಂದಲೂ, ಕೆಲಮಟ್ಟಿಗೆ, ಅವರ ಈಗಿನ ಜಗತ್ತಿನ ಮೇಲಿನ ಸಾಮ್ರಾಜ್ಯವು ಈ ಶಾಸ್ತ್ರಗಳ ಸಹಾಯದಿಂದಲೇ ವೃದ್ಧಿಂಗತವಾದದ್ದರಿಂದಲೂ, ಅವರ ಸಾಮಾಜಿಕ ಸುಖಸಮಾಧಾನಗಳ ಸಾಧನವು ಈ ಶಾಸ್ತ್ರವೇ ಆದದ್ದರಿಂದಲೂ, ಆ ಸಮಾಜಗಳಲ್ಲಿಯು ಮತ್ತು ಇತರ ಸರ್ವಸಾಮಾನ್ಯ ಜನತೆಯು ತಿಳುವಳಿಕೆಯು ಭೌತಿಕ ಪದಾರ್ಥಗಳೇ ಜಗತ್ತಿನ ಆದ್ಯ ತತ್ವಗಳೆಂದು ಆಗಿರುತ್ತದೆ. ಅಚೇತನ ಪಂಚಭೂತಗಳೇ ವಿಶಿಷ್ಟರಚನೆಯಿಂದ ಚೇತನತ್ವವನ್ನು ಹೊಂದುವವೆಂದು ತಿಳಿಯುವದೇ ಜಡವಾದ ಅಥವಾ ಭೌತಿಕವಾದ. ಈ ವಾದವು ಅನಾದಿಕಾಲದಿಂದಲೂ ಮನುಷ್ಯ ಜನಾಂಗಗಳಲ್ಲಿ ಇದ್ದದ್ದು ಕಂಡುಬರುತ್ತದೆ. ಇದೊಂದು ಪಾಶ್ಚಾತ್ಯರ ಸ್ವತಂತ್ರ ಶೋಧವಾಗಿರುವದಿಲ್ಲ. ನಮ್ಮಲ್ಲಿಯು ಚಾರ್ವಾಕ ವಾದವು ಈ ವಾದಕ್ಕೆ ಮುಖ್ಯ ಮುಖ್ಯ ಸಂಗತಿಗಳಲ್ಲಿ ಹೋಲುತ್ತದೆ. ಜಗತ್ತಿನಲ್ಲಿ ಅತ್ಯಂತ ಪುರಾತನವೆನಿಸಿದ ವೇದಗ್ರಂಥಗಳಲ್ಲಿಯೂ ಈ ವಾದದ ಉಲ್ಲೇಖಗಳು ಕಂಡುಬರುತ್ತವೆ. ಈ ವಾದದ ಸಂಕ್ಷೇಪವಾದ ವರ್ಣನೆಯನ್ನು ಸ್ವಾಮೀ ವಿದ್ಯಾರಣ್ಯರು ಬರೆದ ಸರ್ವದರ್ಶನ ಸಂಗ್ರಹದಲ್ಲಿ ಕಾಣಬಹುದು ಈಗಿನ ಭೌತಕ ವಾದವು ಹಳೇ ಚಾರ್ವಾಕರ ಮತವನ್ನೇ ವಿವರಿಸುವ ಮತ್ತೊಂದು ಪ್ರಕಾರವಾಗಿರುತ್ತದಿಷ್ಟೇ. ಈಗಿನ ಭೌತಿಕ ವಾದದ ಸಿದ್ಧಾಂತಗಳು ಸಂಕ್ಷೇಪವಾಗಿ ಕೆಳಗಿನಂತೆ ಇವೆ.

" ಈ ಮತವು, ಈಶ್ವರನೆಂಬ ಸರ್ವಸ್ವತಂತ್ರ ಚೇತನ ಶಕ್ತಿಯು ಇರುವದೆಂಬದನ್ನೂ, ಅವನೇ ಈ ಜಗತ್ತಿನ ಮೂಲಕಾರಣನೆಂಬದನ್ನೂ, ಈವನೇ ಈ ಜಗತ್ತಿನ ಉತ್ಪತ್ತಿ-ಸ್ಥಿತಿ-ಲಯಗಳಿಗೆ ಕಾರಣನಾಗಿ, ಜಗತ್ತಿನ ಅಶನಾಗಿರುವನೆಂಬದನ್ನೂ ಅಲ್ಲಗಳೆಯುತ್ತದೆ ಅಚೇತನ ಪಂಚಭೂತಗಳೇ

ಯಾವದಾದರೊಂದು ರೂಪದಿಂದ ಜಗತ್ತಿನ ಪೂರ್ವದಲ್ಲಿಯೂ ಜಗತ್ತಿನ ನಾಶವಾದ ಮೇಲೆಯೂ ಇರಬಾರದೆಂದು ವಿಶ್ವಾಸವಿಡಲಿಕ್ಕೆ ಸಾಧನಗಳು ದೊರೆತಿಲ್ಲವೆಂದು ಅದು ಹೇಳುವದು. ಈ ಜಗತ್ತಿನ ನಿರ್ಮಿತಿಯಲ್ಲಿ ಏನಾದರೊಂದು ಉದ್ದೇಶವು ಇರುವದೆಂಬದನ್ನೂ, ಈ ಜಗತ್ತಿನ ಘಟನೆಯಲ್ಲಿ ಸಾಧಿಸತಕ್ಕ ಏನಾದರೊಂದು ಗುರಿ ಇರುವದೆಂಬದನ್ನೂ ಭೌತಿಕಜ್ಞರು ಒಪ್ಪುವದಿಲ್ಲ. ಚೇತನ ವಸ್ತುಗಳಲ್ಲಿ ಮಾತ್ರ ಜೀವನೋದ್ದೇಶವು ಕಂಡುಬರುತ್ತದೆ. ಇವುಗಳಲ್ಲಿಯೂ ಮನುಷ್ಯಪ್ರಾಣಿಗೆ ಮಾತ್ರ, ತಿಳಿದಷ್ಟರಮಟ್ಟಿಗೆ, ಈ ಉದ್ದೇಶದ ಜ್ಞಾನವಿದ್ದು, ಅವನು ತನ್ನ ಉದ್ದೇಶವನ್ನು ಸಾಧಿಸುವದಕ್ಕಾಗಿ ತನ್ನ ಸಮಾಜವನ್ನೂ ಮತ್ತು ಹೊರಗಿನ ಜಗತ್ತನ್ನೂ ಸ್ವಾಧೀನಪಡಿಸಿಕೊಳ್ಳಲಿಕ್ಕೆ ಹವಣಿಸುತ್ತಾನೆ. ಮನುಷ್ಯಪ್ರಾಣಿಯ ಉತ್ಪತ್ತಿಯು ಈ ಜಗತ್ತಿನ ಭೌತಿಕ ಪದಾರ್ಥಗಳಿಂದಲೇ ಆಗಿದ್ದು, ಅವುಗಳಲ್ಲಿಯೇ ಮತ್ತು ಅವುಗಳಿಂದಲೇ ಅವನು ವೃದ್ಧಿಂಗತನಾಗುವನು. ಈ ಜಗತ್ತಿನಲ್ಲಿಯ ಪ್ರಾಣಿಗಳ ಚೇತನತ್ವವು ನಿಸರ್ಗದಿಂದಲೇ ಸಿದ್ಧವಾಗಿದೆ; ಅಂದರೆ, ಆಕಾಶದಲ್ಲಿಯ ನಕ್ಷತ್ರ ಸೂರ್ಯಚಂದ್ರಾದಿ ಗ್ರಹಗಳ ಗತಿಯಾಗಲಿ, ಸಮುದ್ರದ ಏರಿಳಿತಗಳಾಗಲಿ, ಋತುಗಳ ಗಮನಾಗಮನಗಳಾಗಲಿ ಹೇಗೆ ನಿಸರ್ಗ ಸಿದ್ಧವಾಗಿರುವವೋ, ಹಾಗೆಯೇ ಅಚೇತನತ್ವದಿಂದ ಚೇತನತ್ವದ ಬೆಳವಣಿಗೆಯು ಈ ನಿಸರ್ಗದ್ದೇ ನಿಯಮಬದ್ಧ ಸ್ವರೂಪವಾಗಿದೆ. ಹಾಗೂ ನಿಸರ್ಗದಿಂದ ತಯಾರಿಸಲ್ಪಟ್ಟ ಈ ಚೌಕಟ್ಟಿನಲ್ಲಿ ಮನುಷ್ಯನ ಜೀವವು ಅವನಿಗೆ ಮಾತ್ರವೇ ಸಂಬಂಧಿಸಿದ್ದು, ಮನುಷ್ಯನು ಸಂಘಾತದಿಂದ ಅಥವಾ ಸಾಂಘಿಕ ಸಹಕಾರ್ಯದಿಂದ ಈ ಜೀವನವನ್ನು ಯಾವ ಪ್ರಕಾರ ಸಂಘಟಿಸುವನೋ ಹಾಗೆ ಅದು ಸಿದ್ಧವಾಗುತ್ತದೆ. ಈ ಭೂಮಿಯಲ್ಲಿರುವ ಎಲ್ಲ ಸೇಂದ್ರಿಯ ಪ್ರಾಣಿಗಳಲ್ಲಿ ಮನುಷ್ಯಪ್ರಾಣಿಯು ಪಡೆದ ತನ್ನ ಸ್ಥಾನದ ಪರಿಣಾಮವಾಗಿಯೂ, ಯಾವದೊಂದು ವಿಶಿಷ್ಟ ಕಾಲದಲ್ಲಿದ್ದ ಅವನ ಆರ್ಥಿಕ ಮತ್ತು ಸಾಮಾಜಿಕ ಪರಿಸ್ಥಿತಿಯ ಮೂಲಕವೂ, ಅವನಲ್ಲಿ ಕಂಡುಬರುವ ಎಲ್ಲ ಮನೋವಿಕಾರಗಳೂ, ಭಾವನೆಗಳೂ, ಕಲ್ಪನೆಗಳೂ, ಆಕಾಂಕ್ಷೆಗಳೂ ಉದ್ಭವಿಸುತ್ತವೆ." **'What is Philosophy'** *by* **Howard Selsam.**

ಈ ಜಗತ್ತು ಹೇಗೆ ನಿರ್ಮಾಣವಾಯಿತು? ಮತ್ತು ಅದರಲ್ಲಿ ಈ ಮನುಷ್ಯಪ್ರಾಣಿಯ ಸ್ಥಾನವೇನು? ಅವನು ಈ ಜೀವನದಲ್ಲಿ ಸಾಧಿಸತಕ್ಕ ಗುರಿ ಯಾವದು?" ಎಂಬ ಪ್ರಶ್ನೆಗಳಿಗೆ ತತ್ವಜ್ಞರು ಕೊಡುವ ಉತ್ತರದ ಪ್ರಕಾರಗಳ ಮೇಲಿಂದ ಜಡ–ವಾದ ಮತ್ತು ಚೇತನ–ವಾದಗಳು ಉಂಟಾಗಿವೆ. ಈ ಎರಡೂ ವಾದಗಳು ಬೇರೆ ಬೇರೆ ಸ್ವರೂಪದಿಂದ ಅನಾದಿಕಾಲದಿಂದಲೂ ನಡೆದುಬಂದಿರುವವೆಂದು ಇತಿಹಾಸದಿಂದ ತಿಳಿದು ಬರುತ್ತದೆ. ಆದರೆ, ಕಾಲಗತಿಯಲ್ಲಿ ಈ ಎರಡು ಸಹೋದರ ತತ್ವಗಳ ಬಲಾಬಲಗಳು ಹೆಚ್ಚುಕಡಿಮೆಯಾಗಿ ಒಮ್ಮೆ ಜಡವಾದವೂ ಮತ್ತೊಮ್ಮೆ ಚೇತನವಾದವೂ ಮನುಷ್ಯಸಮಾಜದ ಮೇಲೆ ತಮ್ಮ ಪ್ರಭಾವವನ್ನು ಬೀರುತ್ತವೆ. ಈಗಿನ ಜಗತ್ತಿನ ಮೇಲೆ ಪರಿಣಾಮವನ್ನುಂಟುಮಾಡಿದ ಜಡವಾದದ ಹಿಂದೆ ಯುರೋಪಖಂಡದ ಎರಡು ಎರಡೂವರೆ ಸಾವಿರ ವರ್ಷಗಳ ಇತಿಹಾಸವಿದೆ. "ಅನೇಕ ಚಿತ್ತದಿಂದ ವಿಭ್ರಾಂತವಾದ, ಮೋಹಜಾಲದಲ್ಲಿ ಸಿಲುಕಿದ" ಜಡವಾದವು ಬೇರೆ ಬೇರೆ ಕಾಲಗಳಲ್ಲಿ, ಬೇರೆ ಬೇರೆಯಾಗಿ, ಬೇರೆ ಬೇರೆ ಬಣ್ಣಗಳಿಂದ ಪರಿಣಮಿಸಬಹುದು. ಅಂದರೆ, ಈ ವಾದದ ಉಗಮಸ್ಥಾನವು ಬೇರೆ ಬೇರೆಯಾಗಬಹುದು. ಆದರೆ, ಚೇತನ ವಾದದ ಸ್ವರೂಪವು ಮಾತ್ರ ಸರ್ವಕಾಲದಲ್ಲಿಯೂ ಏಕರೂಪವಾಗಿದೆ. ಅಂದರೆ, ಅದರ ಪ್ರಕ್ರಿಯೆಯು ಬೇರೆ ಬೇರೆ ಪ್ರಕಾರದ್ದಿದ್ದರೂ, ಅದರಲ್ಲಿಯ ತಿರುಳು ಮಾತ್ರ ಒಂದೇ ಪ್ರಕಾರದ್ದು. ಅಂತೆಯೇ ಚೇತನವಾದದಲ್ಲಿ ಸುಸಂಗತಿಯನ್ನು ಕಾಣಬಹುದು. ಆದರೆ, ಜಡವಾದವು ಒಂದಕ್ಕೊಂದು ಸಂಬಂಧವಿಲ್ಲದ ಅನೇಕ ವಿಸಂಗತಿಗಳಿಂದ ಕೂಡಿದೆ. ಕಾಲಗತಿಯಿಂದ ಬದಲುತ್ತಿರುವ ಜಡವಾದದ ಅನೇಕತ್ವವನ್ನೂ, ಅವೆಲ್ಲವುಗಳಲ್ಲಿ ಏಕರೂಪವಾಗಿ (ಮಾಲೆಯ ಬೇರೆ ಬೇರೆ ಮಣಿಗಳಲ್ಲಿ, ಒಂದೇ ಸೂತ್ರವು ಕಂಡುಬರುವಂತೆ) ಇರುವ ಚೇತನ ವಾದವನ್ನೂ ಅರಿಯುವದೇ ನಿಜವಾದ ಜ್ಞಾನವು. ಇಂದ್ರಿಯ ಜನ್ಯ ಜ್ಞಾನವು ಬಾಹ್ಯ ಜಗತ್ತಿನ ಅಭ್ಯಾಸದಿಂದ ಉಂಟಾಗುತ್ತದೆ. ಇದರಿಂದಲೇ ಭೌತಿಕಶಾಸ್ತ್ರಗಳ ಉತ್ಪತ್ತಿ ಮತ್ತು ಬೆಳವಣಿಗೆಗಳು ಆಗುತ್ತವೆ. ಆದರೆ, ಇದರ ಹೊರತು ಕೇವಲ ಯೋಗಿಗಳಿಗೆ ಗಮ್ಯವಾದ ಮತ್ತೊಂದು ಜ್ಞಾನದ ಪ್ರಕಾರವಿದೆ. ಸಂಸ್ಕೃತ ಕೋಶಕಾರರು ಜ್ಞಾನದ ಎರಡು ವಿಭಾಗವನ್ನು

ಮಾಡಿ, ಒಂದಕ್ಕೆ ವಿಜ್ಞಾನವೆಂದೂ ಮತ್ತೊಂದಕ್ಕೆ ಜ್ಞಾನವೆಂದೂ ಕರೆದಿದ್ದಾರೆ. “ मोक्षेधीर्ज्ञानमन्यत्र विज्ञानं शिल्पशास्त्रयोः ” ಎಂದು ಅಮರಕೋಶದಲ್ಲಿ ಜ್ಞಾನದ ಎರಡು ಪ್ರಕಾರಗಳನ್ನು ಹೇಳಿದ್ದಾರೆ. ನಾವು ಮೇಲೆ ಹೇಳಿದ ಇಂದ್ರಿಯಜನ್ಯ ಜ್ಞಾನಕ್ಕೆ “ ವಿಜ್ಞಾನ ’ ನೆಂದೂ ಧರ್ಮದ ಜ್ಞಾನಕ್ಕೆ “ ಜ್ಞಾನ ” ವೆಂದೂ ಪಾರಿಭಾಷಿಕ ಸಂಜ್ಞೆಯುಂಟು. ಧರ್ಮಜ್ಞಾನಕ್ಕೆ ಸ್ಫೂರ್ತಿಜ್ಞಾನ ಅಥವಾ ಅಂತರ್ಜ್ಞಾನವೆಂದು ಪ್ರಚಾರದಲ್ಲಿ ಅನ್ನುತ್ತಾರೆ. ಈ ಸ್ಫೂರ್ತಿಜ್ಞಾನವೇ ಎಲ್ಲ ಧರ್ಮಗಳ ತಳಹದಿಯಾಗಿದೆ. ಪ್ರಚಲಿತ ಎಲ್ಲ ಧರ್ಮಗಳ ಅಭ್ಯಾಸ ಮಾಡಿದವರಿಗೆ ಈ ಮಾತು ಸ್ಪಷ್ಟವಾಗಿ ಕಾಣುವಂತಿದೆ. ಆರ್ಯರ ವೇದಗ್ರಂಥಗಳು ಋಷಿಗಳಿಂದ ರಚಿಸಲ್ಪಟ್ಟಿರದೆ, ಅದರಲ್ಲಿಯ ಜ್ಞಾನವು ಸನಾತನವಿದ್ದು ಅದನ್ನು ಋಷಿಗಳು ತಮ್ಮ ಅಂತರ್ಜ್ಞಾನದಿಂದ ಕಂಡುಹಿಡಿದರೆಂದೂ, ಈ ಜ್ಞಾನವು ಈಶ್ವರನ ಶ್ವಾಸೋಚ್ಛ್ವಾಸವೆಂದೂ ವೇದದಲ್ಲಿಯೇ ಹೇಳಿದೆ. ಈಗಿನ ಪಾರ್ಸೀ ಧರ್ಮದ ಗ್ರಂಥವಾದ ಝೆಂದ ಅವೆಸ್ತದಲ್ಲಿ ವೆಂದಿದಾದ, ವಿಸ್ಪರಾದ ಮತ್ತು ಯಾಸ್ನಗಳೆಂಬ ಮೂರು ಭಾಗಗಳಿದ್ದು, ಅವರ ಧರ್ಮಗುರುವಾದ ಝೊರೊಸ್ತರ ಮತ್ತು ಪರಮೇಶ್ವರನಾದ ಅಹುರಮಝ್ದ ಇವರಲ್ಲಿ ಆದ ಪ್ರತ್ಯಕ್ಷ ಸಂಭಾಷಣದಿಂದುಂಟಾದ ಜ್ಞಾನವಿದು. ಯಹುದೀ ಜನರ ( ಜ್ಯೂಸರ ) ಗ್ರಂಥವಾದ ಓಲ್ಡ ಟೆಸ್ಟಮೆಂಟಿನಲ್ಲಿಯ ಹತ್ತು ಆಜ್ಞೆಗಳನ್ನು ಪ್ರತ್ಯಕ್ಷ ದೇವರೇ ಮೋಝೆಸ್ಸನಿಗೆ ಕೊಟ್ಟನು. ಬೌದ್ಧ ಧರ್ಮದ ಎಲ್ಲ ಆಚಾರ ವಿಚಾರಗಳೂ ಪ್ರತ್ಯಕ್ಷ ವೇದವಿಹಿತವಾಗಿವೆ. ಭಗವಾನ ಬುದ್ಧನಲ್ಲಿ ಒಂದು ಸ್ವತಂತ್ರ ಧರ್ಮವನ್ನು ಸ್ಥಾಪಿಸುವ ಹವ್ಯಾಸವು ಇರಲಿಲ್ಲ. ಅವನು ವೇದಧರ್ಮದ ಹಳೇ ಶುದ್ಧಸ್ವರೂಪವನ್ನೇ ಉಪದೇಶಿಸಿದನು. ಅವನು ಯಾವದೊಂದು ಸ್ವತಂತ್ರವಾದ ಧರ್ಮದ ಸಂಶೋಧನೆಯನ್ನು ಮಾಡಲಿಲ್ಲ. ಆದ್ದರಿಂದ ಬೌದ್ಧ ಧರ್ಮದಲ್ಲಿಯ ಎಲ್ಲ ಗ್ರಂಥಗಳು, ವೇದ, ಸಾಂಖ್ಯ, ಯೋಗ ಮುಂತಾದ ಆರ್ಷಗ್ರಂಥಗಳ ಸಾರವಾಗಿವೆ. ಬೌದ್ಧರ “ ಧಮ್ಮಪದ್ದ ” ವೆಂಬ ಗ್ರಂಥವು ವೈದಿಕ ನೀತಿ ಮತ್ತು ಸದಾಚಾರಗಳ ಸಾರಾಂಶವೇ ಸರಿ. ಕ್ರಿಸ್ತರ ಬಾಯಬಲ್ಲಿನಲ್ಲಿಯ “ ನ್ಯೂ ಟೆಸ್ಟಮೆಂಟ ” ಎಂಬ ಭಾಗವು ಯೇಸೂ ಕ್ರಿಸ್ತನ ಮರಣದ ನಂತರ ಅವನ ಶಿಷ್ಯರು ಸಂಗ್ರಹಿಸಿದ ಕ್ರಿಸ್ತನ ವಚನ

ಗಳಾಗಿವೆ. ಭಗವಾನ ಕ್ರಿಸ್ತನು ತಾನು ಪ್ರತ್ಯಕ್ಷ ದೇವರ ಮಗನೆಂದೂ ಮತ್ತು ತಾನು ಹೇಳುವ ಉಪದೇಶವು ದೇವರಿಂದಲೇ ತಿಳಿದವವೆಂದೂ ಶಿಷ್ಯರಿಗೆ ಹೇಳುತ್ತಿದ್ದನು. ಮುಸಲ್ಮಾನ ಧರ್ಮದ ಮೊದಲನೆಯ ತತ್ತ್ವವೆಂದರೆ ಮನುಷ್ಯನ ಮಾರ್ಗದರ್ಶನಕ್ಕಾಗಿ ಅಲ್ಲಾನು ಕಾಲಕಾಲಕ್ಕೆ ಉಪದೇಶಕರನ್ನು ಕಳಿಸುತ್ತಿದ್ದು ಎಲ್ಲ ಧರ್ಮಗ್ರಂಥಗಳು ಸತ್ಯಸ್ವರೂಪದ್ದಾಗಿವೆ. ಮತ್ತು ಈ ಗ್ರಂಥಗಳು ಅಲ್ಲಾನ ಪ್ರೇರಣೆಯಿಂದಲೇ ಪ್ರಕಾಶಿತವಾಗುತ್ತವೆ. ಈ ಪ್ರಕಾರ ಧರ್ಮದ ಕಲ್ಪನೆಯು ಮನುಷ್ಯ ಸಮಾಜದಲ್ಲಿ ಅಂತರ್ಜ್ಞಾನದಿಂದ ಉಂಟಾಗಿದ್ದು, ಅದು ನಿಸರ್ಗದ ಪ್ರಥಮ ಅವಲೋಕನದಿಂದ ಕಾಡುಸ್ಥಿತಿಯಲ್ಲಿದ್ದ ಮನುಷ್ಯನು ಕಲ್ಪಿಸಿದ ಒಂದು ಅಂಧಶ್ರದ್ಧೆಯ ವಿಷಯವಾಗಿರುವದಿಲ್ಲೆಂದೂ ಮತ್ತು ಭೌತಿಕ ಶಾಸ್ತ್ರಗಳ ಪ್ರಗತಿಯಿಂದ ಈ ಶ್ರದ್ಧೆಯು ಇಲ್ಲದಂತಾಗುವದು ಶಕ್ಯವಿಲ್ಲವೆಂದೂ ತಿಳಿದು ಬರಬಹುದು. ಯಾಕಂದರೆ, ಧರ್ಮಭಾವನೆಯು ಮನುಷ್ಯಸ್ವಭಾವದ ಸರ್ವಶ್ರೇಷ್ಠ ಅಂಗವಾಗಿದೆ.

ಯುರೋಪಖಂಡದ ಪುರಾಣಕಾಲದ ಇತಿಹಾಸದಲ್ಲಿ ಧರ್ಮಶ್ರದ್ಧೆಯೂ ಪರಲೋಕ ಮತ್ತು ದೇವತೆಗಳ ಕಲ್ಪನೆಯೂ ಪ್ರಚಲಿತವಾಗಿದ್ದದ್ದು ಕಂಡುಬರುತ್ತದೆ. ಗ್ರೀಸ ಮತ್ತು ರೋಮ ದೇಶಗಳ ಹಳೆಯ ಸಂಸ್ಕೃತಿಯಲ್ಲಿಯೂ ಈ ಭಾವನೆಗಳು ಇದ್ದವು. ಯಹುದಿಗಳ ಹಳೇ ಸಂದೇಶದಲ್ಲಿ ಜನರ ಉದ್ಧಾರಕ್ಕಾಗಿ ದೇವರು ದೂತರನ್ನು ಈ ಜಗತ್ತಿಗೆ ಕಾಲಕಾಲಕ್ಕೆ ಕಳಿಸುವನೆಂದು ಆಶ್ವಾಸನವಿದೆ. ಕ್ರಿಸ್ತನ ಹೊಸ ಸಂದೇಶದಲ್ಲಿ ಮರಣೋತ್ತರ ಪಾಪಿಗಳಿಗೆ ನರಕದ ಶಿಕ್ಷೆಯೂ, ಪುಣ್ಯಶಾಲಿಗಳಿಗೆ ಸ್ವರ್ಗಸುಖವೂ ಸಿಗುವದೆಂದು ಯೇಸೂಕ್ರಿಸ್ತನು ಹೇಳಿದ್ದಾನೆ ಗ್ರೀಸ ದೇಶದ ತತ್ತ್ವಜ್ಞರಾದ ಎರಿಸ್ಟೋಟಲ ಮತ್ತು ಪ್ಲೇಟೋ ಇವರು ಈ ಜಗತ್ತು ಈಶ್ವರನಿಂದ ನಿರ್ಮಿತವಾಗಿದ್ದು ಅದು ಅವನ ಇಚ್ಛೆಯಂತೆ ನಡೆಯುವದೆಂದು ನಂಬಿದ್ದರು ರೋಮ ದೇಶದ ಸಾರ್ವಭೌಮನಾದ ಮಾರ್ಕಸ ಒರೇಲಿಯಸ ಮತ್ತು ಗುಲಾಮನಾದ ಎಪಿಕ್ಟೆಟಸ ಇವರಿಬ್ಬರೂ ಮಹಾ ತತ್ತ್ವಜ್ಞಾನಿಗಳಿದ್ದರು ಅವರು ಈ ಜಗತ್ತಿನಲ್ಲಿಯ ಪ್ರತಿಯೊಂದು ಸುಖದುಃಖದ ಅನುಭವವು ಜೀವನ ಅಂತಿಮ ಕಲ್ಯಾಣಕ್ಕಾಗಿಯೇ ಇದ್ದು ಅದನ್ನು ಅವನು ಹರ್ಷ

ಅಥವಾ ವಿಷಾದರಹಿತ ಬುದ್ಧಿಯಿಂದ ಸ್ವೀಕರಿಸಬೇಕೆಂದು ಹೇಳುತ್ತಿದ್ದರು. ಈ ತತ್ವಜ್ಞಾನವು ಪಾಶ್ಚಾತ್ಯ ತತ್ವಜ್ಞರಿಗೆ "ಸ್ಟೋಯಿಸಿಝಂ" ಎಂಬ ಹೆಸರಿನಿಂದ ಪ್ರಸಿದ್ಧವಿದೆ. ಮುಂದೆ ಕ್ರಿಸ್ತನ ಅನುಯಾಯಿಯೂ ಮಹಾ ಸಂತನೂ ಆದ ಸೇಂಟ ಅಗಸ್ಟಾಯಿನ ಅವನು, ಮನುಷ್ಯ ಸಮಾಜವು ದೈವೀ ಮತ್ತು ಆಸುರೀ ಸಂಪತ್ತುಗಳ ಕುರುಕ್ಷೇತ್ರವಾಗಿದ್ದು, ಇಲ್ಲಿ ದೇವರಲ್ಲಿ ವಿಶ್ವಾಸವನ್ನಿಟ್ಟು ಸತ್ಯ, ನ್ಯಾಯ ಮತ್ತು ಅಹಿಂಸಾತ್ಮಕ ವೃತ್ತಿಯಿಂದ ನಡೆಯುವವರಿಗೆ ಅಂತ್ಯದಲ್ಲಿ ಉದ್ಧಾರವಾಗುವದೆಂದು ಉಪದೇಶಿಸುತ್ತಿದ್ದನು. ಈ ಪ್ರಕಾರ ಪಾಶ್ಚಾತ್ಯರ ಸಮಾಜದಲ್ಲಿ ಆಧ್ಯಾತ್ಮಿಕ ಮಾರ್ಗದಲ್ಲಿ ಜನ್ಮತ: ಮುಂದುವರಿದ ವ್ಯಕ್ತಿಗಳಿಗೆ ಈ ಜಗತ್ತಿನ ಗೂಢವಾದ ನಿಯಮಗಳ ಜ್ಞಾನವು ಆದದ್ದು ಕಂಡುಬಂದರೂ, ಅವರ ಸರ್ವಸಾಮಾನ್ಯ ಸಮಾಜದ ರಚನೆಯು ಮಾತ್ರ ಆಧ್ಯಾತ್ಮಿಕ ತಳಹದಿಯ ಮೇಲೆ ಆಗಿರುವದಿಲ್ಲ. ಆದರೆ ಹಿಂದೀ ಯರ ಸಮಾಜ ರಚನೆಯು ಕೇವಲ ಆಧ್ಯಾತ್ಮಿಕ ತಳಹದಿಯನ್ನೇ ಆಶ್ರಯಿ ಸಿದೆ. ಈ ಮಾತನ್ನು ಶ್ರೀ ಅರವಿಂದರು ತಮ್ಮ "ಪೌರ್ವಾತ್ಯ ಮತ್ತು ಪಾಶ್ಚಾತ್ಯ" ಎಂಬ ಲೇಖದಲ್ಲಿ ಸ್ಪಷ್ಟಮಾಡಿದ್ದಾರೆ. ಯುರೋಪದ ಜೀವನವು ಬಹಿರ್ಮುಖಿಯಾಗಿದ್ದು ನಮ್ಮ ಜೀವನವು ಅಂತರ್ಮುಖಿ ಯಾಗಿದೆ. ನಮ್ಮ ಜ್ಞಾನವು ಮಂತ್ರದೃಷ್ಟರಾದ ಋಷಿಗಳ, ಆಚಾರ್ಯರ ಮತ್ತು ಸಾಧುಸಂತರ ಅಂತರ್ಜ್ಞಾನವಾಗಿದ್ದು ಪಾಶ್ಚಾತ್ಯರ ಜ್ಞಾನವು ಭೌತಿಕ ಶಾಸ್ತ್ರಗಳಿಂದುಂಟಾಗುವ ಇಂದ್ರಿಯಜನ್ಯ ಜ್ಞಾನ ಅಥವಾ ಬಹಿರ್ಜ್ಞಾನ ವಾಗಿರುತ್ತದೆ. ನಮ್ಮ ಗುರಿಯು ಆತ್ಮಸುಖವಾಗಿದ್ದು ಅವರ ಗುರಿಯು ಇಂದ್ರಿಯಜನ್ಯ ಸುಖವಾಗಿದೆ. ನಮ್ಮ ದೃಷ್ಟಿಯಿಂದ ಈ ಸುಖವು "ಆಗಮಾಪಾಯಿ" ಮತ್ತು "ಅನಿತ್ಯವಿದ್ದು" ಕ್ಷುದ್ರತರದ್ದಾಗಿರುತ್ತದೆ. ಇಂದ್ರಿಯಜನ್ಯ ಸುಖ ಅಥವಾ ದುಃಖ ಇವೆರಡೂ ವ್ಯಥೆಯನ್ನುಂಟು ಮಾಡದ ಅಮೃತತತ್ವದ ಧೀರತರ ಸ್ಥಿತಿಯನ್ನು ಮುಟ್ಟುವದೇ ನಮ್ಮ ಗುರಿ. (ಭ ಗೀತಾ ೨-೧೫) ಆದರೆ ಪಾಶ್ಚಾತ್ಯರು ಈ ಇಂದ್ರಿಯಜನ್ಯ ಸುಖವನ್ನೇ ಆದಷ್ಟರ ಮಟ್ಟಿಗೆ ಬೆಳೆಸಿ ಅದರಿಂದುಂಟಾಗುವ ದುಃಖದ ಪರಿಣಾಮವನ್ನು ಶಕ್ಯವಿದ್ದಷ್ಟರ ಮಟ್ಟಿಗೆ ಕಡಿಮೆ ಮಾಡಿ, ಈ ಕ್ಷುದ್ರಸುಖದಲ್ಲಿ ಹೊರಳಾಡುವ ಧ್ಯೇಯವನ್ನೇ ತಮ್ಮೆದುರಿಗೆ ಇಟ್ಟುಕೊಂಡಿದ್ದಾರೆ. ನಮ್ಮ ಮತ್ತು ಅವರ

ಸಮಾಜಗಳಲ್ಲಿ ಕಂಡುಬರುವ ವಿರೋಧವು ಈ ಧ್ಯೇಯಗಳ ವಿರೋಧದ ಮೂಲಕವೇ ಆಗಿರುತ್ತದೆ. ಯುಗಧರ್ಮದ ಪರಿಣಾಮವು ಈ ಎರಡೂ ಪ್ರಕಾರದ ಸಮಾಜಗಳ ಮೇಲೆ, ಈ ಧ್ಯೇಯಗಳ ಮೂಲಕವೇ ಭಿನ್ನ ಭಿನ್ನವಾಗಿ ಆದವು. ಈ ವಿವಿಧ ಪರಿಣಾಮದ ಇತಿಹಾಸವನ್ನು ನಾವು ಇಲ್ಲಿ ತ್ರೋಟಕವಾಗಿ ಉಲ್ಲೇಖಿಸಿ, ಈಗಿನ ಸಮಾಜ ರಚನೆಯ ಅಡಿಯಲ್ಲಿರುವ ವಿವಿಧ ತತ್ವಗಳ ಜಗಳಾಟವನ್ನು ನಿಲ್ಲಿಸುವದು ಶಕ್ಯವಿರುವದೇ? ಇದ್ದರೆ, ಅರವಿಂದರ ತತ್ವಜ್ಞಾನದ ಉಪಯೋಗವು ಇದರಲ್ಲಿ ಎಷ್ಟರಮಟ್ಟಿಗೆ ಆಗುವಂತಿದೆ, ಮತ್ತು ಈ ತತ್ವಜ್ಞಾನದಲ್ಲಿ ನಮ್ಮ ಈ ಲೇಖದ ಮುಖ್ಯ ವಿಷಯವಾದ ಪುನರ್ಜನ್ಮ, ಪರಲೋಕ ಮತ್ತು ಕರ್ಮಮೀಮಾಂಸೆ ಇವುಗಳ ಮಹತ್ವವೇನು? ಎಂಬ ವಿಚಾರಮಾಡಿ ಈ ಬೆಳೆದ ಮುನ್ನುಡಿಯನ್ನು ಮುಗಿಸುವೆವು.

ವೈದಿಕ ತತ್ವಜ್ಞಾನದ ಪ್ರಕಾರ ಅನಾದ್ಯನಂತ ಪರಮೇಶ್ವರನು ತನ್ನ ಅಚಿಂತ್ಯ ಅನಾದಿ ಮಾಯೆಯಿಂದ ಈ ಜಗತ್ತನ್ನು ಉಂಟುಮಾಡುತ್ತಾನೆ. ಈಶ್ವರನ ಶಕ್ತಿಯಾದ ಈ ಆದಿಮಾಯೆಯೇ ಸತ್ವ, ರಜ ಮತ್ತು ತಮೋ ಗುಣಗಳ ನ್ಯೂನಾಧಿಕ್ಯದಿಂದ ಈ ಅನಾದಿ ಕಾಲಚಕ್ರವನ್ನು ತಿರುಗಿಸುತ್ತಿರುವಳು. ಈ ಗುಣಗಳ ನ್ಯೂನಾಧಿಕ ತಾರತಮ್ಯದಿಂದ ಕೃತ, ತ್ರೇತಾ, ದ್ವಾಪರ ಮತ್ತು ಕಲಿ ಯುಗಗಳು ಉಂಟಾಗುತ್ತವೆ. ಈ ನಾಲ್ಕು ಯುಗಗಳು ಕೂಡಿ, ಒಂದು ಮಹಾಯುಗವೂ ಎಪ್ಪತ್ತೊಂದು ಮಹಾಯುಗಗಳಿಂದ ಒಂದು ಮನ್ವಂತರವೂ ಆಗುತ್ತವೆ. ಎರಡು ಮನ್ವಂತರಗಳ ಮಧ್ಯಕಾಲದಲ್ಲಿ ಜಲಪ್ರಳಯವಾಗುತ್ತದೆ. ಹದಿನಾಲ್ಕು ಮನ್ವಂತರಗಳಿಂದ ಒಂದು ಕಲ್ಪವಾಗುತ್ತದೆ. ಕಲ್ಪಾಂತ್ಯದಲ್ಲಿ ಎಲ್ಲ ಪ್ರಾಣಿಗಳ ಸಂಹಾರವಾಗುತ್ತದೆ. ಇಂಥ, ಎರಡು ಕಲ್ಪಗಳಿಂದ ಬ್ರಹ್ಮದೇವನ ಒಂದು ದಿವಸ; ಬ್ರಹ್ಮದೇವನ ಒಂದು ದಿವಸದಲ್ಲಿ ಈ ಜಗತ್ತಿನ ಎಂಟು ಅಬ್ಜ ನಲವತ್ತೆಂಟು ಕೋಟಿ ವರ್ಷಗಳಾಗುತ್ತವೆ. ಈ ಪ್ರಕಾರದ ಮೂರುನೂರಾ ಅರವತ್ತು ದಿವಸಗಳೆಂದರೆ ಭರಮಪ್ಪನ ಒಂದು ವರುಷ ಇಂಥ ನೂರು ವರುಷದ ಆಯುಷ್ಯವು ಭರಮಪ್ಪನದು. (ಭ. ಗೀ ೮–೧೭; ಮ. ಸ್ಮೃ. ಶ್ಲೋ. ೬೯–೭೩).

ಇಂಥ ಈ ಅನಾದಿ ಮಾಯೆಯ ಕಾಲಗಣನೆಯನ್ನು, ವೇದದ ಒಂದು ಭಾಗವಾದ ಜ್ಯೋತಿಷ ಶಾಸ್ತ್ರವನ್ನು ಬಲ್ಲವರು, ಕೆಳಗಿನಂತೆ ಮಾಡಿದ್ದಾರೆ. ಈಗಿನ ಬ್ರಹ್ಮದೇವನ ಆಯುಷ್ಯದ ಐವತ್ತು ವರ್ಷಗಳಾಗಿದ್ದು, ಈಗ ನಡೆದಿರುವ ಕಲ್ಪಕ್ಕೆ ಶ್ವೇತವರಾಹ ಕಲ್ಪವೆಂಬ ಹೆಸರು. ಈ ಕಲ್ಪದಲ್ಲಿ ಇಲ್ಲಿಯವರೆಗೆ ಆರು ಮನ್ವಂತರಗಳು ಆಗಿಹೋಗಿದ್ದು, ಏಳನೆಯ ವೈವಸ್ವತ ಮನ್ವಂತರವು ಈಗ ನಡೆದಿದೆ. ಈ ಮನ್ವಂತರದಲ್ಲಿಯ ಇಪ್ಪತ್ತೇಳು ಮಹಾ-ಯುಗಗಳು ಸಂದಿದ್ದು, ಇಪ್ಪತ್ತೆಂಟನೇ ಮಹಾಯುಗದೊಳಗಿನ ಕೃತ, ತ್ರೇತ, ಮತ್ತು ದ್ವಾಪರ ಯುಗಗಳು ಕಳೆದು ಈಗ ಕಲಿಯುಗವು ನಡೆದಿದೆ. ಅಂದರೆ, ಈಗಿನ ಮಹಾಯುಗವು ಆರಂಭವಾಗಿ ಸಂಧಿಕಾಲಸಹಿತ, ಈ ಕಲಿಯುಗದ ಆರಂಭದ ವರೆಗೆ, ೩೮,೮೦,೦೦೦ ವರ್ಷಗಳಾದವು ಈಗ ನಡೆದಿರುವ ಪ್ರಕಟ ಕಲಿಯುಗದಲ್ಲಿ ೪,೩೨,೦೦೦ ವರ್ಷ ಸಲ್ಲತಕ್ಕದ್ದಿದ್ದು, ಈಗ ಅವುಗಳ ಪೈಕಿ, ೫೦೫೦ ವರ್ಷಗಳು ಕಳೆದಿರುತ್ತವೆಂದು ಆರ್ಯ ಜ್ಯೋತಿಷ ಶಾಸ್ತ್ರಜ್ಞರು ಹೇಳುವರು.

ಈ ಭರತಭೂಮಿಯ ಉತ್ತರಕ್ಕೆ ಈ ಜಗತ್ತನ್ನು ಅಳೆಯುವ ಕೋಲೋ ಏನೋ ಎಂಬಂತೆ ಎಲ್ಲ ದೇವತೆ ಮತ್ತು ಋಷಿಗಳಿಗೆ ಆಶ್ರಯಸ್ಥಾನವಾದ ಹಿಮಾಲಯ ಪರ್ವತವು ಪೂರ್ವ ಸಮುದ್ರದಿಂದ ಪಶ್ಚಿಮ ಸಮುದ್ರದ ವರೆಗೆ ಹಬ್ಬಿರುತ್ತದೆ ( ಕು ಸಂ. ). ಈ ಹಿಮಾಲಯ ಪರ್ವತ ಮತ್ತು ಅದರ ದಕ್ಷಿಣಕ್ಕಿರುವ ವಿಂಧ್ಯಪರ್ವತಗಳೇ ದಕ್ಷಿಣೋತ್ತರ ಮೇರೆಯಾದ, ಪೂರ್ವ ಮತ್ತು ಪಶ್ಚಿಮ ಸಮುದ್ರಗಳೇ ಪೂರ್ವ ಪಶ್ಚಿಮ ಮೇರೆಯಾದ ಪ್ರದೇಶಕ್ಕೆ ಆರ್ಯಾವರ್ತವೆನ್ನುವರು. ( ಮನು. ೨-೨೨ ) ಈ ಪವಿತ್ರ ದೇಶದಲ್ಲಿ ಒಂದಾನೊಂದು ಕಾಲಕ್ಕೆ ಋಷಿಗಳ ವಂಶಜರಾದ ರಾಗದ್ವೇಷಾದಿ ರಹಿತರಾದ ವಿದ್ವಾಂಸರು ವಾಸಿಸುತ್ತಿದ್ದರು. ಇದೇ ಸ್ಥಾನವೇ ಎಲ್ಲ ಮಾನವ ವಂಶದ ಆದ್ಯಸ್ಥಾನವಾಗಿರಬೇಕೆಂದು ಪುರಾಣ ಇತಿಹಾಸ ಸಂಶೋಧಕರು ತರ್ಕಿಸುತ್ತಾರೆ ಮೊಹೆಂಜೋಡಾರೊ ಮತ್ತು ಹರಪ್ಪಾ ಮುಂತಾದ ಪುರಾಣ ಸಂಸ್ಕೃತಿಯ ಅವಶೇಷಗಳ ಅಭ್ಯಾಸ ಮಾಡಿದ ಪ್ರೊ ಹೆನ್ರೀ ಹೆರಾಸ ಇವರ ತರ್ಕವು ಹೀಗೆ ಇರುತ್ತದೆ. ಅದೇ ಪ್ರಕಾರ ಪಾಟಣಾ

ಯುನಿವ್ಹರ್ಸಿಟಿಯ ಪ್ರೊಫೆಸರರಾದ ಡೊಂ ತ್ರಿವೇದಿ ಇವರು ಎಲ್ಲ ಮಾನವ ಜನಾಂಗಗಳ ಆದ್ಯಸ್ಥಾನವು ಹಿಂದುಸ್ಥಾನವೇ ಇರಬೇಕೆಂದು ನಂಬುತ್ತಾರೆ. ಈ ಮಹಾಯುಗದೊಳಗಿನ ಕೃತಯುಗದ ಆರಂಭಕ್ಕೆ ಆರ್ಯಾವರ್ತದಲ್ಲಿ ಸೂರ್ಯಪುತ್ರನಾದ ಮನುವು ಸೂರ್ಯವಂಶದ ಮೊದಲನೆಯ ರಾಜನಾದನು ( ರಘು ೧-೧೦ ) ಅವನು ಎಲ್ಲ ಧರ್ಮವನ್ನು ಚನ್ನಾಗಿ ಅರಿತವನಿದ್ದನು. ಅವನು ತನ್ನ ಪ್ರಜೆಗಳಿಗೆ ವರ್ಣಾಶ್ರಮ ಧರ್ಮದ ಮಾರ್ಗವನ್ನು ತೋರಿಸಿದನು. ಅವನು ಹಾಕಿಕೊಟ್ಟ ಆಚಾರ ಧರ್ಮವು ಮನುಸ್ಮೃತಿಯೆಂಬ ಹೆಸರಿನಿಂದ ಈಗೂ ಪ್ರಸಿದ್ಧವಿದೆ. ಅವನ ಪ್ರಜೆಗಳು ಅವನು ಹಾಕಿಕೊಟ್ಟ ಮಾರ್ಗದಿಂದ ಎಳ್ಳಷ್ಟೂ ಕದಲುತ್ತಿರಲಿಲ್ಲವೆಂದು ಕವಿಕುಲಗುರುವಾದ ಕಾಲಿದಾಸನು ವರ್ಣಿಸಿದ್ದಾನೆ. ( ರಘು ೧-೧೭ ). ವಿಷ್ಣುವಿನ ಅವತಾರವಾದ ಶ್ರೀರಾಮಚಂದ್ರನು ತನ್ನ ಜನ್ಮಕರ್ಮಗಳಿಂದ ಈ ವಂಶವನ್ನೂ ಆರ್ಯಾವರ್ತವನ್ನೂ ಪವಿತ್ರಗೊಳಿಸಿದ್ದಾನೆ. ಈ ವರ್ಣಾಶ್ರಮ ಧರ್ಮವು ಅನಾದಿಕಾಲದಿಂದ ಈ ಆರ್ಯಾವರ್ತದಲ್ಲಿ ಆಚರಿಸಲ್ಪಟ್ಟು ಮನುಷ್ಯ ಜಾತಿಯ ಅಭ್ಯುದಯಕ್ಕೂ ನಿಃಶ್ರೇಯಸಕ್ಕೂ ಸಾಧನವಾಗಿತ್ತು. ಶ್ರೀರಾಮನ ರಾಜ್ಯವು ವರ್ಣಾಶ್ರಮಿಗಳ ಆದರ್ಶವೆಂದೂ ಸತ್ಯಪ್ರಿಯತೆ, ನ್ಯಾಯ, ಅಹಿಂಸಾ ಮುಂತಾದ ಗುಣಗಳ ತವರುಮನೆಯಾಗಿತ್ತೆಂದೂ ಈಗಲೂ ಪ್ರಸಿದ್ಧವಿದೆ ಆದಿಕವಿ ವಾಲ್ಮೀಕಿಯು ಶ್ರೀರಾಮ ಚರಿತ್ರವನ್ನು ಉತ್ತಮ ರೀತಿಯಿಂದ ವರ್ಣಿಸಿದ್ದಾನೆ. ಮುಂದೆ ಬಹುಕಾಲದ ಅಜ್ಞಾನಾವರಣದಿಂದ ಈ ಧರ್ಮವು ನಷ್ಟವಾದಕಾರಣ ಪುನಃ ದ್ವಾಪರ ಯುಗದ ಅಂತ್ಯದಲ್ಲಿ ಶ್ರೀಕೃಷ್ಣಪರಮಾತ್ಮನು ಜನ್ಮತಾಳಿ ಗೀತಾರೂಪದಿಂದ ಈ ಧರ್ಮದ ಉಪದೇಶವನ್ನು ಮಾಡಿದನು. ( ಭ. ಗೀ. ೪ ಶ್ಲೋ. ೧-೩ ) ಆ ಕಾಲದ ಧರ್ಮದ ಇತಿಹಾಸವನ್ನು ವ್ಯಾಸ ಮಹರ್ಷಿಗಳು ಮಹಾಭಾರತದಲ್ಲಿ ವಿಸ್ತೀರ್ಣವಾಗಿ ವರ್ಣಿಸಿದ್ದಾರೆ ಈ ವರ್ಣಾಶ್ರಮದ ಆಚಾರಯುಕ್ತ ದೇಶಕ್ಕೆ ಪುಣ್ಯಭೂಮಿಯೆಂದೂ, ಇತರ ದೇಶಗಳು ಮ್ಲೇಂಛದೇಶಗಳೆಂದೂ ಕೋಶಕಾರನಾದ ಅಮರಸಿಂಹನು ತನ್ನ ಶಬ್ದಕೋಶದಲ್ಲಿ ಸಂಗ್ರಹಿಸಿದ್ದಾನೆ. ಈ ಮ್ಲೇಂಛ ದೇಶಗಳಲ್ಲಿ ಕಾಮಾಚಾರಕ್ಕೇ ಪ್ರಾಧಾನ್ಯವಿದ್ದದ್ದರಿಂದ, ಇವುಗಳಿಗೆ ಅನಾರ್ಯರ ದೇಶವೆಂದೂ ಅನ್ನುವರು. ಆರ್ಯರ ಸಮಾಜದ

ವಿಶೇಷ ಲಕ್ಷಣವೆಂದರೆ, ಮನುಪ್ರಣೀತ ವರ್ಣಾಶ್ರಮ ಧರ್ಮದ ಆಚಾರವು. ಆದ್ದರಿಂದ ಈ ಆಚಾರವಿಲ್ಲದ ದೇಶಗಳೆಲ್ಲವೂ ಅನಾರ್ಯರ ದೇಶವು.

ಮುಂದೆ ಕಲಿಯುಗವು ಪ್ರಾರಂಭವಾದ ನಂತರ, ಈ ಯುಗದ ಮಹಿಮೆಯಿಂದ ಈ ಧರ್ಮದ ಶ್ರೇಷ್ಠ ವರ್ಗಗಳಲ್ಲಿ ಅಜ್ಞಾನವು ಅಂಕುರಿಸಿ ಕಾಮಕ್ರೋಧಾದಿ ವಿಕಾರಗಳ ಪ್ರಾಬಲ್ಯವು ಸಮಾಜವನ್ನು ಆವರಿಸಿತು. ಇದರಿಂದ ಸಾಮಾಜಿಕ ಮತ್ತು ರಾಜಕೀಯ ಜಗಳ ಬಡಿದಾಟಗಳು ಆರ್ಯ ಭೂಮಿಯನ್ನು ಬೇಸರಗೊಳಿಸಿದವು ಧರ್ಮದ ಬೇರೆ ಬೇರೆ ಅಂಗಗಳು ನಷ್ಟವಾಗಿ ಸಂಕರವು ಬೆಳೆಯಹತ್ತಿತು ಆದರೆ ಆರ್ಯಭೂಮಿಯ ಪೂರ್ವ ಪುಣ್ಯದಿಂದ ಈ ಕಾಲದಲ್ಲಿ ವಿಕ್ರಮಾದಿತ್ಯ, ಚಂದ್ರಗುಪ್ತರಂಥ ಆರ್ಯ ಧರ್ಮದ ಅಭಿಮಾನಿಗಳಾದ ಶೂರ ರಾಜರು ಈ ಭೂಮಿಯನ್ನು ಪರಚಕ್ರ ದಿಂದ ಸಂರಕ್ಷಿಸಿದರು. ಕಲಿಯುಗದ ಒಂದನೇ ಶತಮಾನದಿಂದ ಮೂವತ್ತನೇ ಶತಮಾನಗಳ ವರೆಗೆ ಈ ದೇಶದಲ್ಲಿ ವರ್ಣಾಶ್ರಮ ಧರ್ಮದ ಅಭಿಮಾನಿಗಳಾದ ಅನೇಕ ವಿದ್ವಾಂಸರೂ ರಾಜರೂ ಆದದ್ದರಿಂದ ಪರಚಕ್ರಕ್ಕೆ ಹಿಂದುಸ್ಥಾನದಲ್ಲಿ ಅವಕಾಶ ದೊರೆಯಲಿಲ್ಲ. ಕಾಲಕಾಲಕ್ಕೆ ದ್ವೇಷಾಗ್ನಿಯಿಂದ ಈ ಸಮಾಜದ ಶಾಂತವಾದ ವಾತಾವರಣವು ತಪ್ತವಾದಾಗ್ಯೂ, ಆರ್ಯಧರ್ಮಾಭಿಮಾನಿಗಳಾದ ರಾಜಪುರುಷರು ತಪಸ್ವಿಗಳ ಮತ್ತು ವಿದ್ವಾಂಸರ ಸಹಾಯದಿಂದ ಧರ್ಮಸ್ಥಾಪನೆಯನ್ನು ಮಾಡುತ್ತಿದ್ದರು. ವೈದಿಕ ರಾಜನೀತಿ ಮತ್ತು ಅರ್ಥಶಾಸ್ತ್ರಗಳೇ ಇವರ ಆಧಾರವಾಗಿತ್ತು. ಕಲಿಯುಗದ ಇಪ್ಪತ್ತೊಂಬತ್ತನೇ ಮತ್ತು ಮೂವತ್ತನೇ ಶತಮಾನಗಳಲ್ಲುಂಟಾದ ಗ್ರೀಕರ ಹಾವಳಿಯನ್ನು ತಡೆಗಟ್ಟಿ ಸಾರ್ವಭೌಮ ಪದವನ್ನೇರಿದ ಮೌರ್ಯವಂಶದ ಸಾಮ್ರಾಟ ಚಂದ್ರಗುಪ್ತನ ಮಂತ್ರಿಯಾದ ಆರ್ಯ ಚಾಣಕ್ಯನು ತನ್ನ ಅರ್ಥಶಾಸ್ತ್ರದಲ್ಲಿ ಈ ವರ್ಣಾಶ್ರಮ ವ್ಯವಸ್ಥೆಯನ್ನು ಬಿಡಬಾರದೆಂಬ ಬಗ್ಗೆ ರಾಜರಿಗೆ ಎಚ್ಚರಿಕೆಯನ್ನು ಕೊಟ್ಟಿರುವನು.*

---

* व्यवस्थितार्यमर्यादः कृतवर्णाश्रमस्थितिः । त्रय्या हि रक्षितो लोकः प्रसीदति नसीदति ॥ चतुर्वर्णाश्रमो लोको राज्ञा दंडेन पालितः । स्वधर्मकर्माभिरतो वर्तते स्वेषु वर्त्मसु ॥

"ಆರ್ಯರ ಸದಾಚಾರದ ನಿಯಮಗಳಿಂದೊಡಗೂಡಿದ, ವರ್ಣ ಮತ್ತು ಆಶ್ರಮಗಳಿಂದ ಸುಸಂಘಟಿತವಾದ, ಮತ್ತು ವೇದಧರ್ಮದ ಸಹಾಯದಿಂದ ಸಂರಕ್ಷಿಸಲ್ಪಟ್ಟ ಸಮಾಜವು ಸುಖಸಮಾಧಾನಗಳಿಂದ ಬಾಳುವದು. ಅದು ಎಂದೂ ನಷ್ಟವಾಗುವದಿಲ್ಲ. ನಾಲ್ಕು ವರ್ಣ ಮತ್ತು ಆಶ್ರಮಗಳಿಂದ ವಿಲಸಿತವಾದ ಈ ಸಮಾಜವು ರಾಜನ ಯೋಗ್ಯ ಆಡಳಿತೆಯಿಂದ ರಕ್ಷಿಸಲ್ಪಟ್ಟು, ಅದರಲ್ಲಿಯ ಪ್ರತಿಯೊಂದು ವ್ಯಕ್ತಿಯು ತನ್ನ ತನ್ನ ಧರ್ಮ ಮತ್ತು ಕರ್ತವ್ಯಗಳಲ್ಲಿ ಅಭಿರುಚಿಯುಳ್ಳವನಾಗಿ, ತನ್ನ ತನ್ನ ಮಾರ್ಗದಂತೆ ನಡೆದುಕೊಳ್ಳುವದು" ಎಂದು. ಈ ವೇದ ವಿದ್ಯೆಯಿಂದ ವಿನೀತನಾದ ರಾಜನೇ ಸರ್ವ ಪೃಥ್ವಿಯ ಒಡೆಯನಾಗುವನೆಂದು ಆರ್ಯ ಚಾಣಕ್ಯನ ಮತವಿತ್ತು.[1] "ವೇದವಿದ್ಯೆಯಿಂದ ಬುದ್ಧಿವಂತಿಕೆಯೂ, ಬುದ್ಧಿವಂತಿಕೆಯಿಂದ ಯೋಗವೂ, ಯೋಗದಿಂದ ಆತ್ಮವಿಶ್ವಾಸ (ಆತ್ಮಜ್ಞಾನ) ವೂ ಉಂಟಾಗುತ್ತವೆ. ಇದೇ ವಿದ್ಯೆಯ ಸಾಮರ್ಥ್ಯವು. ವಿದ್ಯೆಯಿಂದ ವಿನೀತನಾದ, ಅಂದರೆ ನಮ್ರನಾದ ರಾಜನು, ತನ್ನ ಪ್ರಜೆಗಳನ್ನು ವಿದ್ಯೆಯಿಂದ ವಿನಯಶೀಲರನ್ನಾಗಿ ಮಾಡುತ್ತಾನೆ. ಅವನು ಎಲ್ಲ ಪ್ರಾಣಿಗಳ ಹಿತವನ್ನು ಸಾಧಿಸುವದರಲ್ಲಿ ಆಸಕ್ತನಾಗಿರುವದರಿಂದ ಸಾರ್ವಭೌಮ ರಾಜನಾಗುತ್ತಾನು" ಎಂದು ತನ್ನ ಅರ್ಥಶಾಸ್ತ್ರದಲ್ಲಿ ಬರೆದಿದ್ದಾನೆ

ಆದರೆ, ಮುಂದೆ ಅಜ್ಞಾನದ ಆವರಣವು ಆರ್ಯಸಮಾಜದಲ್ಲಿ ಬೆಳೆಯುತ್ತ ನಡೆಯಿತು. ಆದ್ದರಿಂದ ಆರ್ಯ ಚಾಣಕ್ಯನು ಬಣ್ಣಿಸಿದ ವೇದ ವಿದ್ಯೆಯ ಸಾಮರ್ಥ್ಯವನ್ನೂ ಇಂಗಿತವನ್ನೂ, ಅರಿಯದ ಮೇಲಿನ ವರ್ಗದ ಜನರು ಕಾಮುಕ ವೃತ್ತಿಯಿಂದ, ಹಿಂದಿನ ಆರ್ಯರು ತಮ್ಮ ವಿದ್ವತ್ತೆ, ತಪಸ್ಸು ಮತ್ತು ಪವಿತ್ರವಾದ ಆಚರಣದಿಂದ ಪಡೆದ ಸ್ಥಾನವನ್ನು, ವಿಷಯಲೋಲುಪತೆಯಿಂದಲೂ ತಮ್ಮ ಜೊಳ್ಳು ಅಧಿಕಾರವನ್ನು ಅನ್ಯರ ಮೇಲೆ ಸ್ಥಾಪಿಸುವ ಹೆಮ್ಮೆಯಿಂದಲೂ, ದುರುಪಯೋಗಮಾಡಿ ಬಹುಜನ ಸಮಾ

---

[1] श्रुताद्धि प्रज्ञा उपजायते । प्रज्ञया योगो । योगादात्मवत्ता इति विद्या सामर्थ्यम् । विद्याविनीतो राजाहि प्रजानां विनये रतः । अनन्यां पृथिवीभुंक्ते सर्वभूतहिते रतः ।

ಜದ ದ್ವೇಷಕ್ಕೆ ಕಾರಣರಾದರು. ಬಹುಜನ ಸಮಾಜವೂ ಅಶಿಕ್ಷಿತವಾದದ್ದರಿಂದ ಅವರಿಗೂ ಆರ್ಯಧರ್ಮದ ಗುಟ್ಟು ತಿಳಿಯದೆ ಆರ್ಯ ತತ್ವಜ್ಞಾನ ಮತ್ತು ಸದಾಚಾರಗಳು ನಷ್ಟವಾಗುತ್ತ ನಡೆದವು ವೈದಿಕ ಯಜ್ಞಯಾಗಾದಿಗಳಲ್ಲಿಯು ನೈಷ್ಕರ್ಮ್ಯ ಯೋಗವು ನಷ್ಟವಾಗಿ ಹಿಂಸಾ ವೃತ್ತಿಗೆ ಮೆಚ್ಚಿದ ರಾಜರ ಮತ್ತು ಬ್ರಾಹ್ಮಣರ ಯಜ್ಞಶಾಲೆಗಳು ಕೇವಲ ಪಶುವಧದ ಸಾಧನಗಳಾದವು. ಇಂಥ ಅನಾಚಾರಗಳನ್ನು ನಿಲ್ಲಿಸುವದಕ್ಕೋಸ್ಕರ ಭಗವಾನ ಬುದ್ಧನು ಈ ಸುಮಾರಕ್ಕೆ ಜನ್ಮತಾಳಿ ಅಹಿಂಸಾತ್ಮಕ ಧರ್ಮವನ್ನು ಸ್ಥಾಪಿಸಿದನು. ಭಗವಾನ ಬುದ್ಧನ ಚರಿತ್ರವನ್ನು ಸೂಕ್ಷ್ಮದೃಷ್ಟಿಯಿಂದ ಓದುವವರಿಗೆ ಆರ್ಯಧರ್ಮಕ್ಕೆ ವಿರೋಧವಾದ ಇನ್ನೊಂದು ಸ್ವತಂತ್ರವಾದ ಧರ್ಮವನ್ನು ಸ್ಥಾಪಿಸುವದು ಅವನ ಉದ್ದೇಶವಿತ್ತೆಂದು ಕಂಡುಬರಲಾರದು. ಆದರೆ, ಆ ಕಾಲಕ್ಕೆ ಅಳಿದುಹೋದ ಅಹಿಂಸಾವೃತ್ತಿಯನ್ನು ಸ್ಥಾಪಿಸುವದಕ್ಕೋಸ್ಕರ ಅಹಿಂಸೆಯ ಮೇಲೆ ಅವನಿಗೆ ಹೆಚ್ಚು ಭಾರವನ್ನು ಹಾಕಬೇಕಾಗಿತ್ತು. ಹಾಗೂ ಗುಣಹೀನರಾದ ಕೇವಲ ಜಾತಿಬ್ರಾಹ್ಮಣ-ಕ್ಷತ್ರಿಯರ ದಂಭಾಚಾರಗಳನ್ನು ನಿಲ್ಲಿಸುವದಕ್ಕೋಸ್ಕರ, ಕೇವಲ ಜಾತಿವಿಶಿಷ್ಟ ಸಾಮಾಜಿಕ ಪ್ರಭುತ್ವವನ್ನು ವಿರೋಧಿಸಬೇಕಾಗಿತ್ತು. ಆದರೆ, ಅವನ ಅನುಯಾಯಿಗಳು ಮಾತ್ರ ಗುರುವಿನ ಹೃದ್ಗತವನ್ನರಿಯದೆ, ಒಂದು ಸ್ವತಂತ್ರವಾದ ಮತವನ್ನು ಸ್ಥಾಪಿಸಿ ವೇದವಿದ್ಯೆಯ ವಿರೋಧವನ್ನು ಮಾಡಹತ್ತಿದರು. ಈ ಕಾಲದಲ್ಲಿ ವೈದಿಕರಲ್ಲಿ ಸಹ ವೇದವಿದ್ಯೆಯ ಸಮದೃಷ್ಟಿಯು ಇಲ್ಲದಂತಾಗಿ, ವೇದದ ಒಂದೊಂದೇ ಭಾಗವು ಇತರ ಭಾಗಗಳಿಗಿಂತ ಹೆಚ್ಚು ಮಹತ್ವದ್ದಿರುವದೆಂಬ ವಿಷಮದೃಷ್ಟಿಯ ಮತಗಳು ಬೆಳೆದವು. ಹೀಗೆ ಸಮಾಜದಲ್ಲಿ ಅನೇಕ ಮತಮತಾಂತರಗಳು ಬೆಳೆದು ಅದು ಸಣ್ಣಸಣ್ಣ ಚೂರಾಗಿ ವಿಭಾಗಿಸಲ್ಪಟ್ಟಿತು. ಇಂಥ ಪ್ರಸಂಗದಲ್ಲಿ ಎಲ್ಲ ವೈದಿಕ ಮತಗಳ ಸಮನ್ವಯ ಮಾಡುವದು ಅವಶ್ಯವಾಗಿತ್ತು. ಸಮನ್ವಯವೆಂದರೆ, ವೈದಿಕರ ಸರ್ವಶ್ರೇಷ್ಠವಾದ ಗುರಿಯಾವದು ಎಂಬದನ್ನು ನಿಶ್ಚಯಿಸಿ, ಅದಕ್ಕೆ ಇತರ ಎಲ್ಲ ವೈದಿಕ-ವಿದ್ಯೆ, ಆಚಾರ-ವಿಚಾರಗಳು ಸಾಧನವಾಗಿರುವವೆಂಬದನ್ನು ತರ್ಕಶುದ್ಧವಾಗಿ ತೋರಿಸುವದು. ಈ ಸಮನ್ವಯ ತರ್ಕ ಪದ್ಧತಿಯನ್ನು ಬಾದರಾಯಣ ಋಷಿಗಳು ತಮ್ಮ ವೇದಾಂತಸೂತ್ರ ಅಥವಾ ಶಾರೀರ-ಸೂತ್ರಗಳಲ್ಲಿ

ಅನುಸರಿಸಿದ್ದಾರೆ. ಸಮಗ್ರ ವೈದಿಕ ಗ್ರಂಥಗಳ ಸಮನ್ವಯವನ್ನು ಮಾಡಲರಿಯದೆ ಅನೇಕ ಪರಸ್ಪರ ವಿರೋಧವುಳ್ಳ ವೈದಿಕ ಮತ್ತು ಅವೈದಿಕ ಮತಗಳು, ಈಗಿನ ಸಮಾಜರಚನಾಶಾಸ್ತ್ರದಲ್ಲುಂಟಾದಂತೆ, ಆಗ ಹುಟ್ಟಿ ಬೆಳೆದಿದ್ದವು. ಈ ವೇಳೆಯಲ್ಲಿ ಶ್ರೀ ಶಂಕರಾಚಾರ್ಯರು ಅವತರಿಸಿ ಅವೈದಿಕ ಮತಗಳ ಖಂಡನ ಮಾಡಿ, ವೈದಿಕ ಮತಗಳ ಸಮನ್ವಯಪೂರ್ವಕ ಸ್ಥಾಪನೆಯನ್ನು ಮಾಡಿದರು. ಇದೇ ಅವರ ಅದ್ವೈತ ಮತವು. ಅಧ್ಯಯನದ ಸುಲಭತೆಗಾಗಿ ಶ್ರೀ ವೇದವ್ಯಾಸರು ವೇದರಾಶಿಯನ್ನು ಬೇರೆ ಬೇರೆಯಾಗಿ ಋಕ್, ಯಜುಸ್, ಸಾಮ ಮತ್ತು ಅಥರ್ವವೆಂದೂ, ಕರ್ಮ, ಉಪಾಸನಾ, ಜ್ಞಾನವೆಂದೂ ವಿಭಾಗ ಮಾಡಿದ್ದರು. ಆದರೆ ಒಂದೊಂದೇ ಭಾಗವನ್ನು ಅಧ್ಯಯನ ಮಾಡಿದ ಪಂಡಿತರು, ತಮ್ಮ ಭಾಗವೇ ಹೆಚ್ಚು ಮಹತ್ವದ್ದೆಂಬ ದುರಭಿಮಾನ ಕ್ಕೊಳಗಾಗಿ, ಹೂಲಿಯನ್ನೆಬ್ಬಿಸಿ, ತಮ್ಮದೇ ಆದ ಒಂದೊಂದು ಮತವನ್ನು ಹುಟ್ಟಿಸಿದ್ದರು. ಇವೆಲ್ಲಕ್ಕೂ ಶಂಕರಾಚಾರ್ಯರು ಯೋಗ್ಯವಾದ ಸ್ಥಾನ ವನ್ನು ತಮ್ಮ ಮತದಲ್ಲಿ ಕೊಟ್ಟು ವೈದಿಕ ಮೋಕ್ಷಮಾರ್ಗದ ದಾರಿಯನ್ನು ಸುಲಭಮಾಡಿದರು. ಇವರ ಗ್ರಂಥಗಳು ಈ ವರೆಗೂ, ಸೂಕ್ಷ್ಮತರ್ಕ ಮತ್ತು ವಿದ್ವತ್ತೆಗಳಿಂದ ಜಗತ್ತಿನ ಆದರಕ್ಕೆ ಪಾತ್ರವಾಗಿವೆ.

ಇವರ ಅವತಾರ ಕ್ರಿಯೆಯಿಂದ ಅವೈದಿಕ ಬೌದ್ಧಮತವು ಹಿಂದು ಸ್ಥಾನದಿಂದ ಹೊರದೂಡಲ್ಪಟ್ಟಿತು. ಆದರೆ, ಸರ್ವಸಾಮಾನ್ಯ ಸಮಾಜದ ಅಜ್ಞಾನವು ಬಹಳ ಆಳವಾಗಿದ್ದದ್ದರಿಂದ ಈ ತತ್ವಜ್ಞಾನದ ಯಥಾರ್ಥವಾದ ಕಲ್ಪನೆಯು ಸಾಮಾಜಿಕ ಆಚಾರ–ವಿಚಾರಗಳಲ್ಲಿ ರೂಢವಾಗಲಿಲ್ಲ. ಕೇವಲ ವಿದ್ವಾಂಸರಲ್ಲಿ ಮಾತ್ರ ಈ ತತ್ವಜ್ಞಾನವು ಉಳಿಯಿತು ವೈದಿಕ ತತ್ವಜ್ಞಾನ ದಲ್ಲಿ ಅನೇಕ ಭೇದಗಳು ಕಂಡುಬಂದರೂ, ಅವೆಲ್ಲವೂ ಒಂದೇ ದಾರಿಯ ವಸತಿಸ್ಥಾನಗಳಾಗಿವೆ. ಅವುಗಳಲ್ಲಿ ಮೂಲಭೂತವಾದ ಭೇದಗಳಿರುವದಿಲ್ಲ. ಅದ್ವೈತ, ವಿಶಿಷ್ಟಾದ್ವೈತ, ದ್ವೈತಾದ್ವೈತ, ಶುದ್ಧಾದ್ವೈತ, ಅಚಿಂತ್ಯಭೇದಾ ಭೇದ, ಶಕ್ತಿವಿಶಿಷ್ಟಾದ್ವೈತ, ಅಥವಾ ಶೈವಸಿದ್ಧಾಂತಗಳೆಂಬ ಅನೇಕ ಭೇದ ಗಳನ್ನು ಈ ತತ್ವಜ್ಞಾನದಲ್ಲಿ ಕಲ್ಪಿಸಬಹುದಾದರೂ, ಇವುಗಳಲ್ಲಿ ಅಹಿನಕುಲ

ಗಳ ( ಸರ್ವ ಮುಂಗಲಿಗಳ ) ವಿರೋಧವಿರುವದಿಲ್ಲ ಇವು ಒಂದಕ್ಕೊಂದು ವಿರುದ್ಧವಾಗಿರದೆ, ಒಂದಕ್ಕೊಂದು ಪೂರಕವಾಗಿವೆ. ಇವೆಲ್ಲವೂ ಒಂದೇ ಸದ್ವಸ್ತುವನ್ನು ಮುಟ್ಟುವ ಬೇರೆ ಬೇರೆ ವಿಚಾರಸರಣಿಯಾಗಬಹುದು ಅಥವಾ ಒಂದೇ ಸೋಪಾನದ ಬೇರೆ ಬೇರೆ ಮೆಟ್ಟಿಲುಗಳಾಗಬಹುದು. ಆ ಆ ವ್ಯಕ್ತಿಯ ನಿಸರ್ಗಸಿದ್ಧವಾದ ಮನೋರಚನೆ, ಮತ್ತು ಅವನ ಸೂಕ್ಷ್ಮತತ್ವಗಳನ್ನು ಗ್ರಹಣಮಾಡುವ ಸಾಮರ್ಥ್ಯ ಇವುಗಳ ಮೂಲಕ ಒಂದು ಮತವು ಒಬ್ಬನಿಗೆ ಹೆಚ್ಚು ಯೋಗ್ಯಕಂಡರೆ, ಇನ್ನೊಂದು ಮತವು ಮತ್ತೊಬ್ಬನಿಗೆ ಹೆಚ್ಚು ಯೋಗ್ಯ ಕಾಣಬಹುದು ಅದೇ ಪ್ರಕಾರ ಭಕ್ತಿ, ಜ್ಞಾನ, ಕರ್ಮ ಅಥವಾ ಯೋಗ ಮಾರ್ಗಗಳಲ್ಲಿಯೂ ಈ ಪ್ರಕಾರದ ವಿರೋಧವಿರುವದಿಲ್ಲ. ಪ್ರತಿಯೊಬ್ಬ ಮನುಷ್ಯನು, ಇಚ್ಛಾಶಕ್ತಿ, ಭಾವನೆ ಮತ್ತು ವಿಚಾರ ಇವುಗಳ ವಿವಿಧ ಪ್ರಕಾರದ ಮಿಶ್ರಣವುಳ್ಳ ವ್ಯಕ್ತಿಯಾಗಿದ್ದಾನೆ ಕೆಲವರಲ್ಲಿ ಇಚ್ಛಾಶಕ್ತಿಯು ಪ್ರಬಲವಾಗಿರುವದರಿಂದ ಅವರಿಗೆ ಕರ್ಮಮಾರ್ಗವು ಹೆಚ್ಚು ರುಚಿಸಬಹುದು ; ಕೆಲವರಲ್ಲಿ ಭಾವನೆಯ ಪ್ರಾಧಾನ್ಯವು ಇರುವದರಿಂದ ಭಕ್ತಿಮಾರ್ಗವು ಅವರಿಗೆ ಬಹು ಅನುಕೂಲವಾಗಿ ಕಾಣಬಹುದು. ಇನ್ನೂ ಹಲವರಲ್ಲಿ, ವಿಚಾರಶಕ್ತಿಯು ಬಲಶಾಲಿಯಾಗಿರುವದರಿಂದ, ಅವರಿಗೆ ಜ್ಞಾನಮಾರ್ಗವು ಹೆಚ್ಚು ಸುಲಭವಾಗಿ ತೋರಬಹುದು. ಅವರವರಿಗೆ ಸುಲಭಕಂಡ ಮಾರ್ಗದಿಂದ ಹೋಗುವದರಿಂದಲೇ, ಪ್ರತಿಯೊಬ್ಬನು ಪೂರ್ಣತ್ವಕ್ಕೆ ಮುಟ್ಟುವನು. “ ಸರ್ವಂಖಲ್ವಿದಂ ಬ್ರಹ್ಮ ” ಇವೆಲ್ಲವೂ ಬ್ರಹ್ಮರೂಪವೇ ಎಂದು ಅನುಭವವುಂಟಾಗುವದೇ ಜ್ಞಾನ ಪರಮಾತ್ಮನನ್ನು ಅನನ್ಯಭಾವದಿಂದ ಪ್ರೀತಿಸುವದೇ ಭಕ್ತಿ ಅಥವಾ ಉಪಾಸನೆ. ಸ್ವಾರ್ಥರಹಿತ ಬುದ್ಧಿಯಿಂದ ಇವೆಲ್ಲವೂ ಪರಮೇಶ್ವರನ ರೂಪವೇ ಎಂದು ಸರ್ವಭೂತಗಳ ಹಿತದಲ್ಲಿ ರತನಾಗಿ ಸೇವೆಮಾಡುವದೇ ಕರ್ಮ. ಮನುಷ್ಯನ ಸಂಪೂರ್ಣ ಬೆಳವಣಿಗೆಯಾಗಬೇಕಾದರೆ, ಅವನ ಬುದ್ಧಿಯು ಜ್ಞಾನದಿಂದಲೂ, ಹೃದಯವು ಭಕ್ತಿಯಿಂದಲೂ, ಶರೀರವು ಸೇವೆಯಿಂದಲೂ ಶುದ್ಧವಾಗಬೇಕು. ಅಂದರೇ ಅವನಿಗೆ ಪರಿಪೂರ್ಣ ಬ್ರಹ್ಮಸ್ವರೂಪದ ಜ್ಞಾನವಾಗುತ್ತದೆ. ಆದ್ದರಿಂದ ಬ್ರಹ್ಮಜ್ಞಾನಿಯಲ್ಲಿ ಭಕ್ತಿ, ಜ್ಞಾನ ಮತ್ತು ಕರ್ಮ ಈ ಮೂರೂ ಸಾಧನಗಳು ಪರಿಪೂರ್ಣತೆಗೆ ಮುಟ್ಟಿರುತ್ತವೆ. ಅವನಿಗೆ ಈ ಮಾರ್ಗಗಳಲ್ಲಿ

ವಿರೋಧವು ಕಂಡುಬರದೆ, ಅವು ಒಂದೇ ಸಾಧನದ ಬೇರೆ ಬೇರೆ ಅವಯವಗಳಂತೆ ಕಾಣುತ್ತವೆ.

ವೈದಿಕ ತತ್ವಜ್ಞಾನ ಮತ್ತು ಆಚಾರ-ವಿಚಾರಗಳಲ್ಲಿ ಕಂಡುಬರುವ ವಿವಿಧತೆಯಲ್ಲಿರುವ ಈ ಸೂಕ್ಷ್ಮವಾದ ಏಕತ್ವವನ್ನು ಅರಿಯದ ಸಾಮಾನ್ಯ ಜನರು, ಸ್ವಾರ್ಥದಿಂದ ಪಂಥಪಂಗಡಗಳನ್ನು ಕಟ್ಟಿಕೊಂಡು ಮತ್ತೆ ಬಡಿದಾಟವನ್ನೆಬ್ಬಿಸಿದರು. ಬೇರೆ ಬೇರೆ ಸಾಂಪ್ರದಾಯ ಪ್ರವರ್ತಕರಾದ ಆಚಾರ್ಯರ ಅಥವಾ ಸಾಧುಸಂತರ ಉದ್ದೇಶವು ಏನೇ ಇದ್ದರೂ, ಕೇವಲ ಸ್ವಾರ್ಥಪರಾಯಣರಾದ ಉಪಾಧ್ಯಾಯರೂ, ಭಟ್ಟರೂ, ಮಠಪತಿಗಳೂ ತಮ್ಮ ತಮ್ಮ ಪಂಥದ ಪ್ರತಿಷ್ಠೆಯನ್ನು ಬೆಳೆಸುವದಕ್ಕೋಸ್ಕರ ಅನ್ಯಪಂಥದ ನಿಂದೆಗೆಳಸಿದರು. ಈ ಕಾಲದಲ್ಲಿ ನಾವು ಹಿಂದಿನ ಕಾಲಖಂಡದಲ್ಲಿಯ ವಿಶಾಲಹೃದಯದ ಮತ್ತು ವಿದ್ವಾಂಸರಾದ ರಾಜಕಾರಣಿಗಳನ್ನು ಕಾಣಲಾರೆವು. ರಾಜಾ ಭೋಜ ಮತ್ತು ಕಾಲಿದಾಸ, ಚಂದ್ರಗುಪ್ತ ಮತ್ತು ಆರ್ಯ ಚಾಣಕ್ಯರಂಥ ಬುದ್ಧಿಶಾಲಿಗಳು ಸಮಾಜದ ಧುರೀಣರಾದದ್ದು ಕಂಡುಬರುವದಿಲ್ಲ ರಾಜರ ಆಸ್ಥಾನವು ಯಾವದಾದರೊಂದು ವಿಶಿಷ್ಟಪಂಥದ ವಿದ್ವಾಂಸರ ಆಶ್ರಯಸ್ಥಾನವಾಯಿತು ಎಲ್ಲ ಧರ್ಮಗಳಿಗೂ ಆಧಾರವಾದ ಕೇವಲ ತಾತ್ವಿಕ ಮತ್ತು ಪಂಥರಹಿತ ಸಿದ್ಧಾಂತಗಳಿಗೆ ಆಶ್ರಯಸ್ಥಾನವಾದ ಸಾಮ್ರಾಟ ಚಂದ್ರಗುಪ್ತನ ಓಲಗವು ಅವನ ಮೊಮ್ಮಗನಾದ ಸಾಮ್ರಾಟ ಅಶೋಕನ ಕಾಲದಲ್ಲಿ ಬೌದ್ಧಪಂಥದ ಭಿಕ್ಷುಗಳಿಗೆ ಮತ್ತು ವಿದ್ವಾಂಸರಿಗೆ ಮಾತ್ರ ಆಶ್ರಯಸ್ಥಾನವಾಗಿತ್ತು ಅಶೋಕನು ಸ್ವತಃ ಬೌದ್ಧ ಧರ್ಮವನ್ನು ಸ್ವೀಕರಿಸಿ ಆ ಪಂಥವನ್ನು ಬೆಳೆಸುವದಕ್ಕೋಸ್ಕರ ಹೆಣಗಿದನು ಧರ್ಮದ ವ್ಯಾಪಕ ದೃಷ್ಟಿಯು ಇಲ್ಲದಂತಾಗಿ ವಿದ್ವಾಂಸರು ರಾಜಸತ್ತೆಯ ಬಲದಿಂದ ಮತಪರಿವರ್ತನವನ್ನು ಮಾಡಹತ್ತಿದರು. ಸತ್ಯಧರ್ಮವು ಹಿಂದಕ್ಕುಳಿದು, ಧರ್ಮಕ್ಕೆ ರಾಜಕೀಯ ಸ್ವರೂಪವು ಬರಹತ್ತಿತು ಸದಾಚಾರ ಮತ್ತು ಶುದ್ಧ ತರ್ಕದಿಂದ ಧರ್ಮದ ನಿರ್ಣಯವಾಗದೆ, ಅದ್ಭುತ ಚಮತ್ಕಾರಗಳನ್ನು ಮಾಡಿ ತೋರಿಸುವದೇ ಧರ್ಮದ ಲಕ್ಷಣವೆಂದು ಅಜ್ಞಜನರ ಕಲ್ಪನೆಯಾಗತೊಡಗಿತ್ತು ಈ ಕಾಲದಲ್ಲಿಯ ಧರ್ಮನಿರ್ಣಯದ ಕೆಲವು ಉದಾಹರಣೆ

ಗಳನ್ನು ನೋಡಿದರೆ, ಧರ್ಮವು ಜಾದುಗಾರನ ಆಟವಾಗತೊಡಗಿತ್ತೆಂದು ಕಂಡುಬರಬಹುದು. ಇಲ್ಲಿ ವಿದ್ವತ್ತಿಗಿಂತ ಕುಟಿಲ ನೀತಿಗೇ ಹೆಚ್ಚು ಪ್ರಾಧಾನ್ಯವು ಬರಹತ್ತಿತ್ತು. ಹೀಗಾಗಿ, ನಿಜವಾದ ಧರ್ಮವು ಹಿಂದೆ ಬಿದ್ದು ದಂಭಾಚಾರ, ದ್ವೇಷ, ಅಸೂಯೆಗಳಿಗೆ ಸಮಾಜವು ಪುನಃ ತುತ್ತಾಗ ಬೇಕಾಯಿತು. ಬೌದ್ಧಧರ್ಮದ ಪ್ರಸಾರದಿಂದ ರೂಢವಾದ ಅಹಿಂಸೆಯು ಕುತಂತ್ರಕ್ಕೆಳೆಸಿದ ಮುಖಂಡರ ಪುಕ್ಕತನವನ್ನೂ ಸ್ವಾರ್ಥವನ್ನೂ ಮುಚ್ಚಿ ಕೊಳ್ಳುವ ಸಾಧನವಾಯಿತು. ಸರಳತನ ಮತ್ತು ಶೌರ್ಯಗಳು ಆರ್ಯ ಭೂಮಿಯಿಂದ ಕಾಲುಕೀಳಹತ್ತಿದವು. ಸಮಾಜದೊಳಗಿನ ಬ್ರಾಹ್ಮಣ ಮತ್ತು ಕ್ಷಾತ್ರವೃತ್ತಿಗಳ ರಕ್ಷಣೆಯಾದಲ್ಲಿ ಎಲ್ಲ ಸಮಾಜದ ರಕ್ಷಣೆಯಾಗುವ ದೆಂದು ಶ್ರೀ ಶಂಕರಾಚಾರ್ಯರು ತಮ್ಮ ಗೀತಾಭಾಷ್ಯದಲ್ಲಿ ಯಥಾರ್ಥ ವಾಗಿಯೇ ಅಂದಿದ್ದಾರೆ. ಆದರೆ, ಈ ಎರಡೂ ಗುಣಗಳು ಆರ್ಯಭೂಮಿ ಯನ್ನು ಈಗ ಬಿಡಹತ್ತಿದ ಕಾರಣ ಪರಚಕ್ರಗಳಿಗೆ ಹಿಂದುಸ್ಥಾನವನ್ನು ಒಳನುಗ್ಗಲಿಕ್ಕೆ ಆಸ್ಪದವಾಯಿತು.

ಅಹಿಂಸೆಯು ವ್ಯಕ್ತಿಗಳ ಸಾಮಾಜಿಕ ಧರ್ಮವಾದರೂ, ರಾಜಧರ್ಮ ವಾಗಲಾರದು. ಯಾಕಂದರೆ, ಅಹಿಂಸಾಪ್ರಧಾನವಾದ ಯಾವದೊಂದು ಸಮಾಜವನ್ನು ಅಥವಾ ವ್ಯಕ್ತಿಯನ್ನು ಮತ್ತೊಂದು ಹಿಂಸಾಪ್ರಧಾನವಾದ ಕ್ರೂರ ಸಮಾಜ ಅಥವಾ ವ್ಯಕ್ತಿಯು ಹಿಂಸಿಸತೊಡಗಿದರೆ, ಚಾರಚಕ್ಷುವಾದ ರಾಜನು ಅದನ್ನು ಕೂಡಲೇ ತಡೆಗಟ್ಟುವದೇ ಅವನ ಧರ್ಮವು ಇಂಥ ಪ್ರಸಂಗಗಳಲ್ಲಿ ರಾಜನು ಅಥವಾ ರಾಜಸತ್ತೆಯನ್ನು ಧಾರಣಮಾಡಿದ ಸಂಸ್ಥೆಯು ಅಹಿಂಸೆಯ ದೊಡ್ಡ ದೊಡ್ಡ ಪಾಠಗಳನ್ನು ಕಲಿಸುತ್ತ ಕೈಕಟ್ಟಿ ಕೊಂಡು ಕುಳಿತರೆ, ನಿರಪರಾಧಿಗಳಾದ ಪ್ರಜೆಗಳ ಹಿಂಸೆಮಾಡಿದ ಪಾಪವು ಈ ಅಧಿಕಾರಯುಕ್ತ ವ್ಯಕ್ತಿಗೆ ಅಥವಾ ಸಂಸ್ಥೆಗೆ ತಟ್ಟುವದು ನಿಶ್ಚಿತ. ಯಾಕಂದರೆ, ಹಿಂಸೆಗೆ ಪ್ರಚೋದನೆಯನ್ನು ಕೊಡುವ ಎಲ್ಲ ಅಹಿಂಸಾತ್ಮಕ ಕೃತ್ಯಗಳು ಹಿಂಸೆಯೆಂದೇ ನೀತಿಶಾಸ್ತ್ರಜ್ಞರು ತಿಳಿಯುತ್ತಾರೆ. ಹಾಗೂ, ಅಹಿಂಸೆಯನ್ನು ಸ್ಥಾಪಿಸಲಿಕ್ಕೆ ಸಾಧನವಾದ ಹಿಂಸೆಯು ಅಹಿಂಸೆಯೇ ಸರಿ. ಹೀಗೆ ನೀತಿಗೆ ವಿರುದ್ಧವಾದ ಯೋಗ್ಯಾಯೋಗ್ಯವಿಚಾರವಿಲ್ಲದೆ ಅಂಧಶ್ರದ್ಧೆ

ಯಿಂದ ಆಚರಿಸಲ್ಪಡುವ ಆಭಾಸಮಾತ್ರ ಅಹಿಂಸೆಯಿಂದ ಸಮಾಜವು ದುರ್ಬಲವಾಗಿ ದ್ವೇಷಾಸೂಯೆಗಳಿಂದ ತಪ್ತವಾಗಿ ಬಿಡುತ್ತದೆ. ಪುಕ್ಕತನವು ಬೆಳೆದು ಅದರಲ್ಲಿ ಸಂರಕ್ಷಣೆಯ ಸಾಮರ್ಥ್ಯವು ಉಳಿಯುವದಿಲ್ಲ. ರಾಷ್ಟ್ರದಲ್ಲಿಯ ಸತ್ಯಪ್ರಿಯರಾದ ಧಾರ್ಮಿಕ ಶಿಷ್ಟರ ರಕ್ಷಣೆಯಾಗಿ ಅಧಾರ್ಮಿಕ ಕಳ್ಳಕಾಕರ ಮತ್ತು ದುಷ್ಟರ ಸಂಹಾರವಾಗಬೇಕೆನ್ನುವದೇ ರಾಜಧರ್ಮದ ಉದ್ದೇಶವು. ಇದರಿಂದಲೇ ರಾಷ್ಟ್ರದಲ್ಲಿ ಶಾಂತತೆಯು ನೆಲೆಸಿ, ರಾಷ್ಟ್ರದ ಉನ್ನತಿಯಾಗುತ್ತದೆ. ಇದಕ್ಕೆ ವಿರುದ್ಧವಾದ ರಾಜನ ಆಚರಣದಿಂದ ರಾಷ್ಟ್ರಹಾನಿಯಾಗುವದರಲ್ಲಿ ಸಂಶಯವಿಲ್ಲ.

ಗಝನೀ ಮಹಮ್ಮದನು ದಾಳಿಮಾಡಿದಾಗ ಹಿಂದುಸ್ಥಾನದ ಸ್ಥಿತಿಯು ಹೀಗೆಯೇ ಆಗಿತ್ತು. ಧರ್ಮಾಚರಣೆಯು ಗುಣ ಮತ್ತು ಕರ್ಮಗಳ ಸಂಕರದಿಂದ, ವ್ಯಕ್ತಿಗೆ ಮತ್ತು ಸಮಾಜಕ್ಕೆ ಸಂಕೋಲೆಯಂತೆ ಕಾಣಹತ್ತಿತು. ಅಜ್ಞಾನದ ಮತ್ತು ಅವಿವೇಕದ ಪ್ರಭಾವವಿದು. ಇರಲಿ. ಮುಸಲ್ಮಾನರ ಹಿಂದುಸ್ಥಾನದಲ್ಲಿಯ ಇತಿಹಾಸವು ಎಲ್ಲರಿಗೂ ಗೊತ್ತಿದ್ದ ಮಾತಾಗಿದೆ. ಅವರ ಧರ್ಮಾಂಧತೆಯ ದುಷ್ಪರಿಣಾಮವು ಜನತೆಗೆ ಬಹಳೇ ಅಸಹ್ಯವಾಯಿತು. ಈ ಕಾಲಖಂಡದಲ್ಲಿ ಕೆಲವು ವಿಚಾರವಂತರಾದ ಮತ್ತು ಪರಧರ್ಮ ಸಹಿಷ್ಣುಗಳಾದ ರಾಜ್ಯಸೂತ್ರಧಾರರನ್ನು ಕಾಣಬಹುದಾದರೂ, ಆರ್ಯಸಂಸ್ಕೃತಿಯು ನಷ್ಟಚರ್ಯೆಯೇ ಇನ್ನೂ ನಡೆದಿತ್ತೆಂದು ಧಾರಾಳವಾಗಿ ಹೇಳಬಹುದು. ಹಿಂದೂ ಸಮಾಜದ ಗೋಳು ಗಗನಕ್ಕೇರಿತ್ತು ಇಂಥ ಸಮಯದಲ್ಲಿ ಕರುಣಾಳುವಾದ ಆರ್ಯಮಾತೆಯು ಈ ದೀನ ಸಮಾಜದ ಸಂರಕ್ಷಣೆಗಾಗಿ, ಬ್ರಹ್ಮಜ್ಞಾನಿಗಳೂ, ಸಾಧುಸಂತರೂ ರಾಜರ್ಷಿಗಳೂ ಆದ ಹಲವು ಮಹಾಪುರುಷರಿಗೆ ಜನ್ಮವಿತ್ತಳು. ಇದೇ ಆರ್ಯಮಾತೆಯ ದೊಡ್ಡಸ್ತಿಕೆ. ಈ ಜ್ಞಾನಿಗಳಾದ ಸಾಧುಸಂತರೇ ನಮ್ಮ ದೇಶದ ನಿಜವಾದ ಮಾರ್ಗದರ್ಶಕರು. ಆರ್ಯಮಾತೆಯ ಕೃಪೆಯಿಂದ ನಮ್ಮ ದೇಶದಲ್ಲಿ ಇವರ ಕೊರತೆಯು ಯಾವ ಕಾಲಕ್ಕೂ ಆಗಿರುವದಿಲ್ಲ ಈ ಕಾಲದಲ್ಲಿಯ ಸಾಧು ಸಂತರು ಮಾಡಿದ ಮಹತ್ಕಾರ್ಯವೆಂದರೆ, ಈ ಸಮಾಜದಲ್ಲಿ ಧರ್ಮಜಾಗ್ರತೆಯನ್ನುಂಟುಮಾಡುವದು. ಉತ್ತರದಲ್ಲಿ ಚೈತನ್ಯಪ್ರಭು,

ತುಲಸೀದಾಸ, ಕಬೀರರಂಥ ಸಂತರೂ, ದಕ್ಷಿಣದಲ್ಲಿ ಜ್ಞಾನದೇವ, ಬಸವೇಶ್ವರ, ನಾಮದೇವ, ತುಕಾರಾಮರಂಥ ಅನೇಕ ಭಕ್ತಶ್ರೇಷ್ಠರೂ, ತತ್ವಜ್ಞಾನಿಗಳೂ, ಕರ್ಮ, ಉಪಾಸನಾ ಮತ್ತು ಜ್ಞಾನಮಾರ್ಗಗಳನ್ನು ಉಪದೇಶಿಸಿ ಸಾಮಾಜಿಕ ಸಂಘಟನೆಯನ್ನೂ, ಸ್ವಾಮಿ ವಿದ್ಯಾರಣ್ಯ, ಹುಕ್ಕಬುಕ್ಕ, ಗುರು ನಾನಕ, ರಾಮದಾಸ, ಶಿವಾಜೀಮಹಾರಾಜರಂಥವರು ಧಾರ್ಮಿಕ ಮತ್ತು ರಾಜಕೀಯ ಸಂಘಟನೆಗಳನ್ನೂ ಉಂಟುಮಾಡಿ ಅರಿಗಳ ಬಲವನ್ನು ಕುಗ್ಗಿಸಿದರು. ಹಿಂದುಸ್ಥಾನದಲ್ಲಿ ಪಾಶ್ಚಿಮಾತ್ಯರು ಬಲಶಾಲಿಯಾಗುತ್ತ ನಡೆದ ಕಾಲಕ್ಕೆ ಮುಸಲ್ಮಾನರ ಪ್ರಾಬಲ್ಯವು ಅಳಿದಂತೆಯೇ ಆಗಿತ್ತು. "ಬ್ರಿಟಿಶರು ತಮ್ಮ ಹಿಂದೀ ಸಾಮ್ರಾಜ್ಯವನ್ನು ಮುಸಲ್ಮಾನರಿಗಿಂತ ಹಿಂದುಗಳಿಂದಲೇ ಸೆಳೆದುಕೊಂಡರೆಂದು ಅನ್ನುವದು ಹೆಚ್ಚು ಯಥಾರ್ಥವಾಗಿದೆ. ಯಾಕಂದರೆ ಆ ಕಾಲಕ್ಕೆ ಮುಸಲ್ಮಾನರ ಎಲ್ಲ ರಾಜಸತ್ತೆಯು ಹಿಂದುಗಳ ಕೈಸೇರಿತ್ತು." ಎಂದು ಒಬ್ಬ ಇತಿಹಾಸಕಾರನು ಬರೆದಿದ್ದಾನೆ.

ಪಾಶ್ಚಾತ್ಯರ ಸಂಬಂಧದಿಂದುಂಟಾದ ನಮ್ಮ ಮಿಶ್ರ ಇತಿಹಾಸವನ್ನು ಬರೆಯುವ ಮೊದಲು, ನಾವು ತುಸು ಪಶ್ಚಿಮ ದೇಶಗಳ ಇಲ್ಲಿಯವರೆಗಿನ ಇತಿಹಾಸದ ಸಮಾಚಾರವನ್ನು ತೆಗೆದುಕೊಳ್ಳುವಾ. ಈ ಜಗತ್ತಿನ ಒಗಟನ್ನು ಬಿಡಿಸಿ ಅದರಲ್ಲಿಯ ಸುಖದುಃಖಾದಿ ದ್ವಂದ್ವಗಳ ಸೀಮೆಯನ್ನು ಮೀರಿ ಅಖಂಡ ಸುಖಪ್ರಾಪ್ತಿಯನ್ನು ಹೊಂದುವದೇ ಈ ಆರ್ಯಾವರ್ತದಲ್ಲಿಯ ಋಷಿಗಳ ಮತ್ತು ಅವರ ವಂಶಜರಾದ ಆರ್ಯರ ವೈಯಕ್ತಿಕ ಮತ್ತು ಸಾಮಾಜಿಕ ಗುರಿಯಾಗಿತ್ತೆಂದು ನಾವು ಹಿಂದೆ ಹೇಳಿದ್ದೇವೆ. ಇಂಥ ಧೀರೋದಾತ್ತವಾದ ಧ್ಯೇಯವು ಈ ಜಗತ್ತಿನ ಇತರ ಯಾವ ಸಮಾಜದ ಗುರಿಯೂ ಆಗಿರಲಿಲ್ಲವೆಂದು ಹೇಳಿದರೆ, ತಪ್ಪಾಗಲಾರದು. ನಾವು ಈ ಬಗ್ಗೆ ಪ್ರೊ. ಮೋಕ್ಷಮುಲ್ಲರರವರ ಬರಹದ ಅವತರಣಿಕೆಯನ್ನು ಹಿಂದೆ ಕೊಟ್ಟಿದ್ದನ್ನು ಇಲ್ಲಿ ಪುನಃ ವಾಚಕರ ನೆನಪಿಗೆ ತಂದುಕೊಡುತ್ತೇವೆ. (ಪಾ. ೬) ಇತರ ರಾಷ್ಟ್ರಗಳ ಧ್ಯೇಯವು ಎಂದೂ ಹೊಟ್ಟೆಬಟ್ಟೆಗಳನ್ನು ದಾಟಿ ಹೋಗಿರಲಿಲ್ಲವೆಂದು ಧಾರಾಳವಾಗಿ ಹೇಳಬಹುದು. ಅವರ ಅನೇಕ ಸಂಸ್ಕೃತಿಗಳು ಈ ಹೊಟ್ಟೆಬಟ್ಟೆಗಳ ಗುರಿಗೇ ಹೆಣಗಿ ನಷ್ಟವಾದದ್ದನ್ನು

ನಾವು ಅವರ ಇತಿಹಾಸದಿಂದ ಕಾಣಬಹುದು. ಬೆಬಿಲೋನಿಯಾ, ಇಜಿಪ್ತ, ಗ್ರೀಸ, ರೋಮು ಮುಂತಾದ ದೇಶಗಳಲ್ಲಿ ಕ್ರಿಸ್ತೀ ಶಕದ ಪೂರ್ವದಲ್ಲಿ ಅನೇಕ ಸಂಸ್ಕೃತಿಗಳು ಬೆಳೆದು ನಾಮಶೇಷವಾದವು ಈ ಸಂಸ್ಕೃತಿಗಳು ಐಹಿಕ ಅಭ್ಯುದಯದ ಶಿಖರಕ್ಕೆ ಮುಟ್ಟಿದಂತೆ ಕಂಡಾಗ್ಯೂ, ಈ ಅಭ್ಯುದಯಕ್ಕೆ ನಿಃಶ್ರೇಯಸದ ಅಂದರೆ ಧರ್ಮದ ತಳಹದಿಯಿಲ್ಲದ ಕಾರಣ ಅವು ನಾಶಕ್ಕೆ ಈಡಾದವು. ಸಂಕಟ ಸಮಯದಲ್ಲಿ ಧಾರಣಮಾಡುವ ಧರ್ಮದ ಬೆಂಬಲವಿಲ್ಲದೆ ಅವರ ಸಂಸ್ಕೃತಿಯು ಚೂರುಚೂರಾಗಿ ನಷ್ಟವಾಯಿತು. ( धारणाद्धर्ममित्याहुः धर्मो धारयते प्रजाः । ) ಪಂ. ಜವಾಹಿರಲಾಲ ನೆಹರು ಇವರು ತಮ್ಮ "**Discovery of India**" ಎಂಬ ಗ್ರಂಥದಲ್ಲಿ "ಇತರ ಅನೇಕ ಸಂಸ್ಕೃತಿಗಳು ಮಿಂಚಿನಂತೆ ಇತಿಹಾಸದ ಕಾಲಖಂಡಗಳಲ್ಲಿ ಮಿಂಚಿ ಹೋದಾಗ್ಯೂ, ಆರ್ಯಸಂಸ್ಕೃತಿಯು ತನ್ನ ಅಖಂಡ ಜ್ಯೋತಿಯನ್ನು ಇನ್ನೂ ವರೆಗೂ ಅವ್ಯಾಹತವಾಗಿ ಬೆಳಗುತ್ತಿರುವ ಕಾರಣವೇನಿರಬಹುದು? ಅದರ ಅಸಾಮಾನ್ಯವಾದ ಜಿಗಟುತನಕ್ಕೆ ಸಾಮರ್ಥ್ಯವನ್ನೀಯುವ ಸಿಧಿಯು ಯಾವದಿರಬಹುದು." ಎಂದು ಎತ್ತಿದ ಪ್ರಶ್ನೆಗೆ ಇದೇ ಉತ್ತರವಿರಬಹುದೇ? ಎಂಬ ವಿಚಾರವನ್ನು ನಮ್ಮ ವಾಚಕರೆದುರಿಗೆ ಇಡಬಯಸುತ್ತೇವೆ.

ಪಾಶ್ಚಾತ್ಯ ಸಮಾಜಗಳಲ್ಲಿ ಧರ್ಮದ ಕಲ್ಪನೆಯು ಕಂಡುಬಂದಾಗ್ಯೂ ಅದು ಐಹಿಕ ಜೀವನವನ್ನು ಸುಖಮಯಮಾಡುವ ಒಂದು ಸಾಧನವೆಂದು ಅದನ್ನು ಅವರು ಅವಲಂಬಿಸುತ್ತಾರೆ. ಈ ಸುಖವನ್ನು ಕೊಡುವ ಶಕ್ತಿಯು ಧರ್ಮದಲ್ಲಿರದಿದ್ದರೆ, ಅದನ್ನು ಅವರು ಬಿಡಲಿಕ್ಕೆ ಹಿಂದೆಮುಂದೆ ನೋಡರು. ಶ್ರೀರಾಮಚಂದ್ರನು ರಾಜ್ಯವನ್ನು ಧರ್ಮದ ಸಲುವಾಗಿ ಬಿಟ್ಟುಕೊಟ್ಟನು. ಈ ಧರ್ಮವು ಅಂತಿಮ ಆಧ್ಯಾತ್ಮಿಕ ಸುಖವನ್ನು ಕೊಡುತ್ತಿದ್ದು, ಇದರ ಸಲುವಾಗಿ ಧರ್ಮಕ್ಕೆ ವಿರುದ್ಧವಾದ ಮತ್ತು ಅನಿತ್ಯವಾದ ವಿಷಯಸುಖದ ತ್ಯಾಗ ಮಾಡುವದು ಆರ್ಯರ ಕಲ್ಪನೆ. ಆದರೆ ಅನಾರ್ಯರದು ಇದಕ್ಕೆ ವಿರುದ್ಧವಾದ ಕಲ್ಪನೆಯಿರುತ್ತದೆ. ಆಧ್ಯಾತ್ಮಿಕ ಸುಖದ ಕಲ್ಪನೆಯು ಪಾಶ್ಚಾತ್ಯರಿಗೆ ಹಿಂದುಸ್ಥಾನದಿಂದಲೇ ಸಿಕ್ಕಿರಬೇಕೆಂದು ತರ್ಕಿಸಲಿಕ್ಕೆ ಸಬಲಕಾರಣಗಳಿವೆ. ಹಿಂದೂ ಧರ್ಮದ ಮೂಲ ಗ್ರಂಥವಾದ ವೇದಗ್ರಂಥಗಳು ಮನುಷ್ಯ ಸಂಸ್ಕೃತಿಯ ಎಲ್ಲ

ಉಪಲಬ್ಧವಿರುವ ಧರ್ಮ ಗ್ರಂಥಗಳಲ್ಲಿ ಅತಿ ಪುರಾತನದವೆಂದು ಆಧುನಿಕ ಪಂಡಿತರು ಒಪ್ಪುತ್ತಾರೆ ಧರ್ಮದಲ್ಲಿ ಯಾವದಾದರೊಂದು ಹೊಸತತ್ವವನ್ನು ಯಾವನಾದರೊಬ್ಬ ವ್ಯಕ್ತಿಯು ಸ್ವತಂತ್ರರೀತಿಯಿಂದ ಸಂಶೋಧಿಸಿದನೆಂದು ಎಂದಿಗೂ ಹೇಳಲಿಕ್ಕೆ ಬರುವಂತೆ ಇಲ್ಲ ಭೌತಿಕ ಶಾಸ್ತ್ರಜ್ಞರು ವಿಚಿತ್ರವಾದ ಹೊಸ ಹೊಸ ಸಂಶೋಧನೆಗಳನ್ನು ಪಂಚಮಹಾಭೂತಗಳಿಂದ ಮಾಡಬಹುದು. ಆದರೆ, ಈಶ್ವರನ ಗುಣಗಳ ಹೆಚ್ಚು ಸ್ಪಷ್ಟವಾದ ಸಾಕ್ಷಾತ್ಕಾರವು ಮನುಷ್ಯನಿಗೆ ಆಗಬಹುದಾದರೂ, ಅವನು ಒಂದು ಹೊಸದಾದ ಈಶ್ವರನ ಅಥವಾ ಬ್ರಹ್ಮತತ್ವದ ಗುಣವನ್ನು ಸಂಶೋಧಿಸುವನೆಂದು ಹೇಳುವದು ಅಶಕ್ಯವಾದ ಮಾತು. ಯಾಕಂದರೆ, ಪಂಚಭೂತಗಳು ಬುದ್ಧಿಗಮ್ಯವಾಗುವಂತೆ ಪರಮೇಶ್ವರನು ಬುದ್ಧಿಗಮ್ಯನಲ್ಲ ಎಲ್ಲ ಧರ್ಮಗಳಿಗೂ ಸಾರಭೂತವಾದ ತತ್ವಗಳು ಮನುಷ್ಯಸಮಾಜದಷ್ಟೇ ಪುರಾತನದ್ದಿದ್ದು ಅವು ಪರಮೇಶ್ವರನಿಂದ ಮಂತ್ರದ್ರಷ್ಟರಾದ ಋಷಿಗಳಿಗೆ ಕಲ್ಪದ ಆರಂಭದಲ್ಲಿಯೇ ವೇದರೂಪದಿಂದ ಪ್ರಕಟವಾಗುತ್ತವೆ. ಈ ಜಗತ್ತಿನ ಎಲ್ಲ ಧರ್ಮಗಳ ತುಲನಾತ್ಮಕ ಅಭ್ಯಾಸಮಾಡಿದರೆ, ಹೊಸಧರ್ಮದ ತತ್ವಗಳನ್ನು ಅದಕ್ಕೂ ಹಿಂದಿನ ಧರ್ಮಗಳಲ್ಲಿಯೂ, ಇವನ್ನು ಇವಕ್ಕೂ ಹಿಂದಿನ ಧರ್ಮಗಳಲ್ಲಿಯೂ, ಹೀಗೆ ಎಲ್ಲಕ್ಕೂ ಪುರಾತನವಾದ ವೈದಿಕ ಧರ್ಮದಲ್ಲಿ ಇವೆಲ್ಲವುಗಳ ಉಗಮವನ್ನು ಕಾಣಬಹುದು. ವೇದಗಳಲ್ಲಿ ಮನುಷ್ಯನ ಆಧ್ಯಾತ್ಮಿಕ ಅನುಭವಗಳನ್ನು ಎಷ್ಟು ಸ್ಪಷ್ಟವಾಗಿಯೂ, ಸಾಕ್ಷಾತ್ತಾಗಿಯೂ ಉಲ್ಲೇಖಿಸಿರುವರೋ, ಅಷ್ಟು ಅನುಭವಪೂರ್ವಕ ಸ್ಪಷ್ಟವಾದ ಘೋಷಣೆಯನ್ನು ಮತ್ತೆ ಯಾವ ಧರ್ಮಗ್ರಂಥಗಳಲ್ಲಿಯೂ ಕಾಣಲಾರೆವು. ಪ್ರತ್ಯಕ್ಷ ಆಧ್ಯಾತ್ಮಿಕ ಜ್ಞಾನದ ನಿಶ್ಚಯಪೂರ್ವಕವಾದ ಸಾರ್ವತ್ರಿಕ ಆಶ್ವಾಸನವು ಮನುಷ್ಯನಿಗೆ ಹೇಗೆ ಉಪನಿಷತ್ತುಗಳಲ್ಲಿ ಕೊಡಲಾಗಿರುವದೋ, ಹಾಗೆ ಸಾಕ್ಷಾತ್ತಾದ ಜ್ಞಾನವು ಇತರ ಗ್ರಂಥಗಳಲ್ಲಿಲ್ಲ. ಅವುಗಳಲ್ಲಿಯ ಜ್ಞಾನವು ಪರೋಕ್ಷವೂ ಮಸುಕಾದದ್ದೂ ಕಂಡುಬರುತ್ತದೆ. ವೇದ ಧರ್ಮದ ಅಭ್ಯಾಸಮಾಡಿದ ಪರಧರ್ಮೀಯ ಪಂಡಿತರಿಗೆ ವೇದದಲ್ಲಿ ಆದರವುಂಟಾದದ್ದು ಇದೇ ಕಾರಣದಿಂದ. ಜರ್ಮನ ಪಂಡಿತನಾದ ಶೋಫೆನ ಹೋರನು ಅನ್ನುವದೇನಂದರೆ “ಉಪನಿಷತ್ತಿನ ಪ್ರತಿಯೊಂದು ವಾಕ್ಯದಿಂದ ಅತಿ ಗಂಭೀರ ಮತ್ತು ಉದಾತ್ತವಾದ ಮೂಲ

ಕಲ್ಪನೆಗಳು ಹೊರಡುತ್ತವೆ; ಮತ್ತು ಆ ಸಮಗ್ರ ಗ್ರಂಥಗಳಲ್ಲಿ ಉನ್ನತ, ಪವಿತ್ರ ಮತ್ತು ಸ್ನಿಗ್ಧವಾದ ವಿಚಾರಸರಣಿಯು ತುಂಬಿಕೊಂಡಿದೆ. ಇಡೀ ಜಗತ್ತಿನಲ್ಲಿ ಉಪನಿಷತ್ತಿನ ಅಭ್ಯಾಸದಷ್ಟು ಲಾಭದಾಯಕ ಮತ್ತು ಶ್ರೇಷ್ಠವಾದದ್ದನ್ನು ಮತ್ತೆಲ್ಲಿಯೂ ಕಾಣುವದು ಶಕ್ಯವಿಲ್ಲ. ಅವು ಅತ್ಯುಚ್ಚ ಬುದ್ಧಿಮತ್ತೆಯ ಫಲಗಳಾಗಿವೆ. ತೀವ್ರವಾಗಿಯಾಗಲಿ ಅಥವಾ ಕೆಲವು ಕಾಲಾಂತರದಿಂದಾಗಲಿ ಈ ಗ್ರಂಥಗಳು ಸಮಗ್ರ ಜನಗಳ ವಿಶ್ವಾಸಕ್ಕೆ ಪಾತ್ರವಾಗುವದು ನಿಶ್ಚಿತ.' ಪ್ರೊ. ಮೋಕ್ಷಮುಲ್ಲರನ ವೇದಾಧ್ಯಯನದ ಅನುಭವವೂ ಇದೇ ಪ್ರಕಾರದ್ದಿದೆ ಇದರ ಮೇಲಿಂದ ವೇದಗಳೇ ಎಲ್ಲ ಧರ್ಮಕಲ್ಪನೆಯ ಉಗಮವೆಂದು ತರ್ಕಿಸಬಹುದು. ಹಿಂದೂ (ವೇದ ಧರ್ಮ), ಪಾರ್ಸಿ, ಯಹುದಿ, ಬೌದ್ಧ. ಕ್ರಿಶ್ಚಿಯನ, ಇಸ್ಲಾಮ ಎಂಬ ಆರು ಮುಖ್ಯ ಧರ್ಮಗಳು ಈಗಿನ ಜಗತ್ತಿನಲ್ಲಿ ಇವೆ. ಹಿಂಧೂ ಧರ್ಮವು ಸನಾತನವಿದ್ದು, ಅದನ್ನು ಸ್ಥಾಪಿಸಿದ ಹಕ್ಕು ಯಾವನೊಬ್ಬ ವ್ಯಕ್ತಿಗೆ ಇರವದಿಲ್ಲ. ಇತರ ಧರ್ಮಗಳು ಅವುಗಳ ಸಂಸ್ಥಾಪಕರ ಹೆಸರಿನಿಂದ ಪ್ರಸಿದ್ಧವಾಗಿವೆ. ಅವರು ತಮ್ಮ ತತ್ವಗಳನ್ನು ಹಿಂದೂ ಧರ್ಮದಿಂದಲೇ ಸಾಕ್ಷಾತ್ತಾಗಿ ಅಥವಾ ಪರಂಪರೆಯಿಂದ ಸಂಪಾದಿಸಿರಬೇಕು. ಹಿಂದೂ ಧರ್ಮದಿಂದ ಪಾರ್ಶೀ ಧರ್ಮ, ಇದರಿಂದ ಯಹುದೀ ಧರ್ಮ, ಯಹುದಿಗಳಿಂದ ಮುಸಲ್ಮಾನ ಧರ್ಮ, ಈ ಪ್ರಕಾರ ಒಂದು ಪರಂಪರೆಯಿದ್ದು; ಇನ್ನೊಂದು, ಹಿಂದೂಧರ್ಮದಿಂದ ಬೌದ್ಧಧರ್ಮ, ಬೌದ್ಧ ಮತ್ತು ಯಹುದೀ ಧರ್ಮಗಳ ಮಿಶ್ರಣದಿಂದ ಕ್ರಿಶ್ಚಿಯನ ಧರ್ಮ, ಹೀಗೊಂದು ಪರಂಪರೆಯನ್ನು ಇತಿಹಾಸಜ್ಞರು ಕಲ್ಪಿಸುತ್ತಾರೆ ಯೇಸೂಕ್ರಿಸ್ತನು ತನ್ನ ಅಜ್ಞಾತವಾಸದ ಕಾಲದಲ್ಲಿ ಹಿಂದುಸ್ಥಾನಕ್ಕೆ ಬಂದು, ಇಲ್ಲಿಯ ಬೌದ್ಧ ಭಿಕ್ಷುಗಳ ಕಡೆಗೆ ಧರ್ಮಸಾಧನವನ್ನೂ ತತ್ವಜ್ಞಾನವನ್ನೂ ಕಲಿತಿರಬೇಕೆಂದು ಅವರು ಊಹಿಸುತ್ತಾರೆ ಬಹು ಪೂರ್ವಕಾಲದಲ್ಲಿ ಕಾಮ ಕ್ರೋಧಾದಿ ವಿಕಾರಗಳಿಂದ ದೂಷಿತವಾದ ಕೆಲವು ಆರ್ಯ ಕುಟುಂಬಗಳು ವರ್ಣಾಶ್ರಮ ಧರ್ಮವನ್ನು ಬಿಟ್ಟು, ಹಿಂದುಸ್ಥಾನದಿಂದ ಅನ್ಯದೇಶಗಳಿಗೆ ತೆರಳಿದವೆಂಬ ಉಲ್ಲೇಖಗಳು ನಮ್ಮ ಹಳೆಯ ವೈದಿಕ ಗ್ರಂಥಗಳಲ್ಲಿ ಸಿಗುತ್ತವೆ. ಹಾಗೂ ಐತಿಹಾಸಿಕ ಕಾಲದಲ್ಲಿ ಈ ದೇಶದ ಹಲವು ರಾಜರು ತಮ್ಮ ರಾಯ

ಭಾರಿಗಳನ್ನು ಪರದೇಶಗಳಿಗೆ ಕಳಿಸಿದ ಉದಾಹರಣೆಗಳುಂಟು. ವೈಶ್ಯರೂ ವ್ಯಾಪಾರದ ಉದ್ದೇಶದಿಂದ ಪರದೇಶಗಳ ಸಂಗಡ ಸಂಬಂಧವನ್ನಿಟ್ಟು ಕೊಂಡಿದ್ದರು. ಈ ಎಲ್ಲ ಕಾರಣಗಳಿಂದ ಪಶ್ಚಿಮ ದೇಶಗಳಲ್ಲಿಯ ಅನಾರ್ಯ ರಿಗೆ ಹಿಂದುಸ್ತಾನದಲ್ಲಿಯ ಭಕ್ತಿಮಾರ್ಗದ ಸಂಪರ್ಕವು ಬಂದಿರಬೇಕು. ಅವರಲ್ಲಿ ಹೆಚ್ಚು ಸಾತ್ವಿಕ ವೃತ್ತಿಯುಳ್ಳವರು ಈಶ್ವರ ಭಕ್ತಿಯಿಂದ ಪುನೀ- ತರೂ ಆಗಿರಬೇಕು. ( स्त्रियो वैश्यास्तथा शूद्रास्तेऽपि यांति परांगतिम् । ) ಆದರೆ ಪಾಶ್ಚಾತ್ಯರ ಸರ್ವಸಾಮಾನ್ಯ ಸಮಾಜವು ಮಾತ್ರ ಐಹಿಕ ಸಿಷ್ಟಿ ಯನ್ನು ಎಂದೂ ಬಿಟ್ಟಂತೆ ತೋರುವದಿಲ್ಲ. ಈಶ್ವರ ಭಕ್ತರ ಅದ್ಭುತ ಸಾಮರ್ಥ್ಯ ಮತ್ತು ಸದ್ಗುಣಗಳಿಗೆ ಮೋಹಿತರಾಗಿ, ಸಾಮಾನ್ಯರು ಇವರ ಧರ್ಮ ( ಅಂದರೆ ಕೇವಲ ಬಾಹ್ಯ ಆಚಾರ ) ವನ್ನು ಸ್ವೀಕರಿಸಿದರೂ, ಅದರ ಹಿಂದೆ ತರ್ಕಶುದ್ಧವಾದ, ವಿಚಾರಸರಣಿಯಿರಲಿಲ್ಲ ಅವರಿಗೆ ಧರ್ಮವು ಅಂಧಃಶ್ರದ್ಧೆಯ ವಿಷಯವಾಗಿತ್ತು. ಈ ಅಂಧಃಶ್ರದ್ಧೆಯಿಂದ ಅವರ ಕ್ರೂರತನವು ಮತ್ತಿಷ್ಟು ಉಕ್ಕೇರಿ, ಅನನ್ವಿತವಾದ ಧರ್ಮಹಿಂಸೆಯು ಯುರೋಪಖಂಡದಲ್ಲಿ ಆದ ಇತಿಹಾಸವು ಪ್ರಸಿದ್ಧವಿದೆ. ಆದರೆ ಆರ್ಯ ಭೂಮಿಯಲ್ಲಿ ತತ್ವಜ್ಞಾನದಿಂದ ಬೆಳಗಿದ ವಿವೇಕ, ಸಹಿಷ್ಣುತೆ ಮತ್ತು ಅಹಿಂಸೆಗಳೇ ಎಲ್ಲ ಧರ್ಮಪಂಥಗಳ ತಳಹದಿಯಾಗಿದ್ದ ಕಾರಣ, ಸುದೈವ ದಿಂದ ಪರಧರ್ಮ ಹಿಂಸೆಯು ಹಿಂದುಗಳಿಂದ ಯಾವ ಕಾಲಕ್ಕೂ ಆಗಲಿಲ್ಲ. ಪ್ರೊ. ಮೋಕ್ಷಮುಲ್ಲರರು ತಮ್ಮ "Six systems of Indian Philosophy" ಎಂಬ ಗ್ರಂಥದಲ್ಲಿ ಬರೆದಿರುವದೇನೆಂದರೆ "ವೈದಿಕ ಮತ್ತು ಬೌದ್ಧ ಧರ್ಮೀಯರೊಳಗೆ ಯಾವಾಗಲೂ ವೈರಭಾವವಿದ್ದು, ಅವರು ತಮ್ಮೊಳಗೆ ಹಿಂದುಸ್ಥಾನದ ಎರಡು ಭಾಗವನ್ನು ಮಾಡಿ ಹಂಚಿಕೊಂಡಿದ್ದ ರೆಂಬ ಕಲ್ಪನೆಯಿಂದ ನಾವು ( ಯುರೋಪಿಯನರು ) ಬಹುದೂರ ಇರ ತಕ್ಕದ್ದು. ಅವರ ಸಂಬಂಧವು ಮೊದಲಿನ ಆಸ್ತಿಕ ಪಂಥಗಳಲ್ಲಿದ್ದ ( ವೇದಾಂತ, ಸಾಂಖ್ಯ, ಮೀಮಾಂಸಾ ಮುಂತಾದವುಗಳು ) ಸಂಬಂಧ ಕ್ಕಿಂತ ಬೇರೆ ತರದ್ದು ಎಂದಿಗೂ ಇರಲಿಲ್ಲ. ಅವರ ವಿಚಾರಸರಣಿಯಲ್ಲಿ ಅಂತರವು ಕಂಡುಬಂದಾಗ್ಯೂ ಅವರಲ್ಲಿ ಒಬ್ಬರು ಮತ್ತೊಬ್ಬರ ವಿರುದ್ಧ ದ್ವೇಷಾಗ್ನಿಯನ್ನು ಎಂದಿಗೂ ಕಾಣುತ್ತಿರಲಿಲ್ಲ. 'ತ್ರಿಪೀಠಿಕಾ'

ಎಂಬ ಬೌದ್ಧರ ಧರ್ಮಗ್ರಂಥದಿಂದ ನಿರ್ಣಯ ಮಾಡುವದಾದರೆ, ಆ ಕಾಲದಲ್ಲಿ ಸಮಗ್ರ ಆರ್ಯಭೂಮಿಯು ಧರ್ಮ ಮತ್ತು ತತ್ವಜ್ಞಾನದ ವಿಚಾರದಲ್ಲಿ ಪುನಃ ಮೊದಲಿನಂತೆ ಮಗ್ನವಾಗಿತ್ತೆಂದು ಹೇಳಬಹುದು. ಕೆಂಬಹುನಾ, ಹಿಂದುಗಳು ತತ್ವಜ್ಞಾನಿಗಳೆಂಬ ಹಳೆಯ ನಾಣ್ಣುಡಿಯು ರಾಜಗ್ರಹದ ಬೌದ್ಧರ ಸಭೆಗಳಿಗೆ ಎಷ್ಟು ಅನ್ವಯಿಸುವದೋ, ಅಷ್ಟು ಮುಂದೆ ಮತ್ತೆ ಯಾವ ಕಾಲಕ್ಕೂ ಸರಿದೋರುವದಿಲ್ಲ. (ಮಹಾಭಾರತ ಕಾಲದ ಧರ್ಮರಾಜನ ಸಭೆಗೆ ಈ ಸಭೆಗಳನ್ನು ಹೋಲಿಸಬಹುದೆಂದು ಅವರೇ ಬರೆದಿದ್ದಾರೆ) ಗ್ರೀಕ ಪ್ರವಾಸಿಗಳಿಗೆ ಈ ಅದ್ಭುತ ರಾಷ್ಟ್ರದಲ್ಲಿ (ಹಿಂದುಸ್ಥಾನದಲ್ಲಿ) ತತ್ವಜ್ಞಾನವು ಎಲ್ಲರನ್ನೂ ಆವರಿಸಿದ್ದು ಎಷ್ಟು ಎದ್ದುಕಂಡಿತೋ ಅಷ್ಟು ಮತ್ತೆ ಯಾವ ಸಂಗತಿಯೂ ಕಂಡುಬರಲಿಲ್ಲ ತತ್ವಜ್ಞಾನವಿಲ್ಲದ ವಿವೇಕಶೂನ್ಯ ಧರ್ಮಾಚರಣೆಯಿಂದ ಯುರೋಪಖಂಡ ದಲ್ಲಿ ಧರ್ಮದ ಸಲುವಾಗಿ ಹಿಂಸೆಯ ಬೆಂಕಿಯು ಎದ್ದು ಉರಿಯಹತ್ತಿತ್ತು. ಇದರಿಂದ ವಿಚಾರವಂತರು ಬೇಸತ್ತು ಸರ್ವಜನರಿಗೂ ಆಧಾರಭೂತವಾದ ಒಂದೇ ತತ್ವವು ಈ ಜಗತ್ತಿನಲ್ಲಿ ಇರಬಹುದೇ? ಇದ್ದರೆ ಅದು ಎಲ್ಲ ಸಾಮಾಜಿಕ ರಚನೆಯ ತಳಹದಿಯಾಗಬಹುದೇ? ಎಂಬ ವಿಚಾರಕ್ಕೆ ಬಿದ್ದು ಅವರು ಸಂಶೋಧನೆಗೆ ಹತ್ತಿದರು ಆದರೆ, ತಮ್ಮ ರಾಷ್ಟ್ರೀಯ ಧ್ಯೇಯ ವಾದ ಹೊಟ್ಟೆಬಟ್ಟೆಗಳ ಮೇರೆಯನ್ನು ದಾಟಿ ಮುಂದೆಸಾಗುವ ಸಾಮರ್ಥ್ಯವು ಅವರಲ್ಲಿರಲಿಲ್ಲ. ಮನುಷ್ಯಪ್ರಾಣಿಯ ಆದ್ಯ, ಮಧ್ಯದ ಮತ್ತು ಕೊನೆಯ ವಸತಿಸ್ಥಾನವು ಈ ಜಗತ್ತೇ ಇರಬೇಕೆಂದೂ, ಜೀವಾತ್ಮನ ಕ್ರೀಡಾ ಸಾಧನವು ಈ ಜಗತ್ತಿನ ಪಂಚಭೌತಿಕ ವಸ್ತುಗಳೇ ಆಗಬೇಕೆಂದೂ ಅವರು ದುರಾಗ್ರಹವನ್ನು ಹಿಡಿದರು. ಈ ಆದ್ಯ ಉಪಪತ್ತಿಯಿಂದಲೇ (**Hypothesis**) ಅವರ ಭೌತಿಕ ಶಾಸ್ತ್ರಕ್ಕೆ ಆರಂಭವಾಯಿತು. ಅವರ ಸಂಶೋಧನೆಯಲ್ಲಿ ಈ ಉಪಪತ್ತಿಗೆ ವಿರುದ್ಧವಾದ ಹಲವು ಪುರಾವೆಗಳು ಕಂಡು ಬಂದಾಗ್ಯೂ, ಅವನ್ನು ಅವರು ಎಳೆದುತಂದು ಬಲಾತ್ಕಾರದಿಂದ ತಮ್ಮ ಆದ್ಯ ಉಪಪತ್ತಿಯ ಚೌಕಟ್ಟಿನಲ್ಲಿ ಇರಿಸುವ ಪ್ರಯತ್ನವನ್ನು ಮಾಡುತ್ತಿದ್ದ ಕಾರಣ, ಅವರಿಗೆ ನಿಜವಾದ ಆದ್ಯ ತತ್ವದ ಜ್ಞಾನವಾಗುವದು ಅಶಕ್ಯವಾ ಯಿತು. ಭೌತಿಕ ಶಾಸ್ತ್ರದಿಂದ ದೃಶ್ಯಪದಾರ್ಥಗಳ ರಹಸ್ಯವನ್ನೂ ಅವುಗಳ ಸಾಮರ್ಥ್ಯವನ್ನೂ ಕಂಡುಹಿಡಿದು ಅವನ್ನು ಮನುಷ್ಯಪ್ರಾಣಿಯ ಐಹಿಕ

ಸುಖದ ಬೆಳವಣಿಗೆಗೆ ಹೇಗೆ ಉಪಯೋಗಿಸಿಕೊಳ್ಳಬೇಕೆಂಬ ಕಲೆಯಲ್ಲಿ ಪಾಶ್ಚಾತ್ಯರು ಚತುರರಾದರು

ಇತ್ತ ಹಿಂದುಸ್ಥಾನದಲ್ಲಿಯೂ ಆಧ್ಯಾತ್ಮಿಕ ಧರ್ಮದ ಅಜ್ಞಾನವು ಬೆಳೆಯುತ್ತ ನಡೆದಿತ್ತು. ವಸಿಷ್ಠ–ರಾಮ, ಶ್ರೀಕೃಷ್ಣ–ಅರ್ಜುನ, ಆರ್ಯ ಚಾಣಕ್ಯ–ಚಂದ್ರಗುಪ್ತರಂಥ ಬ್ರಹ್ಮರ್ಷಿ–ರಾಜರ್ಷಿಗಳ ಮಾರ್ಗದರ್ಶನವು ಸಮಾಜಕ್ಕೆ ಇಲ್ಲದಂತಾಗಿ, ಅದು ಕೀಳತನದ ಗುಣಹೀನರಾದ ವರಿಷ್ಠ ವರ್ಗದವರ ಕೈಸೇರಿತು. ಆದ್ದರಿಂದ ಗುಣಕ್ಕೆ ಮಾನವಿಲ್ಲದೆ ಕೇವಲ ಜಾತಿ ಮತ್ತು ದಂಭಾಚಾರಗಳಿಗೆ ಮಾನವು ಬರಹತ್ತಿತ್ತು. ಜ್ಞಾನರಸದಿಂದ ಕೂಡಿದ ವರ್ಣಾಶ್ರಮದ ಸ್ನಿಗ್ಧ ಆಚಾರವು ಇಲ್ಲದಂತಾಗಿ, ಅದು ಈಗ ಜ್ಞಾನಹೀನವಾದ ಸಾಮಾಜಿಕ ಆಚರಣೆಯು ಒಂದು ಒಣಗಿದ ಅಚ್ಚಾಗ ತೊಡಗಿತ್ತು. ಆದ್ದರಿಂದ ಸಮಾಜವು ಬಲಹೀನವಾಗುತ್ತ ನಡೆದಿತ್ತು. ಆದರೂ ಒಮ್ಮೆ ತಿರುಗಿಸಿಬಿಟ್ಟ ಕುಂಬಾರನ ತಿಗರಿಯಂತೆ, ಆ ಸಮಾಜದ ಬಾಹ್ಯ ಆಚಾರವು ನಡೆಯುತ್ತಿದ್ದ ಕಾರಣ, ಇತರ ಅನಾರ್ಯ ರಾಷ್ಟ್ರಗಳಿಗಿಂತ ಹಿಂದೂ ರಾಷ್ಟ್ರವು ಸುಖಸಂಪತ್ತಿಯಿಂದ ಸಂಪನ್ನವಾಗಿತ್ತು. ಆದ್ದರಿಂದ ಅದು ಪರಕೀಯ ರಾಜರ ಮತ್ತು ಶೂರ ಸೇನಾಪತಿಗಳ ಮಹತ್ವಾಕಾಂಕ್ಷೆಗೆ ಗುರಿಯಾಗಹತ್ತಿತು. ಮುಸಲ್ಮಾನರ ದಾಳಿಗಳಿಂದ ಹಿಂದುಸ್ಥಾನದ ಹೊರಗೆ ಅಪರಿಮಿತ ಸಂಪತ್ತು ಒಯ್ಯಲ್ಪಟ್ಟ ಬಗ್ಗೆ ಇತಿಹಾಸವು ಸಾಕ್ಷಿಯಾಗಿದೆ. ಮುಸಲ್ಮಾನ ಸರದಾರರೂ, ಸೇನಾಪತಿಗಳೂ ಈ ಸಂಪತ್ತಿಯನ್ನು ಒಯ್ಯಲಾರದೆ, ಇಲ್ಲಿಯೇ ವಾಸವಾಗಿ ತಮ್ಮ ರಾಜ್ಯವನ್ನು ಇಲ್ಲಿಯೇ ಕಟ್ಟಿಕೊಂಡು ಆಳುವದು ಹೆಚ್ಚು ಸುಲಭವೆಂದು ಕಂಡುಹಿಡಿದರು. ಸರ್ವಸಾಮಾನ್ಯ ಸಮಾಜದಲ್ಲಿ ರಾಷ್ಟ್ರಪ್ರೇಮವು ಇಲ್ಲದಂತಾಗಿತ್ತು. ಯಾಕಂದರೆ, ಜನತೆಯು ಶಾಂತತಾಪ್ರಿಯವಿರುವದರಿಂದ ಅದಕ್ಕೆ ಆಗಿನ ನೀತಿಶೂನ್ಯವಾದ ಆಡಳಿತದ ಬಗ್ಗೆ ಬೇಸರವುಂಟಾಗಿತ್ತು ಹಿಂದುಸ್ಥಾನದ ಈ ಕೊಳೆತ ಸ್ಥಿತಿಯಲ್ಲಿ ಪರರಿಗೆ ಶೂರತನದಿಂದಲೂ, ಕ್ರೂರತನದಿಂದಲೂ, ಭೇದನೀತಿಯಿಂದಲೂ ರಾಜ್ಯವನ್ನು ನಾಮಧಾರಿಗಳಾದ ಹಿಂದೂ ರಾಜರಿಂದ ಸೆಳೆದುಕೊಳ್ಳುವದು ಸುಲಭವಾಯಿತು ಮುಸಲ್ಮಾನರ ಧರ್ಮಪ್ರಸಾರದ ಕಾರ್ಯವು

ಈ ಸಾಧನಗಳಿಂದಲೇ ನಡೆದಿದ್ದು, ಅದು ತಮ್ಮ ರಾಜ್ಯಸೂತ್ರಗಳನ್ನು ಭದ್ರಪಡಿಸುವ ಒಂದು ಮಾರ್ಗವಾಗಿತ್ತು. ಹಿಂದುಗಳಲ್ಲಿದ್ದ ಅಜ್ಞಾನ, ಅಚ್ಚುಕಟ್ಟಾದ ನಿರ್ಬಂಧ ಇವುಗಳ ಲಾಭಪಡೆದು ನ್ಯಾಯಾನ್ಯಾಯಗಳ ತಾರತಮ್ಯವಿಲ್ಲದೆ, ಕೆಳಗಿನ ವರ್ಗದವರನ್ನು ತಮ್ಮ ಕಡೆಗೆ ಒಡೆದುಕೊಂಡು ಧರ್ಮಪ್ರಸಾರದ ಕಾರ್ಯವನ್ನು ಅವರು ನಡೆಸಿದ್ದರು. ಮೇಲಿನ ವರ್ಗದವರು ಕೆಳಗಿನ ವರ್ಗದವರ ಮತ್ತು ಅಬಲೆಯರ ಗೋಳಿನ ಕಡೆಗೆ ಲಕ್ಷ್ಯಗೊಡದೆ, ಅವರನ್ನು ಪರಧರ್ಮೀಯರ ಸೆಳೆತಕ್ಕೆ ಒಳಪಡಿಸಿದರು.

ಧರ್ಮಾಚರಣೆಯ ಸಾಮರ್ಥ್ಯವು ಗುಣದಿಂದುಂಟಾದ ಅಧಿಕಾರದಿಂದ ಬರುವದೇ ಹೊರತು, ಕೇವಲ ಜನ್ಮದಿಂದ ಬರಲಾರದೆಂಬ ಕಟುವಾದ ಸತ್ಯವು ಆಗಿನ ಆಚಾರಧುರಂಧರರ ಲಕ್ಷಕ್ಕೆ ಬಂದಂತೆ ತೋರುವದಿಲ್ಲ. ಉದಾಹರಣೆಗಾಗಿ, ಆಧ್ಯಾತ್ಮಿಕ ಉನ್ನತಿಯ ಕೇವಲ ದ್ಯೋತಕವಾದ ಕೆಲವು ಆಚಾರಗಳು ದಂಭಾಚಾರಕ್ಕೊಳಗಾದ ಶಿಷ್ಟರಿಂದ, ಆ ಆಧ್ಯಾತ್ಮಿಕ ಸ್ಥಿತಿಯನ್ನು ಹೊಂದದ ವ್ಯಕ್ತಿಗಳ ಮೇಲೂ ಸಕ್ತಿಯಿಂದ ಹೇರಲಾಗುತ್ತಿತ್ತು. ಸ್ತ್ರೀಯರ ಸತಿಗೆ ಹೋಗುವ ಆಚಾರವು ಸತಿಧರ್ಮದ ಮೇಲ್ಮಟ್ಟಕ್ಕೆ ಮುಟ್ಟಿದವರಿಗೇ ಶಕ್ಯ. ಈ ಮಟ್ಟಕ್ಕೆ ಮುಟ್ಟಿದ ಸ್ತ್ರೀಯರಿಗೆ ಈ ಜಗತ್ತಿನಲ್ಲಿ ಪತಿಸೇವೆಯ ಹೊರತು ಬೇರೆ ಮತ್ತೆ ಯಾವ ಕರ್ತವ್ಯವೂ ಇಲ್ಲದಂತಾಗುತ್ತದೆ. ಈ ಲೋಕದ ಯಾವದೊಂದು ವಸ್ತುವಿನದಷ್ಟೇ ಅಲ್ಲ, ತಮ್ಮ ಸ್ಥೂಲದೇಹದ ಮಮತೆಯೂ ಅವರಿಗೆ ಇಲ್ಲದಂತಾಗುತ್ತದೆ. ನಾವು ಜೀರ್ಣವಾದ ವಸ್ತ್ರವನ್ನು ಬಿಟ್ಟು ಹೊಸ ವಸ್ತ್ರವನ್ನು ಧರಿಸುವಂತೆ, ಅಥವಾ ಪರದೇಶದ ಮೌಲ್ಯವಾದ ವಸ್ತ್ರಗಳನ್ನು ಸಹ ದೇಶಭಕ್ತರು ಹೋಳಿಮಾಡುವಂತೆ, ಅವರು ಈ ದೇಹವನ್ನು ದಹನಮಾಡಿಕೊಂಡು ಪತಿಲೋಕವನ್ನು ಸೇರುವರು (ಭ. ಗೀತಾ ೨-೨೨) ಇದು ಕೇವಲ ಈ ಆಧ್ಯಾತ್ಮಿಕ ಅಧಿಕಾರವು ಪ್ರಾಪ್ತವಾದವರ ಇಚ್ಛೆಯ ಧರ್ಮವಿದ್ದು, ಸಾಮಾನ್ಯ ಧರ್ಮವಾಗಲಾರದು ಆದರೆ ಈ ಆಚಾರವು, ಅಜ್ಞರೂ, ದುಷ್ಟರೂ ಆದ ವ್ಯಾವಹಾರಿಕರ ಕೈಯಲ್ಲಿ ಬಿದ್ದು ಸ್ವಾರ್ಥ ಮತ್ತು ದಂಭಾಚಾರಗಳನ್ನು ಸಾಧಿಸುವ ಮತ್ತು ನಿರಪರಾಧಿಗಳಾದ ಅಬಲೆಯರ ಸಂಹಾರ ಮಾಡುವ

ಕುತಂತ್ರವಾಗಿ ಬಿಟ್ಟಿತು. ಹೀಗೆಯೇ, ಧರ್ಮಸಾಧನೆಯ ಉಪಾಯವೆಂದು ಶಾಸ್ತ್ರಗಳಲ್ಲಿ ಹೇಳಿದ ಹಲವು ನಿಯಮಗಳು ದ್ವೇಷ ಮತ್ತು ಸ್ವಾರ್ಥವನ್ನು ಸಾಧಿಸುವ ಉಪಾಯಗಳಾದವು ಧರ್ಮದಲ್ಲಿ ಹೇಳಿದ ಅಸ್ಪೃಶ್ಯತೆಯ ಈಗಿನ ಆಚರಣವು ಇದೇ ತರಹದ್ದಿರುತ್ತದೆ. ಭೂತದಯೆಯೇ ಧರ್ಮದ ಆಧಾರಸ್ತಂಭವಿದ್ದು, ಭೂತದಯೆಯಿಲ್ಲದ ಆಚಾರವು ಧರ್ಮವಾಗಲಾರದು. ಅಸ್ಪೃಶ್ಯತೆಯ ನಿಯಮಗಳು ಕೇವಲ ಸಾಮಾಜಿಕ ಶುದ್ಧತೆಯನ್ನು ಕಾಯ್ದುಕೊಳ್ಳಬೇಕೆಂದು ಆಚಾರ ಧರ್ಮದಲ್ಲಿ ಹೇಳಲಾಗಿದೆ. ಧರ್ಮದ ಮೂಲವಾದ ಪರಹಿತ ಮತ್ತು ಭೂತದಯೆ ಇವುಗಳ ವಿರುದ್ಧವಾದ ಆಚರಣೆಯಿಂದ, ಬೇರುಸಹಿತ ಕಿತ್ತೊಗೆದ ವೃಕ್ಷದಂತೆ ಧರ್ಮವೃಕ್ಷವು ಒಣಗಿ ನಷ್ಟವಾಗುವದು.

ಮುಸಲ್ಮಾನರು ಈ ಪ್ರಕಾರ ಹಿಂದುಸ್ಥಾನದಲ್ಲಿಯೇ ಉಳಿದು ಬಹುಕಾಲದಿಂದ ಹಿಂದುಗಳ ಸಮಾಜದಲ್ಲಿ ಬೆರೆತು ಒಂದಾಗಹತ್ತಿದ್ದರು. ಹಿಂದುಗಳ ಎಲ್ಲ ಗುಣದೋಷಗಳು ಅವರಲ್ಲಿ ಬರಹತ್ತಿದವು. ಆದ್ದರಿಂದಲೇ ಅವರು ಹಿಂದುಸ್ಥಾನದ ಬಹುಜನ ಸಮಾಜದಲ್ಲಿಯ ಧರ್ಮಜಾಗ್ರತಿಯಿಂದಲೂ, ಸಂಘಟನೆಯಿಂದಲೂ ತಮ್ಮ ರಾಜ್ಯವನ್ನು ಕಾಯ್ದುಕೊಳ್ಳಲಿಕ್ಕೆ ಸಮರ್ಥರಾಗಲಿಲ್ಲ. ಈ ಸಮಯದಲ್ಲಿ ಹಿಂದುಸ್ಥಾನಕ್ಕೆ ಮತ್ತೊಂದು ಬದಿಯಿಂದ ಸಂಕಟವು ಬಂದೊದಗಿತು. ಅದೆಲ್ಲಿಂದೆಂದರೆ, ಪಾಶ್ಚಾತ್ಯರಿಂದ. ಪಾಶ್ಚಾತ್ಯರಲ್ಲಿ ಭೌತಿಕ ಶಾಸ್ತ್ರಗಳ ಹೊಸ ಹೊಸ ಸಂಶೋಧನೆಗಳಾಗುತ್ತ ನಡೆದಂತೆ, ಅವರಲ್ಲಿ ಸಾಮಾಜಿಕ ಮತ್ತು ರಾಜಕೀಯ ಸಂಘಟನೆಗಳು ಉಂಟಾಗಿ ಎಲ್ಲ ಪಾಶ್ಚಾತ್ಯ ರಾಷ್ಟ್ರಗಳು ಎಚ್ಚತ್ತು ಚಟುವಟಿಕೆಯನ್ನು ಆರಂಭಿಸಿದವು. ಅವೂ ಮುಸಲ್ಮಾನರಂತೆ ಹಿಂದುಸ್ಥಾನದ ಸಂಪತ್ತಿಯ ಬಗ್ಗೆ ದಂತಕಥೆಗಳನ್ನು ಕೇಳಿ ಹಿಂದುಸ್ಥಾನವನ್ನು ಕಾಣಬೇಕೆಂಬ ಲವಲವಿಕೆಯಿಂದ ಪ್ರೋತ್ಸಾಹಿತವಾದವು. ತಾವೂ ಹಿಂದು-ಸ್ಥಾನಕ್ಕೆ ಬಂದು ಇಲ್ಲಿಯ ಜನರ ಸಂಗಡ ವ್ಯಾಪಾರಸಂಬಂಧವನ್ನು ಬೆಳಸಿ ಧನಿಕರಾಗಬೇಕೆಂದು ಬಯಸಿದವು. ಹಲವರು ಈ ದೃಷ್ಟಿಯಿಂದ ಪ್ರಯತ್ನ ನಡೆಸಿದಾಗ, ಕೋಲಂಬಸ್‌ನೆಂಬ ನಾವಿಕನಿಗೆ ಹೊಸದಾದ ಅಮೇರಿಕೆಯ-

ಖಂಡವು ಸಿಕ್ಕಿತು. ಅವನು ತನಗೆ ಹಿಂದುಸ್ಥಾನವೇ ಸಿಕ್ಕಿತೆಂಬ ಭ್ರಮೆ ದಿಂದ "ಇಂಡೀಜ" ಅಂದರೆ ಹಿಂದುಸ್ಥಾನವೆಂದೇ ಅದಕ್ಕೆ ಕರೆದನು. ಇದೊಂದು ಬೇರೆ ಹೊಸಖಂಡವಿರುವದೆಂದು ತಿಳಿದ ಮೇಲೆ ಆ ಸ್ಥಳಕ್ಕೆ ಪಶ್ಚಿಮದಲ್ಲಿರುವ ಹಿಂದುಸ್ಥಾನವೆಂದು ಕರೆಯಹತ್ತಿದರು ಈ ಪ್ರದೇಶವು ಈಗಲೂ ಅಮೇರಿಕಾ ಖಂಡದಲ್ಲಿ "ವೆಸ್ಟ ಇಂಡೀಜ" ಎಂಬ ಹೆಸರಿನಿಂದ ಪ್ರಸಿದ್ಧವಿದೆ ಆ ಕಾಲದಲ್ಲಿ ಯುರೋಪದ ರಾಷ್ಟ್ರಗಳಲ್ಲಿ ಪ್ರಸಿದ್ಧವಾಗು ತ್ತಿದ್ದ ವಾಙ್ಮಯಗಳಲ್ಲಿ "ವೆಸ್ಟವರ್ಡ ಹೋ" "ಗಲಿವ್ಹರ್ಸ ಟ್ರಾವಲ್ಸ" ಮುಂತಾದ ಕಾದಂಬರಿಗಳನ್ನು ಓದಿದವರಿಗೆ, ಆ ರಾಷ್ಟ್ರಗಳಲ್ಲಿ ಪರದೇಶ ಗಳಿಗೆ ಹೋಗಿ ಸಂಪತ್ತಿಯನ್ನು ಸಂಪಾದಿಸುವ ಹುಚ್ಚು ಸಾಮಾನ್ಯ ಜನತೆಯಲ್ಲಿ ಎಷ್ಟರಮಟ್ಟಿಗೆ ಹಬ್ಬಿತ್ತೆಂಬದು ತಿಳಿದುಬರುತ್ತದೆ. ಹಿಂದು-ಸ್ಥಾನದ ಸಂಪತ್ತಿಗೆ ಮರುಳಾದ ಸಾಹಸಿಗರು ತಮ್ಮ ಪ್ರಯತ್ನವನ್ನು ಹಾಗೆಯೇ ಮುಂದೆ ಸಾಗಿಸಿದರು ವಾಸ್ಕೋಡಾಗಾಮಾ, ಸರ್ ಥೋಮಸ ರೋ ಮುಂತಾದ ನಾವಿಕರೂ, ರಾಯಭಾರಿಗಳೂ ಹಿಂದುಸ್ಥಾನದ ಮಾರ್ಗ ವನ್ನು ಶೋಧಿಸಿ ಇಲ್ಲಿಗೆ ಬಂದು ಈ ದೇಶದಲ್ಲಿ ವ್ಯಾಪಾರೀ ಸಂಬಂಧವನ್ನು ಬೆಳೆಸಿದರು. ಯುರೋಪ ಖಂಡದ ಅನೇಕ ರಾಷ್ಟ್ರಗಳು ಹಿಂದುಸ್ಥಾನದಲ್ಲಿ ರಾಜ್ಯಕಟ್ಟುವ ಬಗ್ಗೆ ಹೂಡಿದ ಕುತಂತ್ರಗಳ ಇತಿಹಾಸವು ಪ್ರಸಿದ್ಧವೇ ಇದೆ. ಆಂಗ್ಲರಿಗೇ ಹಿಂದುಸ್ಥಾನದಲ್ಲಿಯ ಸಾಮ್ರಾಜ್ಯದ ಪ್ರಾಪ್ತಿಯಾಗಲಿಕ್ಕೆ ಮುಖ್ಯ ಕಾರಣವೆಂದರೆ, ಅವರಲ್ಲಿಯ ರಾಜಕಾರಣ ನೈಪುಣ್ಯ, ಶಿಸ್ತು, ರಾಷ್ಟ್ರಪ್ರೇಮ ಮತ್ತು ಸುಧಾರಿಸಿದ ಶಸ್ತ್ರಾಸ್ತ್ರಗಳ ಸಲಕರಣೆ. ಈ ಗುಣ ಮತ್ತು ಸಾಧನೆಗಳು ಆಂಗ್ಲರಲ್ಲಿ ಅವರ ಉಳಿದ ಬಾಂಧವರಿಗಿಂತ ಹೆಚ್ಚು ಪ್ರಮಾಣದಿಂದ ಇದ್ದಕಾರಣ, ಅವರಿಗೇ ಅಂತ್ಯದಲ್ಲಿ ಜಯಸಿಕ್ಕಿತೆಂದು ಧಾರಾಳವಾಗಿ ಹೇಳಬಹುದು.

ಯುರೋಪಖಂಡದಲ್ಲಿ ಶಾಸ್ತ್ರೀಯ ಸಂಶೋಧನೆಯ ಪ್ರವೃತ್ತಿಯು ಹೇಗುಂಟಾಯಿತೆಂಬದನ್ನು ನಾವು ಹಿಂದೆ ಹೇಳಿದ್ದೇವೆ. ಹಾಗೆಯೇ ಆ ಖಂಡದ ಮಧ್ಯಯುಗೀನ ಇತಿಹಾಸದಲ್ಲಿ ಪೂರ್ವದಿಂದ ಪಶ್ಚಿಮಕ್ಕೆ ಹರಿದು ಹೋದ ವಿದ್ಯೆಯ ಪ್ರವಾಹವು ಜನರನ್ನು ಅವರ ಹಳೇ ನಿದ್ರೆಯಿಂದ

ಎಚ್ಚರಗೊಳಿಸಿತು. ಈ ಹೊಸ ವಿದ್ಯೆಯಿಂದುಂಟಾದ ಚಳವಳಿಗೆ "ರನೇಝುನ್ಸ" **Renaissance** ಎಂದು ಆ ಖಂಡದ ಇತಿಹಾಸದಲ್ಲಿ ಕರೆದಿದ್ದಾರೆ. ಇದರಿಂದ ಜನತೆಯಲ್ಲಿ ಪರಿಸ್ಥಿತಿಯಿಂದುಂಟಾದ ಶಾಸ್ತ್ರಪ್ರವೃತ್ತಿಗೆ ಹೆಚ್ಚು ಸಹಾಯವಾಯಿತು. ಗಣಿತ, ಭೂಗೋಲ, ಖಗೋಲ, ರಸಾಯನ ಶಾಸ್ತ್ರ, ವೈದ್ಯಶಾಸ್ತ್ರ ಮುಂತಾದ ಅನೇಕ ಶಾಸ್ತ್ರಗಳು ಅಭಿವೃದ್ಧಿಯನ್ನು ಹೊಂದಿದವು. ಆದರೆ ಹಿಂದುಸ್ಥಾನವು ಮಾತ್ರ ತನ್ನ ಹಿಂದಿನ ವಿದ್ಯೆಗಳನ್ನು ಕಳೆದುಕೊಂಡು ಪ್ರಗತಿಯಿಲ್ಲದ ಕೂಪಮಂಡೂಕ ವೃತ್ತಿಯನ್ನು ಸ್ವೀಕರಿಸಿತ್ತು. ಜ್ಞಾನ ಸಂಪಾದನೆಯ ಎರಡು ಮಾರ್ಗಗಳಿವೆ ಒಂದು "**Inductive method**" ಕಾರ್ಯದಿಂದ ಕಾರಣವನ್ನು ಹುಡುಕುವದು. ಮತ್ತೊಂದು "**Deductive method**" ಕಾರಣವನ್ನು ಮೊದಲು ಕಂಡುಹಿಡಿದು ಕಾರ್ಯಕ್ಕೆ ಬರುವದು ಆರ್ಯರ ವೇದಾಂತ ಪದ್ಧತಿಯು ಮುಖ್ಯತಃ ಎರಡನೆಯ ಪ್ರಕಾರದ್ದಿರುತ್ತದೆ. ಆರ್ಯರು ಈ ಜಗತ್ತಿನ ಮೂಲ ಕಾರಣವಾದ ಬ್ರಹ್ಮತತ್ವವನ್ನು ಪ್ರತ್ಯಕ್ಷ ಅನುಭವದಿಂದ ಕಂಡುಹಿಡಿದು, ಜಗತ್ತಿನ ಇತರ ಎಲ್ಲ ವ್ಯವಹಾರವು, ಈ ಆದಿ ಕಾರಣವಾದ ಬ್ರಹ್ಮತತ್ವದಿಂದಲೇ ಸಂಭವಿಸುವದೆಂದು ಸಿದ್ಧಮಾಡಿರುವರು ಈ ತರ್ಕದ ಉಪಯೋಗವು ಪ್ರತಿಯೊಬ್ಬ ವ್ಯಕ್ತಿಯು ತಾನು ಪ್ರತ್ಯಕ್ಷ ಈ ಸತ್ಯವನ್ನು ಅನುಭವಿಸಬೇಕೆಂದಿರುತ್ತದೆ. ಆದರೆ, ಇದು ಕೇವಲ ಶಾಬ್ದಿಕ ತರ್ಕದಲ್ಲಿಯೇ ಉಳಿದು ಅನುಭವಕ್ಕಿಳಿಯದಿದ್ದರೆ, ಈ ತತ್ವದ ನಿಜವಾದ ಜ್ಞಾನವಾಗಲಾರದು. ಈ ಜ್ಞಾನವು ಪ್ರತಿಯೊಬ್ಬ ವ್ಯಕ್ತಿಗೆ ಆಗಬೇಕಾದರೆ, ಅವನು ತನ್ನ ಕ್ರಿಯಾ, ಭಾವನಾ ಮತ್ತು ಬುದ್ಧಿಶಕ್ತಿಗಳನ್ನು ಬೆಳೆಸಿ ಆದ್ಯತತ್ವದ ಅನುಭವವನ್ನು ಸ್ವತಃ ಪಡೆಯಬೇಕಾಗುತ್ತದೆ. ಈ ಉದ್ದೇಶದಿಂದಲೇ ಧರ್ಮದಲ್ಲಿ, ಕರ್ಮಯೋಗ, ಭಕ್ತಿಯೋಗ ಮತ್ತು ಜ್ಞಾನಯೋಗಗಳೆಂಬ ಮಾರ್ಗಗಳನ್ನು ಜ್ಞಾನಿಗಳು ತೋರಿಸಿದ್ದಾರೆ. ಈ ಮಾರ್ಗಗಳು ತತ್ವತಃ ಒಂದೇ ಇದ್ದು ಬಾಹ್ಯಸ್ವರೂಪವು ಮಾತ್ರ ಭಿನ್ನವಾಗಿ ಕಾಣುವದಿಷ್ಟೇ ಸಾಂಖ್ಯ ಮತ್ತು ಯೋಗ (ಜ್ಞಾನ ಮತ್ತು ಕರ್ಮ) ಗಳು ಬೇರೆ ಬೇರೆಯಾಗಿರುತ್ತವೆಂದು ಅಜ್ಞರು ತಿಳಿಯುತ್ತಾರೆ. ಆದರೆ ಪಂಡಿತರು ಹೀಗೆ ಎಂದೂ ತಿಳಿಯುವದಿಲ್ಲವೆಂದು ಭಗವಂತನು ಗೀತೆಯಲ್ಲಿ

ನುಡಿದಿದ್ದಾನೆ. ಆದರೆ ಈ ಕಾಲದ ಪಂಡಿತ ಮಾನ್ಯರು ಈ ಮಾರ್ಗಗಳ ಬಗ್ಗೆ ಮತ್ತು ಸಾಧುಸಂತರು ಹಾಕಿಕೊಟ್ಟ ಬೇರೆ ಬೇರೆ ಮಾರ್ಗಗಳ ಬಗ್ಗೆ ಎಬ್ಬಿಸಿದ ಕಲಹವನ್ನು ನೋಡಿದರೆ, ನಿಜವಾದ ಧರ್ಮಾಚರಣೆಯು ಅವರ ಗುರಿಯಾಗಿರದೆ, ಕ್ಷುಲ್ಲಕ ಕಾರಣಗಳಿಂದ ಕಲಹವನ್ನೆಬ್ಬಿಸಿ ದ್ವೇಷಾಸೂಯೆಗಳನ್ನು ಸಮಾಜದಲ್ಲಿ ಹಬ್ಬಿಸುವದೇ ಇತ್ತೆಂದು ಸ್ಪಷ್ಟವಾಗಿ ಕಂಡುಹಿಡಿಯುಬಹುದು ಒಬ್ಬ ಆಂಗ್ಲ ಕವಿಯು ( **Wealth accumulates and men decay** ) ಸಂಪತ್ತಿಯು ಸಂಚಯದಿಂದ ಮನುಷ್ಯತ್ವವು ಕೊಳೆಯುವದೆಂದು ಹೇಳಿದ್ದಾನೆ. ಈ ಮಾತು ಆ ಕಾಲದ ಹಿಂದುಗಳಿಗೆ ಅನ್ವಯಿಸುತ್ತದೆ. ಅವರ ಪೂರ್ವಜರ ನಿಷ್ಕಾಮ ಕರ್ಮಯೋಗದಿಂದ ಸಂಚಯಿಸಲ್ಪಟ್ಟ ಸಂಪತ್ತಿಯನ್ನು ಉಪಭೋಗಿಸುವದೇ ಯಾರ ಉದ್ದೇಶವಾಗಿತ್ತೋ, ಅಂಥ ಜನತೆಗೆ ಧರ್ಮದ ಅವಶ್ಯಕತೆಯಿರಲಿಲ್ಲ. ಧರ್ಮದ ಹೆಸರಿನಿಂದ ಹೂಲಿಯನ್ನೆಬ್ಬಿಸಿ ಸ್ವಾರ್ಥಸಾಧಿಸುವದೇ ಅವರ ಗುರಿಯಾಗಿತ್ತು. ಆದ್ದರಿಂದ ಮೇಲಿನ ಕವಿಯ ವಚನದಂತೆ ಅವರಲ್ಲಿಯ ಮನುಷ್ಯತ್ವವು ನಷ್ಟವಾಗುತ್ತ ನಡೆದಿತ್ತು. ವಿವೇಕಶೂನ್ಯವಾದ ಜನತೆಗೆ, ಸೂಕ್ಷ್ಮದೃಷ್ಟಿಯ ಸಾಕ್ಷಾತ್ಕಾರವನ್ನು ಹೊಂದಿದ ಸಾಧುಸಂತರ ಮಾರ್ಗದರ್ಶನವು ಬೇಡಾಗಿತ್ತು. ಆದ್ದರಿಂದ ಅದು ಕೀಳಮಾರ್ಗಕ್ಕೆ ಹತ್ತಿ ಅವನತಿಯನ್ನು ಹೊಂದಿತ್ತೆಂಬದು ಸ್ಪಷ್ಟವಿದೆ ಶ್ರೀ ಅರವಿಂದರು ತಮ್ಮ "ಗತಕಾಲದ ಸಮಸ್ಯೆ" ಯೆಂಬ ಲೇಖನದಲ್ಲಿ ಅನ್ನುವದೇನಂದರೆ "ಹದಿನೆಂಟನೇ ಶತಮಾನದಲ್ಲಿ ( ರಾಜಸ ಮತ್ತು ತಾಮಸ) ಪ್ರವಾಹದ ಪೂರ್ಣ ವೇಗವು ಕಾಣಿಸಿಕೊಂಡಿತು. ಸಮಾಜವೂ, ಧರ್ಮವೂ ಆ ಕಾಲಕ್ಕೆ ಕೆಲವು ವಿಧಾನದಾತಾರರ ಚಿಕ್ಕ ಸೀಮೆಯಲ್ಲಿ ಆಬದ್ಧವಾಗಿದ್ದವು. ಹೊರಗಿನ ಆಚಾರ ಹಾಗೂ ಕ್ರಿಯೆಗಳ ಆಡಂಬರವು ಧರ್ಮದ ಹೆಸರಿನಿಂದ ಮೆರೆಯುತ್ತಿತ್ತು. ಆರ್ಯ ಜ್ಞಾನವು ಪ್ರಾಯಶಃ ಲುಪ್ತವಾಗಿ ಹೋಗಿತ್ತು ಆರ್ಯಶೀಲವು ಸಾಧಾರಣವಾಗಿ ನಷ್ಟವಾಗಿ ಬಿಟ್ಟಿತ್ತು. ಸನಾತನ ಧರ್ಮವು ಸಮಾಜವನ್ನು ತ್ಯಜಿಸಿ ಸನ್ಯಾಸಿಯ ಅರಣ್ಯಕುಟಿಯಲ್ಲಿಯೂ, ಭಕ್ತರ ಹೃದಯದಲ್ಲಿಯೂ ಹೋಗಿ ಅಡಗಿಕೊಂಡಿತ್ತು. ಭಾರತವು ಆ ಕಾಲಕ್ಕೆ ಘೋರ ತಮಸ್ಸಿನ ಅಂಧಕಾರದಿಂದ ಆಚ್ಛನ್ನವಾಗಿತ್ತು ....... ಆ ಕಾಲಕ್ಕೆ ಬ್ರಿಟಿಶರೂ ಅಸುರರಾಗಿದ್ದರು.

ಭಾರತವಾಸಿಗಳೂ ಅಸುರರಾಗಿದ್ದರು. ಆ ಕಾಲಕ್ಕೆ ದೇವಾಸುರರಲ್ಲಿ ಯುದ್ಧವಾಗಿದ್ದಿಲ್ಲ ಅಸುರಾಸುರರಲ್ಲಿ ಯುದ್ಧವಾಗಿತ್ತು........... ಭಾರತ ವಾಸಿಗಳು ಬೇರೆ ಎಲ್ಲ ಗುಣಗಳಲ್ಲಿ ಬ್ರಿಟಿಶರಿಗೆ ಸಮಾನರಿದ್ದರೂ, ರಾಷ್ಟ್ರೀಯ ಭಾವದಿಂದ ರಹಿತರಾಗಿದ್ದರು. ಬ್ರಿಟಿಶರಲ್ಲಿ ಆ ಗುಣವು ಸಂಪೂರ್ಣ ವಿಕಾಸಗೊಂಡಿತ್ತು" ( ಧರ್ಮ ಹಾಗೂ ರಾಷ್ಟ್ರೀಯತ್ವ ಎಂಬ ಶ್ರೀ. ಶಿಂಪಿ ಲಿಂಗಣ್ಣನವರ ಅನುವಾದದ ಮೇಲಿಂದ ).

ಧರ್ಮದ ಸೂಕ್ಷ್ಮ ಜ್ಞಾನವು ಸ್ವಾರ್ಥ ಮತ್ತು ರಾಗದ್ವೇಷಗಳಿಂದ ತುಂಬಿದ ಜನತೆಗೆ, ಆಗುವದು ಶಕ್ಯವಿಲ್ಲ. ಹಾಗೂ ಅವರು ಸೂಕ್ಷ್ಮ ದೃಷ್ಟಿಯುಳ್ಳ ಮತ್ತು ಸಾಕ್ಷಾತ್ಕಾರವನ್ನು ಪಡೆದ ತತ್ವಜ್ಞಾನಿಗಳ ಮಾರ್ಗ ದರ್ಶನಕ್ಕೂ ಒಳಗಾಗುವದಿಲ್ಲ ಹೀಗಾಗಿ ಈ ಜನತೆಯು ಅಧೋಗತಿಗೆ ಹೋಗುವದು. ಆದರೆ ನಾವು ಮೇಲೆ ಹೇಳಿದ ಜ್ಞಾನದ ಎರಡನೆಯ ಪ್ರಕಾರವಾದ—ಕಾರ್ಯದಿಂದ ಕಾರಣವನ್ನು ಹುಡುಕುವ—ಭೌತಿಕ ಶಾಸ್ತ್ರದ ಮಾರ್ಗವು ಸ್ಥೂಲದೃಷ್ಟಿಯುಳ್ಳ ವ್ಯವಹಾರ ಚತುರರಿಗೂ ಸಾಧ್ಯ ವಾಗಬಹುದು ಈ ಸ್ಥೂಲಭೌತಿಕ ಪದಾರ್ಥಗಳ ಹಿಂದೆ ಯಾವ ತತ್ವ ಗಳಿರಬಹುದು; ಇವುಗಳ ಕ್ರಿಯೆಯು ಯಾವ ನಿಯಮಗಳಿಂದ ಬದ್ಧವಾಗಿರ ಬಹುದು ಎಂಬುದನ್ನು ನಿರೀಕ್ಷಣ ಮತ್ತು ಪ್ರಯೋಗಗಳಿಂದ ಪ್ರಯೋಗ-ಶಾಲೆಗಳಲ್ಲಿ ಹುಡುಕಿ ತೆಗೆಯಬಹುದು. ಈ ಶಾಸ್ತ್ರಗಳ ಪರಿಣಾಮವೂ ಸ್ಥೂಲದೃಷ್ಟಿಗೆ ಕಾಣುವಂತಹದಿದ್ದು, ಅದರ ವ್ಯಾವಹಾರಿಕ ಉಪಯೋ-ಗವು ಕೂಡಲೇ ಕಂಡುಬರುವಂತಿದೆ. ಆದ್ದರಿಂದ, ಸೂಕ್ಷ್ಮದೃಷ್ಟಿಯಿಲ್ಲದ ಸರ್ವಸಾಮಾನ್ಯ ಜನತೆಗೆ ಆ ಶಾಸ್ತ್ರವು ಹೆಚ್ಚು ಆಕರ್ಷಕವಾಗುತ್ತದೆ. ಮತ್ತು ಜನತೆಯಲ್ಲಿ ಸ್ವಾರ್ಥಸಾಧನೆಯ ಉದ್ದೇಶದಿಂದ ಕೆಲಮಟ್ಟಿಗೆ ಸಂಘಟನೆಯೂ ಆಗುತ್ತದೆ. ಹೀಗಾಗಿ ಪಾಶ್ಚಾತ್ಯರಲ್ಲಿ ಹಿಂದುಸ್ಥಾನದ ಜನತೆಯಲ್ಲಿ ಶಕ್ಯವಾಗದ ಸಂಘಶಕ್ತಿಯು ಉಂಟಾಯಿತು. ಈ ಸ್ವಾರ್ಥ ಸಾಧನೆಯ ತತ್ವದ ಮೇಲೆ ಮತ್ತು ವ್ಯಕ್ತಿಸ್ವಾತಂತ್ರ್ಯದ ಮೇಲೆ ರಚಿಸಲ್ಪಟ್ಟ ಸಂಘಟನೆಗೆ ರಾಷ್ಟ್ರೀಯತ್ವವೆಂದೂ, ಇದಕ್ಕೆ ವಿರುದ್ಧವಾಗಿ ಸ್ವಾರ್ಥತ್ಯಾಗ ಮತ್ತು ಸೇವಾಭಾವನೆಯಿಂದ ಪೂರಿತವಾದದ್ದಕ್ಕೆ ದೇಶಭಕ್ತಿಯೆಂದೂ;

ಇವುಗಳಲ್ಲಿ ರಾಷ್ಟ್ರೀಯತ್ವವು ಬ್ರಿಟಿಶರಲ್ಲಿ ಇತ್ತೆಂದೂ, ತಮ್ಮ, ಮೇಲೆ ಉಲ್ಲೇಖಿಸಿದ ಲೇಖದಲ್ಲಿಯೇ ಶ್ರೀ ಅರವಿಂದರು ಬರೆದಿದ್ದಾರೆ.

ಈ ಭೌತಿಕ ಶಾಸ್ತ್ರಗಳ ಅರುಣೋದಯದಿಂದ ಎಚ್ಚತ್ತ ಪಾಶ್ಚಾತ್ಯ ಸಮಾಜ ಶಾಸ್ತ್ರಜ್ಞರು, ಈ ಶಾಸ್ತ್ರಗಳ ನಿರ್ಣಯವನ್ನು ಅಚಿಂತ್ಯ ಮತ್ತು ಅಪರಿಮಿತ ಶಕ್ತಿಯುಳ್ಳ ಚೇತನ ಜೀವಗಳಿಗೂ ಹಚ್ಚಿ ಮನುಷ್ಯ ಸಮಾಜವನ್ನು ಕಟ್ಟತೊಡಗಿದರು ಭೌತಿಕ ಶಾಸ್ತ್ರಗಳ ಬೆಳವಣಿಗೆಯಿಂದಲೇ ಮಾನವ ಸಮಾಜದ ಹಿತವಿರುವದೆಂದೂ, ಈ ಶಾಸ್ತ್ರಗಳ ಸಹಾಯದಿಂದ ಜಗತ್ತಿನ ಸಂಪತ್ತಿಯು ಬೆಳೆದು ಅದರಿಂದಲೇ ಮನುಷ್ಯನ ಅಂತಿಮ ಹಿತವು ಸಾಧಿಸುವದೆಂದೂ ಅವರು ಅನ್ನತೊಡಗಿದರು. ಮನುಷ್ಯ ಸಮಾಜದಲ್ಲಿಯ ಎಲ್ಲ ದುಃಖಗಳ ಉಗಮವು ಸಂಪತ್ತಿಯ ವಿಷಮವಾದ ವಿಭಜನೆಯಿದ್ದು ಅರ್ಥದ ಉತ್ಪತ್ತಿ, ವಿಭಜನೆ ಮತ್ತು ಉಪಭೋಗಗಳಲ್ಲಿ ಸಮತೆ ಮತ್ತು ಸ್ವಾತಂತ್ರ್ಯವನ್ನುಂಟು ಮಾಡುವದರಿಂದಲೇ ಸಾಮಾಜಿಕ ಶಾಂತಿಯು ನೆಲೆಗೊಳ್ಳುವದೆಂದು ಅವರ ಪ್ರತಿಪಾದನೆ. ಈ ಮತದ ಸಾಧನೆಗಾಗಿ ಸಮತೆ, ಸ್ವಾತಂತ್ರ್ಯ ಮತ್ತು ಬಂಧುತೆಗಳೆಂಬ ಕಾಲ್ಪನಿಕ ಅಳತೆಗಳನ್ನು ಕಲ್ಪಿಸಿ ಸಮಾಜದ ಎಲ್ಲ ವ್ಯವಹಾರವನ್ನು ಈ ಅಳೆಗೋಲಿನಿಂದ ಅವರು ಅಳೆಯಹತ್ತಿದರು. ಈ ಪಾಶ್ಚಾತ್ಯರ ಅಳೆಗೋಲಿನ ತಾತ್ವಿಕ ವಿಚಾರವನ್ನು ಶ್ರೀ ಅರವಿಂದರು ತಮ್ಮ "ಭ್ರಾತೃತ್ವ" (**Frateornity**) ಎಂಬ ಲೇಖದಲ್ಲಿ ಉತ್ತಮ ರೀತಿಯಿಂದ ಮಾಡಿದ್ದಾರೆ. ಇಲ್ಲಿ ಆ ತಾತ್ವಿಕ ವಿಚಾರಕ್ಕೆ ಅವಕಾಶವಿಲ್ಲದ್ದರಿಂದ ವಾಚಕರಿಗೆ ಆ ಲೇಖವನ್ನೇ ಓದಬಹುದಾಗಿ ಸೂಚಿಸುತ್ತೇವೆ. ಈ ತತ್ವಗಳು ಒಂದಕ್ಕೊಂದು ವಿರುದ್ಧವಾಗಿದ್ದು, ಅದರಿಂದಲೇ ಸಮಾಜದಲ್ಲಿ ಅಲ್ಲೋಲ-ಕಲ್ಲೋಲವಾಗ ತೊಡಗಿತು. ಈ ತತ್ವಗಳ ಮೇಲೆ ಕಟ್ಟಲ್ಪಟ್ಟ ಹಲವು ಸಾಮಾಜಿಕ ರಚನೆಗಳು ಕ್ಷಣಕ್ಷಣಕ್ಕೆ ಉರುಳಿ ಬೀಳುತ್ತಿದ್ದು, ಒಂದು ಪ್ರಕಾರದ ಸಮಾಜ ರಚನೆಗೆ ಅಂಟಿಕೊಂಡ ರಾಷ್ಟ್ರವು, ಮತ್ತೊಂದಕ್ಕೆ ಅಂಟಿಕೊಂಡ ರಾಷ್ಟ್ರವನ್ನು ಕೆಂಗಣ್ಣಿನಿಂದ ನೋಡಿ ಗೂಳಿಗಳಂತೆ ಕಲಹವನ್ನು ಎಬ್ಬಿಸಹತ್ತಿದವು. ಈ "ಸುಧಾರಿಸಿದ" ರಾಷ್ಟ್ರಗಳ ಕಳೆದ ಇಪ್ಪತ್ತೈದು ವರ್ಷಗಳ ಇತಿಹಾಸದಲ್ಲಿ ಎರಡು ಮಹಾ

ಯುದ್ಧಗಳೂ, ಚಿಕ್ಕಪುಟ್ಟ ಸಾಮಾಜಿಕ ಮತ್ತು ಆರ್ಥಿಕ ಕಲಹಗಳೂ ಉಂಟಾದವು. ಭಾಂಡವಾಲದ ಸಂಗ್ರಹದಿಂದ ಉತ್ಪತ್ತಿಯನ್ನು ಅಪರಿಮಿತ ಬೆಳೆಸಬಹುದೆಂಬ ಅರ್ಥಶಾಸ್ತ್ರಜ್ಞರ ಹೇಳಿಕೆಯು ಭಾಂಡವಾಲದಾರರ ಸ್ವಾರ್ಥದಿಂದ ಅರ್ಥಶಾಸ್ತ್ರದ ಪುಸ್ತಕದಲ್ಲಿಯೇ ಉಳಿದು ಸಮಾಜದಲ್ಲಿ ಅನರ್ಥವು ಉಂಟಾಗಿ, ಸಾಮಾನ್ಯ ಜನತೆಯು ಗೋಳು ಹೆಚ್ಚುತ್ತ ನಡೆಯಿತು. ಮತ್ತೊಂದು ಕಡೆಗೆ, ತಮ್ಮ ಮೇಲೆ ಹೇಳಿದ ಒಂದಕ್ಕೊಂದು ವಿರುದ್ಧವಾದ ಮೂರು ಸಾಮಾಜಿಕ ತತ್ವಗಳ ಅಳಿಗೋಲಿನಲ್ಲಿ ಬರೆದ, ಎಲ್ಲ ಸಮಾಜದ ವಿಭಾಗಗಳನ್ನು ಕಡಿದುಹಾಕಿ ಸಮತೆಯನ್ನುಂಟುಮಾಡುವ ಭ್ರಮದಿಂದ, ಸಾಮಾಜಿಕ ಶಾಂತಿ ಸಮಾಧಾನಗಳ ವಿಧ್ವಂಸವು ಆರಂಭವಾಯಿತು. ಈ ಮೂಲಕ ವ್ಯಕ್ತಿವ್ಯಕ್ತಿಗಳಲ್ಲಿ, ಸಾಮಾಜಿಕ ಬೇರೆ ಬೇರೆ ಅಂಗಗಳಲ್ಲಿ, ರಾಷ್ಟ್ರ-ರಾಷ್ಟ್ರಗಳಲ್ಲಿ ಸಂಶಯವು ಹಬ್ಬಿ, ರಾಷ್ಟ್ರದ್ವೇಷ, ಧರ್ಮದ್ವೇಷ, ಜಾತಿದ್ವೇಷಗಳೆಂಬ ಬೇಗೆಗಳು ಎದ್ದು ಕುಣಿಯ ಹತ್ತಿದವು. ಇವೆಲ್ಲಕ್ಕೂ ಕಾರಣವೇನಿರಬಹುದು ಎಂಬ ಬಗ್ಗೆ ಎಲ್ಲ ವಿಚಾರವಂತರು ಶಾಂತಚಿತ್ತದಿಂದ ವಿಚಾರಮಾಡುವ ಸ್ಥಿತಿಯು ಈಗ ಉಂಟಾಗಿರುವದು.

ಈ " ಸುಧಾರಿಸಿದ " ರಾಷ್ಟ್ರಗಳ ಏಳ್ಗೆಯ ಸುಪ್ರಭಾತದ ರಮಣೀಯವಾದ ಬೆಳಕಿನಲ್ಲಿಯೇ, ಈ ಆರ್ಯಾವರ್ತದಲ್ಲಿ, ಒಬ್ಬ ಮಹಾಪುರುಷನು ವಂಗ ದೇಶದ ಒಂದು ಹಳ್ಳಿಯಲ್ಲಿ ಜನ್ಮತಾಳಿದನು. ಈ ಕಾಲಕ್ಕೆ ಹಿಂದು-ಸ್ಥಾನದಲ್ಲಿ ಪಾಶ್ಚಾತ್ಯ ಸುಧಾರಣೆಗೆ ಮರುಳಾದ ಕೆಲವು ಸುಧಾರಕರು ಆರ್ಯ ತತ್ವಜ್ಞಾನದ ಮೂಲವನ್ನರಿಯದೆ ಹೊಸ ಹೊಸ ಧಾರ್ಮಿಕ ಪಂಥ-ಗಳನ್ನೂ, ಪಾಶ್ಚಾತ್ಯರ ಸಮಾಜ ರಚನೆಯ ಆಪಾತ ರಮಣೀಯವಾದ ತತ್ವಜ್ಞಾನವನ್ನೂ ಉಪದೇಶಿಸಹತ್ತಿದ್ದರು. ಬ್ರಾಹ್ಮೋ ಸಮಾಜ, ಆರ್ಯ ಸಮಾಜ, ಪ್ರಾರ್ಥನಾ ಸಮಾಜಗಳೆಂಬ ಪಂಥಗಳು ಪಾಶ್ಚಾತ್ಯರ ಅನುಕರಣದಿಂದ ಉಂಟಾಗಿದ್ದವು ಈ ಪಂಥಗಳು ಸನಾತನ ಧರ್ಮದ ಒಂದೊಂದೇ ಭಾಗಕ್ಕೆ ವಿಶೇಷ ಮಹತ್ವವನ್ನಿತ್ತು, ಇತರ ಆಚಾರ-ವಿಚಾರಗಳು ನಿಂದ್ಯವೆಂದೂ ಈಶ್ವರನ ಆರಾಧನೆಯ ಪದ್ಧತಿಯು ಎಲ್ಲರಿಗೂ ಒಂದೇ ಪ್ರಕಾರದ್ದಿರಬೇಕೆಂದೂ. ಒಂದೇ ಅಚ್ಚಿನ ಸಾಮೂಹಿಕ ಮತ್ತು

ಸಾಮಾಜಿಕ ನಿಯಮಗಳಿಂದ ಬದ್ಧರಾಗಿ ಸಮಾಜದ ಒಕ್ಕಟ್ಟನ್ನು ಬೆಳೆಸುವ ಪ್ರಯತ್ನ ಮಾಡಬೇಕೆಂದೂ ಇವರ ಉಪದೇಶವಾಗಿತ್ತು. ಪಾಶ್ಚಾತ್ಯ ಶಿಕ್ಷಣದ ಪರಿಣಾಮವಾಗಿ ನಾಸ್ತಿಕ ವೃತ್ತಿಯು ಜನರಲ್ಲಿ ಹೆಚ್ಚುತ್ತ ನಡೆದಿತ್ತು. ಪಾಶ್ಚಾತ್ಯರ ಹೊಸ ಹೊಸ ಸಮಾಜ ರಚನೆಗಳ ನೂತನತೆಯು ಜನರನ್ನು ಆಕರ್ಷಿಸುತ್ತಿತ್ತು ಇಡೀ ಜಗತ್ತಿನಲ್ಲೆಲ್ಲ ಅನೇಕ ಧಾರ್ಮಿಕ ಪಂಥ ಮತ್ತು ಪ್ರಾರ್ಥನಾ ಪದ್ಧತಿಗಳು ಮನುಷ್ಯನ ಮಹತ್ವಾಕಾಂಕ್ಷೆ ಮತ್ತು ದುರಾಸೆಗಳ ಬೇಗೆಯನ್ನು ಮುಚ್ಚುವ ಮುಚ್ಚಳದ ಸ್ವರೂಪವನ್ನು ಧರಿಸಿದ್ದವು. ಈ ಧರ್ಮಗಳ ತೆಳುವಾದ ಮುಚ್ಚಳವು ಹಾರಿಹೋಗಿ, ಒಳಗಿನ ಕಾಮಕ್ರೋಧಾದಿ ವಿಕಾರಗಳ ಕಾವು ಕಿಚ್ಚಾಗಿ ಎದ್ದು ಜನರನ್ನು ಎಂದು ಉರಿದುಬಿಟ್ಟೀತೆಂಬ ನಿಯಮವಿರಲಿಲ್ಲ ಇಂಥ ಸಮಯದಲ್ಲಿ ಶ್ರೀ ರಾಮ-ಕೃಷ್ಣ ಪರಮಹಂಸರು ಅವತರಿಸಿ ಭಗವಾನ್ ಶ್ರೀಕೃಷ್ಣನ ಗೀತೆಯಲ್ಲಿಯ ಆಶ್ವಾಸನವು ಸತ್ಯವೆಂದು ಜಗತ್ತಿನ ನಿದರ್ಶನಕ್ಕೆ ತಂದುಕೊಟ್ಟರು. ಈ ಮಹಾಪುರುಷನು ಆಧುನಿಕರ ದೃಷ್ಟಿಯಿಂದ ವಿದ್ಯಾವಿಭೂಷಿತನೂ, ಸುಸಂಸ್ಕೃತನೂ ಇರಲಿಲ್ಲ. ಶಾಬ್ದಿಕ ಜ್ಞಾನ ಮತ್ತು ಬಾಹ್ಯ ಆಚಾರಗಳ ಅವಡಂಬರವು ಇವನಲ್ಲಿ ಇರಲಿಲ್ಲ ಆದರೆ ಈ ಮಹಾಪುರುಷನು ವೈದಿಕ ಆಧ್ಯಾತ್ಮಿಕ ವಿದ್ಯೆಯ ಮೂರ್ತಿಯೇ ಆಗಿದ್ದನು. ಆಧ್ಯಾತ್ಮಿಕ ಜೀವನವೇ ಎಲ್ಲ ಧರ್ಮದ ಸಾರವಿದ್ದು, ಎಲ್ಲ ಆಚಾರ-ವಿಚಾರಗಳು ಈ ಜೀವನವನ್ನು ಸಾಧ್ಯಮಾಡುವ ಉಪಾಯಗಳೆಂದೂ, ಆಚಾರ ಧರ್ಮಗಳಲ್ಲಿ ಕಂಡುಬರುವ ವಿವಿಧತೆಯು, ಆಧ್ಯಾತ್ಮಿಕ ಪ್ರಗತಿಯ ಬೇರೆ ಬೇರೆ ಮಟ್ಟಗಳಲ್ಲಿರುವ ವ್ಯಕ್ತಿಗಳ ವಿವಿಧ ಸ್ವಭಾವಗಳಿಗೆ ಅನುಕೂಲವಾಗಿದ್ದು, ಅವುಗಳಲ್ಲಿ ವಿರೋಧವಿರಲಾರದೆಂದೂ, ದೇಶ, ಕಾಲ ಮತ್ತು ಪರಿಸ್ಥಿತಿಗಳಿಗೆ ಅನುಕೂಲವಾಗುವಂತೆ ಬೇರೆ ಬೇರೆ ಧರ್ಮ-ಪಂಥಗಳ ರಚನೆಯಿದ್ದು, ಎಲ್ಲ ಧರ್ಮಗಳ ಗುರಿಯು ಈಶ್ವರ ಸಾಕ್ಷಾತ್ಕಾರವೇ ಆಗಿರುವದರಿಂದ ಬಡಿದಾಟಕ್ಕೆ ಇವುಗಳಲ್ಲಿ ಎಡೆ ಇರುವದಿಲ್ಲವೆಂದೂ ತನ್ನ ಆಚರಣದಿಂದ ಜನರಿಗೆ ಈತನು ತೋರಿಸಿದನು. ಈ ಮಹಾಪುರುಷನ ಪ್ರೇರಣೆಯಿಂದಲೇ ಸ್ವಾಮೀ ವಿವೇಕಾನಂದರು ಪಾಶ್ಚಾತ್ಯ ದೇಶಗಳಿಗೆ ಹೋಗಿ ಎಲ್ಲ ಧರ್ಮಗಳ ಜನನಿಯಾದ ವೈದಿಕ ಆಧ್ಯಾತ್ಮ ಧರ್ಮದ ಧ್ವಜವನ್ನು ಅಲ್ಲಿ ಊರಿದರು. ಆರ್ಯ

ಮಾತೆಯು ಮತ್ತೆ ಜಗತ್ತಿನಲ್ಲಿ ತನ್ನ ಗುರುತ್ವವನ್ನು ಸ್ವೀಕರಿಸಿ ‘ಏತದ್ದೇಶ ಪ್ರಸೂತಸ್ಯ सकाशादग्र जन्मनः । स्वं स्वं चरित्रं शिक्षेरन् पृथिव्यां सर्वे मानवाः ॥’ ಎಂಬ ಮನುವಚನದ ಕಹಳೆಯನ್ನು ಊದಿದಳು.

ನಮ್ಮ ಹಿಂದೂ ರಾಷ್ಟ್ರದ ಆಧ್ಯಾತ್ಮಿಕ ಸ್ವಾತಂತ್ರ್ಯಕ್ಕೆ ಹೆಚ್ಚಾಗಿ ಅಡ್ಡಬರುತ್ತಿದ್ದ ರಾಷ್ಟ್ರೀಯ ಪಾರತಂತ್ರ್ಯವು ಈಗ ನಮ್ಮ ರಾಷ್ಟ್ರೀಯ ಮುಂದಾಳುಗಳ ಪ್ರಯತ್ನದಿಂದ ಮತ್ತು ರಾಷ್ಟ್ರಪಿತರಾದ ಮಹಾತ್ಮಾಜಿ ಯವರ ಮಾರ್ಗದರ್ಶನದಿಂದ, ಜಗತ್ತು ಎಂದೂ ಕಾಣದ ಒಂದು ಅದ್ಭುತ ಪ್ರಕಾರದಿಂದಲೇ ನಷ್ಟವಾಗಿರುತ್ತದೆ. ಒಂದು ಸಾವಿರ ವರ್ಷಗಳ ಪಾರತಂತ್ರ್ಯದಿಂದ ನಮ್ಮ ರಾಷ್ಟ್ರೀಯ ಜೀವನದ ಗುರಿಯು ಮಸುಕಾಗಿ ರಾಷ್ಟ್ರದ ಬೇರೆ ಬೇರೆ ಘಟಕಗಳು ವಿಸ್ಖಲಿತವಾಗಿ ಬಿಟ್ಟವೆ. ಹಿಂದೂ ರಾಷ್ಟ್ರಪುರುಷನು ಬಹುಕಾಲ ನಷ್ಟವಾದ ತನ್ನ ಸ್ವಾತಂತ್ರ್ಯವನ್ನು ಈಗ ಗಳಿಸಿದ್ದರಿಂದ ಹಸಿವೆಯಿಂದ ಪೀಡಿತರಾದ ಭಿಕ್ಷುಕರ ಒಂದು ಸಮೂಹಕ್ಕೆ ಒಮ್ಮೆಲೇ ಒಂದು ಮಿಷ್ಟಾನ್ನದ ತಾಟು ಸಿಕ್ಕಂತೆ, ಅವನು ಈಗ ಮನಃ ಸಂಯಮನವನ್ನು ಬಿಟ್ಟು ಆದರ ಯಥೇಚ್ಛ ಉಪಭೋಗಕ್ಕೆ ಕೈಸಿದ ಕಾರಣ, ನಮ್ಮಲ್ಲಿ ಅಧಿಕಾರಲಾಲಸೆ, ಕರ್ತವ್ಯಹೀನತೆ, ಅಪ್ರಮಾಣಿಕತೆ, ಮುಂತಾದ ದುರ್ಗುಣಗಳು ಸೇರಿ ಸಾಮಾಜಿಕ ಶಾಂತಿಯು ಇಲ್ಲದಂತಾಗಿದೆ. ಸಮಾಜವು ಸುಸಂಘಟಿತವಾದ ಹೊರತು ಈ ಶಾಂತಿಯು ಸಿಗಲಾರದು ಆದ್ದರಿಂದ ನಮ್ಮ ರಾಷ್ಟ್ರದ ಪುನರ್ಘಟನೆಯನ್ನು ಯಾವ ತತ್ವದ ಮೇಲೆ ಮಾಡತಕ್ಕ ದ್ದೆಂಬ ಪ್ರಶ್ನೆಯು ನಮ್ಮೆದುರಿಗೆ ಬಂದು ನಿಂತಿದೆ. ನಾವು ನಮ್ಮ ಹಿಂದಿನ ಅನಾದಿಕಾಲದ ಸಂಸ್ಕೃತಿಯನ್ನು ಬಿಟ್ಟು, ಈಗಿನ ಬಾಲಿಶ ಪಾಶ್ಚಾತ್ಯ ರಾಷ್ಟ್ರಗಳ ಬೆನ್ನು ಹತ್ತಿ, ಭಾಂಡವಾಲದಾರ-ಮಜೂರ, ರಾಜಾ-ಪ್ರಜಾ, ಸಮತಾ-ವಿಷಮತಾ ಮುಂತಾದ ಹೀನ ವಾದಗಳ ಬಲೆಯಲ್ಲಿ ಬಿದ್ದು, ಜಗಳಾಟವನ್ನೆಬ್ಬಿಸಿ, ಅವರಂತೆಯೇ ಜಗತ್ತಿನ ಕ್ಷೋಭಕ್ಕೆ ಕಾರಣರಾಗ ಬೇಕೋ ಅಥವಾ ಇದಕ್ಕಿಂತ ಹೆಚ್ಚು ವಿಚಾರವಂತರಾಗಿ ನಮ್ಮ ಹಿಂದಿನ ಸಂಸ್ಕೃತಿಯ ಯೋಗ್ಯವಾದ ಅಭ್ಯಾಸದಿಂದ ನಮ್ಮದೇ ಆದ ಆರ್ಯ ಗುಣ ಗಳಿಂದ ಕೂಡಿದ ಹೊಸ ಸಮಾಜವನ್ನು ಕಟ್ಟಿ ಜಗತ್ತಿನ ಶಾಂತಿ ಸ್ಥಾಪನೆ

ಗಾಗಿ, ಜಗತ್ತಿನ ಗುರುತ್ವವನ್ನು ಸ್ವೀಕರಿಸಬೇಕೋ? ಎಂಬ ಮಹತ್ತರ ವಾದ ಸಮಸ್ಯೆಯು ನಮ್ಮೆಲ್ಲರ ಎದುರಿಗೆ ಇರುತ್ತದೆ.

ಈ ನಮ್ಮ ಸಮಸ್ಯೆಯ ಯೋಗ್ಯ ಪರಿಹಾರವನ್ನು ನಮ್ಮ ಹಿಂದಿನ ಇತಿಹಾಸದಲ್ಲಿ ನಾವು ಕಂಡಂತೆ, ನಮ್ಮ ರಾಷ್ಟ್ರದ ಆಧ್ಯಾತ್ಮಿಕ ಸಾಧುಪುರುಷರೇ ಮಾಡಬಲ್ಲರೆಂಬದನ್ನು ಇಲ್ಲಿ ಪುನಃ ಒತ್ತಿ ಹೇಳಬೇಕಾಗಿದೆ. ಯಾಕಂದರೆ, ಅವರೇ ಮನುಷ್ಯತ್ವದ ದೃಶ್ಯಾದೃಶ್ಯ ಸ್ವರೂಪವನ್ನು ಕಂಡುಹಿಡಿದವರಿದ್ದು, ಮನುಷ್ಯ ಸ್ವಭಾವದಲ್ಲಿ ಅವಿನಾಶಿಯಾದ ಸನಾತನ ತತ್ವವು ಯಾವದು ಮತ್ತು ಕ್ಷಣಭಂಗುರವಾದ ತತ್ವಗಳು ಯಾವವು ಎಂಬದನ್ನು ಹೇಳಬಲ್ಲರು. ಕ್ಷಣಕ್ಷಣಕ್ಕೂ ಬದಲುತ್ತಿರುವ ತತ್ವಗಳ ಮೇಲೆ ನಮ್ಮ ಸಮಾಜರಚನೆಯಾದಲ್ಲಿ, ನಮ್ಮ ಸಂಸ್ಕೃತಿಯು ನಾಶಹೊಂದಿ ಮನುಷ್ಯ ಸಮಾಜವೂ ಅಳಿದು ಹೋಗುವದು ಸನಾತನ ತತ್ವಗಳ ಮೇಲೆ ರಚಿಸಿದ ಸಮಾಜವು ಎಂದೂ ನಾಶಹೊಂದುವದಿಲ್ಲ. ಅದರಲ್ಲಿ ಕಾಲಮಹಿಮೆಯಿಂದ ಅಜ್ಞಾನದಿಂದುಂಟಾದ ಶಿಥಿಲತೆಯು ಕಂಡು ಬಂದರೂ, ಈ ಸನಾತನ ತತ್ವದ ಯೋಗ್ಯಜ್ಞಾನದಿಂದ ಆ ಸಮಾಜಕ್ಕೆ ಪುನಃ ಚೇತನತೆಯು ಉಂಟಾಗುವದು. ಆಧುನಿಕರ ಸಾಮಾಜಿಕ ವಿಚಾರವು ಮನುಷ್ಯನ ಹೊರಗಿನ ಸ್ಥೂಲ ಕವಚಕ್ಕಷ್ಟೇ ಅಂಟಿಕೊಂಡಿದ್ದು ಮನುಷ್ಯನ ಸೂಕ್ಷ್ಮಭಾಗಗಳು ಆ ವಿಚಾರಸರಣಿಯಲ್ಲಿಲ್ಲ. ಮನುಷ್ಯನ ಈ ಸೂಕ್ಷ್ಮ ಭಾಗಗಳೇ ಹೆಚ್ಚು ಚಿರಕಾಲ ಬಾಳುವಂಥವಿದ್ದು ಆ ಭಾಗಗಳ ಹಿತದ ಕಡೆಗೇ ಮನುಷ್ಯನು ಹೆಚ್ಚು ಲಕ್ಷ್ಯಪೂರೈಸುವದರಿಂದ, ಅವನ ಇಹಲೋಕದ ಬಾಳುವೆಯೂ ಹೆಚ್ಚು ಸುಖಮಯವಾಗುವದರಲ್ಲಿ ಸಂದೇಹವಿಲ್ಲ ಮನುಷ್ಯತ್ವವು ಜೀವನ ಉತ್ಕ್ರಾಂತಿಯಲ್ಲಿಯ ಒಂದು ಮಧ್ಯದ ವಸತಿಸ್ಥಾನವಿದ್ದು, ಜೀವಾತ್ಮನಿಗೆ ಇನ್ನೂ ಮುಂದಿನ ಮಾರ್ಗವನ್ನು ಕ್ರಮಿಸತಕ್ಕದ್ದಿದೆ. ಈ ಜೀವನವೇ ಆದ್ಯಂತವೆಂದು ತಿಳಿದು ಮನುಷ್ಯನು ಹಿಂದುಮುಂದಿನ ವಿಚಾರವಿಲ್ಲದೆ ವರ್ತಿಸಿದಲ್ಲಿ, ಅವನ ಜೀವನವು ಕಷ್ಟಕ್ಕೆ ಈಡಾಗುವದು.

ಈ ವಿಶ್ವವು ಸೂಕ್ಷ್ಮ ಪ್ರಕೃತಿಯಿಂದ ಈ ಸ್ಥೂಲ ಪಂಚಭೂತಗಳವರೆಗೆ, ಬೇರೆ ಬೇರೆ ತರಗತಿಗಳಲ್ಲಿ ಇಳಿದಿದ್ದು ಪ್ರತಿಯೊಂದು ತರಗತಿಯಲ್ಲಿ

ಅದು ಅನೇಕ ಜಗತ್ತುಗಳನ್ನೂ, ಅವಕ್ಕೆ ಅನುಕೂಲವಾದ ಸಾಮರ್ಥ್ಯ, ಪರಮಾಣುಗಳ ಘಟನೆ, ಕಾರ್ಯಪದ್ಧತಿ, ಇವೆಲ್ಲವುಗಳನ್ನೂ ನಿರ್ಮಾಣ ಮಾಡಿರುತ್ತದೆ. ಈ ಸ್ಥೂಲ ಜಗತ್ತಿಗೆ ಕಾರಣನಾದ ಜ್ಞಾನಮಯ ಪರಮಾತ್ಮನು, ತನ್ನ ಅಚಿಂತ್ಯ ಶಕ್ತಿಯಿಂದ ಈ ಗಾಢವಾದ ಅಚೇತನ ವಿಶ್ವದ ಅಜ್ಞಾನದ ಮಡುವಿನಲ್ಲಿ ಧುಮುಕಿ, ಪುನಃ ಅಲ್ಲಿಂದ ತನ್ನ ನಿಜಸ್ವರೂಪದ ಕಡೆಗೆ ಕ್ರಮೇಣ ಪ್ರಯಾಣವನ್ನು ಮಾಡುತ್ತಿದ್ದಾನೆ. ಈ ಅಚೇತನ ವಿಶ್ವದಲ್ಲಿ ಈಶ್ವರನ ಅಂತರ್ಜ್ಞಾನ ಶಕ್ತಿಯು ಕೆಲಸ ಮಾಡುತ್ತಿದ್ದು, ಅದು ಈ ವಿಶ್ವದ ತರಗತಿಗೆ ಯೋಗ್ಯವಾದ ಕ್ರಿಯಾ ಮತ್ತು ಜ್ಞಾನಶಕ್ತಿಗಳನ್ನು ಪ್ರಕಟಮಾಡುತ್ತದೆ. ಈ ಈಶ್ವರೀ ಸ್ಫುರಣ ಜ್ಞಾನವು ಅವನ ನಿರ್ಮಾಣ ಶಕ್ತಿಗೆ ಸಹಾಯವಾಗುವಂತೆ, ಆ ಆ ತರಗತಿಯ ಜಗತ್ತುಗಳಿಗೆ ಅವಶ್ಯವಿರುವ, ಅವುಗಳ ಕ್ರಿಯೆಗಳಿಗೆ ಸಹಾಯ ವನ್ನೀಡುವ ಶಕ್ತಿಗಳನ್ನುಂಟುಮಾಡುತ್ತ, ಒಂದು ಅಜ್ಞಾತ ಪಡದೆಯ ಮರೆಯಲ್ಲಿದ್ದುಕೊಂಡು, ನಾಟಕದಲ್ಲಿಯ ಸೂತ್ರಧಾರನಂತೆ, ಕೆಲಸ ಮಾಡುತ್ತಿದೆ. ಅಣುರೇಣುಗಳಿಂದ ಹಿಡಿದು ಸೂರ್ಯ, ನಕ್ಷತ್ರ-ಗ್ರಹಾದಿ ಗಳ ವರೆಗೆ ಹಬ್ಬಿರುವ ಈ ಸ್ಥೂಲ ವಿಶ್ವದಲ್ಲಿ ಹೇಗೆ ಈ ಸ್ಫೂರ್ತಿ ಜ್ಞಾನವು ತುಂಬಿಕೊಂಡಿರುವದೋ, ಹಾಗೆಯೇ, ಈ ಪಂಚಭೂತಗಳಲ್ಲಿಯೇ ಬೆಳೆದು ಉತ್ಕ್ರಾಂತಿಯನ್ನು ಹೊಂದುತ್ತಿರುವ ಜೀವಗಳಲ್ಲಿಯೂ ಈ ಜ್ಞಾನಶಕ್ತಿಯು ಇರುತ್ತದೆ. ಈ ಜೀವನ ಬೆಳವಣಿಗೆಯಲ್ಲಿ ಮನುಷ್ಯ ಯೋನಿಯು ಒಂದು ಸಾಧನ ಮಾತ್ರವಿದ್ದು, ಅದು ಅವನ ಪರಿಪೂರ್ಣತೆಯ ಚಿನ್ಹವಾಗಲಾರದು. ಆವನು ಮುಂದಿನ ದಾರಿಯನ್ನು ಸಾಧಿಸುವದಕ್ಕಾಗಲಿ, ಅಥವಾ ಇಲ್ಲಿಯೇ ಪರಿಪೂರ್ಣತೆಯನ್ನು ಹೊಂದುವದಕ್ಕಾಗಲಿ, ಅವನಿಗೆ ಈ ಮನುಷ್ಯ ಯೋನಿಯಲ್ಲಿ ಅನೇಕ ಜನ್ಮಗಳನ್ನು ತಾಳಬೇಕಾಗುತ್ತದೆ. ಈ ಸ್ಫೂರ್ತಿ-ಜ್ಞಾನವು ಮನುಷ್ಯನ ಉತ್ಕ್ರಾಂತಿಯ ಮಟ್ಟಕ್ಕೆ ಅನುಗುಣವಾಗಿ ಪ್ರಕಟತೆ ಯನ್ನು ತಾಳುತ್ತದೆ. ಈ ಆಧ್ಯಾತ್ಮಿಕ ಉನ್ನತಿಯ ಮಟ್ಟದಲ್ಲಿ ವ್ಯಕ್ತಿಗೆ ಉಂಟಾಗುತ್ತಿದ್ದ ಗುಣವಿಕಾಸದ ಮೇಲೆ ಸಮಾಜದ ರಚನೆಯಾಗತಕ್ಕದ್ದು. ಈ ಸ್ಥೂಲದೇಹ ಮತ್ತು ಅದರಲ್ಲಿ ಕಂಡುಬರುವ ಬಾಹ್ಯಕ್ರಿಯಾ ಮತ್ತು ಜ್ಞಾನಶಕ್ತಿಗಳಷ್ಟೇ ಮನುಷ್ಯನ ಸರ್ವಸ್ವವೂ ಇರದೆ, ಅವುಗಳ ಹಿಂದೆ,

ಅವೆಲ್ಲವಕ್ಕೂ ಆಧಾರಭೂತವಾದ ಅನೇಕ ತರಗತಿಯ ಸೂಕ್ಷ್ಮ ರಚನೆಗಳೂ ಅವನಲ್ಲಿವೆ. ಆದ್ದರಿಂದ, ಇವೆಲ್ಲವುಗಳ ಯೋಗ್ಯವಿಚಾರವಾಗದೆ, ಮನುಷ್ಯನ ಸಮಾಜರಚನೆಯೂ ಪೂರ್ಣವಾಗಲಾರದೆಂಬುದೇ ಯೋಗೀ ಅರವಿಂದರವರ ತತ್ವಜ್ಞಾನದ ಸಾರವು. ಈ ತತ್ವಜ್ಞಾನದ ವಿಚಾರದಲ್ಲಿಯೇ ಪುನರ್ಜನ್ಮ, ಪರಲೋಕ ಮತ್ತು ಕರ್ಮ ಇವೆಲ್ಲವುಗಳ ಮೀಮಾಂಸೆಯು ಬರುತ್ತದೆ.

ಆರ್ಯರ ಸಮಾಜ ರಚನೆಯು ಈ ತತ್ವಗಳ ಮೇಲೆಯೇ ಆಗಿದೆ. ಆದ್ದರಿಂದ ಈ ರಚನೆಯ ರಹಸ್ಯವನ್ನು ತಿಳಿಯುವದಾದರೆ, ಈ ತತ್ವಗಳ ಮೇಲೆ ರಚಿಸಿದ ಸಿದ್ಧಾಂತಗಳನ್ನೂ, ಅವುಗಳಿಂದ ಹೊರಡುವ ಪ್ರಮೇಯಗಳನ್ನೂ ಚನ್ನಾಗಿ ಅರಿತುಕೊಳ್ಳುವದು ಅವಶ್ಯ. ಮನುಷ್ಯ ವ್ಯಕ್ತಿಗಳ ನೈಸರ್ಗಿಕ ಪ್ರವೃತ್ತಿಯಲ್ಲಿ ಕಂಡುಬರುವ ವಿವಿಧತೆಗೆ ಯೋಗ್ಯವಾದ ಉತ್ತರವು ಪೂರ್ವಜನ್ಮದ ಕಲ್ಪನೆಯ ಹೊರತು ಅನ್ಯತ್ರ ಸಮರ್ಪಕವಾಗಿ ದೊರೆಯುವದಿಲ್ಲ. ಆಧುನಿಕ ಶಾಸ್ತ್ರಜ್ಞರಿಗೆ ಸಮ್ಮತವಿದ್ದ ಅನುವಂಶಿಕ ಸಂಸ್ಕಾರಗಳಿಂದಷ್ಟೇ ಈ ವಿವಿಧತೆಯು ವಗಟು ಬಿಡಲಾರದು ಶ್ರೀ ಶಂಕರಾಚಾರ್ಯ, ಜ್ಞಾನದೇವರಂಥ ವಿಭೂತಿಗಳು ಚಿಕ್ಕಂದಿನಲ್ಲಿಯೇ ವೇದಶಾಸ್ತ್ರಗಳನ್ನು ಅರಿತಿದ್ದರು. ಗಟೆ ಎಂಬ ಜರ್ಮನ ತತ್ವಜ್ಞನು ಹದಿನೇಳು ಭಾಷೆಗಳಲ್ಲಿ ಪ್ರವೀಣನಾಗಿದ್ದನಂತೆ. ಈ ಎಲ್ಲ ಅಲೌಕಿಕ ಬುದ್ಧಿವಂತರು, ಈ ಜನ್ಮದಲ್ಲಿಯೇ ಎಲ್ಲ ಜ್ಞಾನವನ್ನು ಸಂಪಾದಿಸಿದ್ದರೆಂದು ಹೇಳಲಿಕ್ಕೆ ಬರುವದಿಲ್ಲ. ತಾಯಿ-ತಂದೆ-ಅಣ್ಣ-ತಮ್ಮಂದಿರು ಸಾಮಾನ್ಯರಿದ್ದರೂ ಕುಟುಂಬದಲ್ಲಿ ಒಬ್ಬನೇ ವ್ಯಕ್ತಿಯು ಅಸಾಮಾನ್ಯವಾದ ಬುದ್ಧಿವಂತನಾಗುತ್ತಾನೆ. ಇದರ ವಿರುದ್ಧವಾದ ದೃಶ್ಯವನ್ನೂ ಕಾಣಬಹುದು. ಹುಟ್ಟು ಕುರುಡ-ಮೂಕ-ವ್ಯಾಧಿತರನ್ನೂ, ಒಂದೇ ಪರಿಸ್ಥಿತಿಯಲ್ಲಿದ್ದ ಹಲವು ವ್ಯಕ್ತಿಗಳಲ್ಲಿ ವಿಷಮವಾದ ಪರಿಣಾಮವುಂಟಾದದ್ದನ್ನೂ ನಾವು ಕಾಣುತ್ತೇವೆ. ಈ ಎಲ್ಲ ವಿವಿಧತೆಯು ನಿಸರ್ಗದ ಸ್ವಭಾವವೆಂದಾಗಲಿ, ನಿಸರ್ಗ ನಿಯಮದ ಅಪವಾದವೆಂದಾಗಲಿ ಪ್ರತಿವಾದಿಸುವದರಿಂದ ತಾರ್ಕಿಕರ ಸಮಾಧಾನವಾಗಲಾರದು. ಪೂರ್ವಜನ್ಮ ಮತ್ತು ಪೂರ್ವ ಕರ್ಮಫಲಗಳ ಕಲ್ಪನೆಯು ಇಂಥ ಪ್ರಸಂಗಗಳಲ್ಲಿ ಅಪರಿಹಾರ್ಯವಾದದ್ದು.

ಕರ್ಮ ಮತ್ತು ಪುನರ್ಜನ್ಮದ ಕಲ್ಪನೆಯಿಂದ ಮನುಷ್ಯನ ವ್ಯಾವಹಾರಿಕ ನೀತಿಗೆ ತರ್ಕಶುದ್ಧವಾದ ಆಧಾರವು ದೊರೆಯುತ್ತದೆ. ತಾನು ಮಾಡಿದ

ಕರ್ಮದ ಫಲವನ್ನು ಈ ಜನ್ಮದಲ್ಲಿಯಾಗಲಿ, ಮುಂದಿನ ಜನ್ಮದಲ್ಲಿಯಾಗಲಿ ತಾನೇ ಉಪಭೋಗಿಸಬೇಕಾಗುವದೆಂಬ ದೃಢವಿಶ್ವಾಸವುಂಟಾದಲ್ಲಿ, ಈಗಿನ ಜನ್ಮವೂ, ಇದರಲ್ಲಿಯ ಸುಖದುಃಖಗಳೂ ಹಿಂದಿನ ದುಷ್ಕೃತ್ಯ ಅಥವಾ ಸತ್ಕೃತ್ಯಗಳ ಫಲವಾಗಿದ್ದರೆ, ಮತ್ತು ಸತ್ಕೃತ್ಯಗಳನ್ನು ಮಾಡು ವದರಿಂದಲೇ ಇಷ್ಟವಾದ ಸುಖವು ಪ್ರಾಪ್ತವಾಗುತ್ತಿದ್ದರೆ, ಮನುಷ್ಯನ ಪ್ರವೃತ್ತಿಯು ಸತ್ಕಾರ್ಯಗಳ ಕಡೆಗೇ ಹೊರಳುವದು ಸಹಜ. ಆದರೆ, ಈ ಕಾರ್ಯಕಾರಣ ಭಾವವನ್ನು ಅವನು ಚನ್ನಾಗಿ ಅರಿತವನಾಗಿರಬೇಕು. ಇವೆಲ್ಲವೂ ಕೇವಲ ಕಲ್ಪನಾ ಸೃಷ್ಟಿಯೆಂದು ಹೇಳಲಿಕ್ಕೆ ಬರುವದಿಲ್ಲ ಹಿಂದಿನ ಜನ್ಮ-ಕರ್ಮಗಳ ಜ್ಞಾನವು ನಮಗಿರದಿದ್ದರೂ ಸೂಕ್ಷ್ಮದೃಷ್ಟಿಯನ್ನು ಪಡೆದ ಯೋಗಿಗಳಿಗೆ ಅವುಗಳ ಜ್ಞಾನವಾಗುತ್ತದೆ ತೀವ್ರ ಸಂಸ್ಕಾರಗಳುಳ್ಳ ಕೆಲವರಿಗೆ ಹಿಂದಿನ ಜನ್ಮದ ನೆನಪು ಉಂಟಾದ ಉದಾಹರಣೆಗಳು ಇವೆ. ಆದರೆ, ಹಿಂದಿನ ಜನ್ಮದ ನೆನಪು ಮನುಷ್ಯ-ಪ್ರಾಣಿಯ ಉತ್ಕ್ರಾಂತಿಗಾಗಲಿ ಅಥವಾ ಅವನ ಧರ್ಮಸಾಧನಕ್ಕಾಗಲಿ ಅವಶ್ಯವಾಗಿರುವದಿಲ್ಲ. ಆದರೆ, ಅದರ ಮರೆವು ಹಲವು ದೃಷ್ಟಿಯಿಂದ ಮನುಷ್ಯನ ಪ್ರಗತಿಗೆ ಅವಶ್ಯವೆಂದೇ ಈ ಸೃಷ್ಟಿಯ ರಚನೆಯಲ್ಲಿ ಈ ಅಜ್ಞಾನ ಪಡದೆಯನ್ನು ಕರುಣಾಳುವಾದ ಸೃಷ್ಟಿಕರ್ತನು ನಿರ್ಮಿಸಿದ್ದಾನೆಂದು ಹೇಳಬಹುದು. ಆದ್ದರಿಂದ ಜಾಣ ನಾದವನು ಈ ಅನವಶ್ಯಕ ಸಂಗತಿಗಳ—ಬೆನ್ನುಹತ್ತದೆ, ಮನುಷ್ಯ-ಪ್ರಾಣಿಯ ಎಲ್ಲಕ್ಕೂ ಶ್ರೇಷ್ಠವಾದ ಗುರಿಯೆನಿಸಿದ ಮೋಕ್ಷಕ್ಕೆ ಸಾಧನವಾದ ಧರ್ಮಾಚರಣೆಯನ್ನು ಮಾಡುತ್ತಾನೆ.

ಪ್ರತಿಯೊಂದು ಶಬ್ದ, ವಿಚಾರ ಅಥವಾ ಕೃತ್ಯವು ಮನುಷ್ಯನಲ್ಲಿ ಸಂಸ್ಕಾರರೂಪವಾಗಿ ಅಂದರೆ, ಅದೃಶ್ಯ ಬೀಜರೂಪವಾಗಿ ಉಳಿದು ಅದು ಅವನ ಸ್ವಭಾವವಾಗುತ್ತದೆ. ಈ ಸ್ವಭಾವವೇ ಮನುಷ್ಯನಪ್ರವೃತ್ತಿಗೆ ಕಾರಣ. ಆದ್ದರಿಂದ ಪ್ರತಿಯೊಬ್ಬನ ಸತ್ಪ್ರವೃತ್ತಿ, ಅಥವಾ ಕುಪ್ರವೃತ್ತಿಗೆ ಅವನೇ ಕಾರಣ ನಿದ್ದು ಬುದ್ಧಿಪೂರ್ವಕವಾದ ಸತ್ಕರ್ಮಗಳಿಂದ ಕುಪ್ರವೃತ್ತಿಯನ್ನು ಬದಿಗೊತ್ತ ಬಹುದು. ಮನುಷ್ಯನ ವ್ಯವಹಾರದಲ್ಲಿ ಪ್ರಾರಬ್ಧದ ಅಂಶವೆಷ್ಟು ಪುರುಷಾರ್ಥದ ಅಂಶವೆಷ್ಟು ಎಂಬದನ್ನೂ ಚನ್ನಾಗಿ ಅರಿಯುವದು ಅವಶ್ಯವಾಗಿದೆ. ಈ ಎಲ್ಲ ವಿಷಯಗಳನ್ನು ವಾಚಕರು ಮುಂದಿನ ಮೂರು ಪರಿಚ್ಛೇದಗಳಲ್ಲಿ

ಶ್ರೀ ಅರವಿಂದರವರ ಕನ್ನಡಿಸಿದ ವಿಚಾರಗಳಿಂದಲೇ ಅರಿಯಬಹುದು.

ಆಧುನಿಕ ಆಧ್ಯಾತ್ಮಿಕ ಋಷಿಗಳಲ್ಲಿ ಒಬ್ಬರಾದ ಯೋಗಿ ಅರವಿಂದರವರ ದರ್ಶನವು ಅವರ ಅನುಭವದಿಂದ ಸಿದ್ಧವಾದದ್ದು, ಅರ್ಥಾತ್ ಯೋಗಬಲದಿಂದ ಸಾಕ್ಷಾತ್ಕರಿಸಿದ್ದು ಇರುತ್ತದೆ. ಈ ಅವರ ದರ್ಶನವು ವೈದಿಕ ದರ್ಶನದ ವಿರೋಧಿಯಾಗಿರದೆ, ಅದನ್ನೇ ಅದು ದೃಢೀಕರಿಸುತ್ತದೆ. ಅಥವಾ ವೈದಿಕ ತತ್ವಗಳನ್ನೇ ಆಧುನಿಕ ಶಾಸ್ತ್ರ ಮತ್ತು ತರ್ಕಪದ್ಧತಿಗೆ ಸರಿಹೊಂದುವಂತೆ ವ್ಯವಸ್ಥಿತವಾಗಿ ಶ್ರೀ ಅರವಿಂದರು ತಮ್ಮ ವಿದ್ವತ್ತಾ ಪ್ರಚುರವಾದ ವಾಣಿಯಿಂದ ಹೇಳಿರುತ್ತಾರೆ. ಅವರ ಲೇಖನವನ್ನು— ವಿಶೇಷತಃ, ಅದರ ತಾತ್ವಿಕ ಭಾಗವನ್ನು ಶಬ್ದಶಃ ಭಾಷಾಂತರಿಸುವದೆಂದರೆ ಅಶಕ್ಯ-ಪ್ರಾಯವಾದ ಮಾತು. ಅದರಲ್ಲಿಯ ಪ್ರತಿಯೊಂದು ಶಬ್ದವು ಅರ್ಥಗಾಂಭೀರ್ಯದಿಂದ ತುಂಬಿತುಳುಕುತ್ತದೆ. ಆ ಲೇಖನದಲ್ಲಿಯ ಅರ್ಥವು ಶಬ್ದಗಳಲ್ಲಿ ಹಿಡಿಸದೆ, ಸ್ವತಂತ್ರಪ್ರವಾಹವಾಗಿ ಹರಿಯುತ್ತಿದ್ದಂತೆ ಓದುಗರಿಗೆ ಭಾಸವಾಗುತ್ತದೆ. ಅದರೊಳಗಿನ ಪ್ರತಿಯೊಂದು ವಾಕ್ಯಪ್ರಯೋಗವು ಶ್ರೀ ಅರವಿಂದರವರ ಅಸಾಮಾನ್ಯ ಅನುಭವ ಜ್ಞಾನವನ್ನು, ತನ್ನ ಸಂಕುಚಿತವಾದ ಅರ್ಥಶಕ್ತಿಯಿಂದ ಯಥಾರ್ಥವಾಗಿ ಹೇಗೆ ವ್ಯಕ್ತಗೊಳಿಸಬೇಕೆಂಬ ವಾಗ್ದೇವತೆಯ ಚಿಂತೆಯೋ ಏನೋ ಎಂಬಂತೆ, ಅತಿ ಜಟಿಲವಾಗಿ ಹರಿದಿದೆ. ಕಿಂಬಹುನಾ, ಶ್ರೀ ಅರವಿಂದರು ತಮ್ಮದೇ ಆದ ಒಂದು ಸ್ವತಂತ್ರ ಬರಹದ ಸರಣಿಯನ್ನು ಅನುಸರಿಸಿ ಆಂಗ್ಲ ಭಾಷೆಯನ್ನೇ ಅಲಂ-ಕರಿಸಿದ್ದಾರೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಇಂಥ ಅವರ ಸೂಕ್ಷ್ಮ ತತ್ವಜ್ಞಾನದ ಗ್ರಂಥದೊಳಗಿನ ತುಸು ಘನರೂಪವನ್ನು ಹೊಂದಿದ ಮುಂದಿನ ಮೂರು ಪರಿಚ್ಛೇದಗಳನ್ನು ಯಥಾಮತಿ ಕನ್ನಡಿಸಿ ವಾಚಕರ ಅಲ್ಪಸೇವೆಯನ್ನು ಮಾಡಿದ್ದೇನೆ. ಇಂಥ ಕಠಿಣವಾದ ಕೆಲಸದಲ್ಲಿ, ಅವರ ಮತದ ವಿಪರ್ಯಾಸವಾಗದಂತೆ, ಯಥಾರ್ಥ ಅರ್ಥಬೋಧವಾಗಬೇಕೆಂದು ಶಕ್ಯವಿದ್ದಷ್ಟು ಪ್ರಯತ್ನ ಮಾಡಿರುವೆನು. ಸಹೃದಯರಾದ ವಾಚಕರು ತಪ್ಪುತಡೆಗಳನ್ನು ದುರ್ಲಕ್ಷಿಸಿ, ನೀರಕ್ಷೀರನ್ಯಾಯದಿಂದ, ಈ ನನ್ನ ಅಲ್ಪಸೇವೆಯನ್ನು ಸ್ವೀಕರಿಸಬೇಕಾಗಿ ಬೇಡಿಕೆ.

ಓಂ ಶಾಂತಿಃ ಶಾಂತಿಃ ಶಾಂತಿಃ

# ಮೊದಲನೆಯ ಪರಿಚ್ಛೇದ

## ಪುನರ್ಜನ್ಮ



ಪ್ರಾಣಿಗಳ ಜನ್ಮಮರಣದ ವಿಚಾರವು ಮನುಷ್ಯನ ಬುದ್ಧಿಗೆ ತಿಳಿಯದ ಒಂದು ಗೂಢವಾದ ವಿಷಯವಾಗಿದೆ. ಅನಾದಿಕಾಲದಿಂದ ಈ ವಿಷಯವನ್ನು ವಿಚಾರವಂತರು, ತಮ್ಮ ತಮ್ಮ ಬುದ್ಧಿಗೆ ತಿಳಿದಂತೆ, ಜಗತ್ತಿನ ಎದುರಿಗೆ ಇಡುತ್ತ ಬಂದಾಗ್ಯೂ ಅದು ಇನ್ನೂ ಒಂದು ಅಸ್ಪಷ್ಟವಾದ ವಿಷಯವೇ ಆಗಿದೆ. ಮೇಲೆ ಮೇಲೆ ವಿಚಾರ ಮಾಡುವವರು, ಸಜೀವ ವಸ್ತುಗಳು ನಿರ್ಜೀವ ಪಂಚಭೂತಗಳಿಂದ, ಅಕಸ್ಮಾತ್ ಉತ್ಪನ್ನವಾದ ಒಂದು ಶಕ್ತಿಯೆಂದು ಅನ್ನುವರು. ಆದರೆ ಆಳವಾಗಿ ವಿಚಾರ ಮಾಡಲು, ಈ ಚೇತನ ವಸ್ತುವು ಪಂಚಭೂತಗಳಲ್ಲಿ ಪ್ರಕಟವಾಗುವ ಮತ್ತು ಈ ಸ್ಥೂಲಭೂತಗಳಿಗೂ ಕಾರಣವಾಗಿರುವ ಬೇರೊಂದು ಶಕ್ತಿಯ ಕಾರ್ಯವೆಂದು ತಿಳಿದುಬರುತ್ತದೆ. ಆದರೆ ಸಜೀವ ಪ್ರಾಣಿಗಳು ಉತ್ಪನ್ನವಾಗಬೇಕಾದರೆ, ಅವಕ್ಕೆ ಅನುಕೂಲವಾದ ಪರಿಸ್ಥಿತಿ ಇರಬೇಕು. ಈ ಪ್ರಕಾರ ಪ್ರಥಮದಲ್ಲಿ ಪ್ರಕಟವಾದ ಪ್ರಾಣಿಯಲ್ಲಿ, ಅಚೇತನ ವಸ್ತುಗಳಲ್ಲಿ ಕಂಡು ಬರದ ಒಂದು ವಿಶೇಷವಾದ ಪ್ರಕಾರವು ಕಂಡ ಬರುತ್ತದೆ. ಅದು ಯಾವದೆಂದರೆ, ಪ್ರಜ್ವಲಿಸುವ ಜ್ವಾಲೆಯಂತೆ ಇರುವ ಚೈತನ್ಯವು ಅಥವಾ ಆತ್ಮವಸ್ತುವಿನ ಆದ್ಯ ಚಲನವಲನವು.

ಮನುಷ್ಯನಿಗೆ ಈ ವರೆಗೆ ಗೊತ್ತಾದ ಜನ್ಮಕ್ಕೆ ಕಾರಣವಾಗಿದ್ದ ಪರಿಸ್ಥಿತಿ ಮತ್ತು ಜನ್ಮದಿಂದುಂಟಾದ ಪರಿಣಾಮ ಇವುಗಳ ವಿಚಾರ ಮಾಡಲಾಗಿ ಈ ಉತ್ಪನ್ನವಾದ ಪ್ರಾಣಿಗೆ ಒಂದು ಗೂಢವಾದ ಪೂರ್ವಸ್ಥಿತಿಯೂ, ಇತರ ಸಜೀವ ವಸ್ತುಗಳಲ್ಲಿ ಕಂಡುಬರುವ ಕೆಲವು ಸಮಾನ ಧರ್ಮಗಳೂ, ಈ ಜೀವವನ್ನು ಕಾಯ್ದುಕೊಳ್ಳುವ ಬಲವತ್ತರವಾದ ಇಚ್ಛೆಯೂ ಇದ್ದದ್ದಲ್ಲದೆ

ಪ್ರಾಣಿಯ ಮರಣದ ನಂತರವೂ ಅದರ ಚೇತನತ್ವದ ಅಂತವಾಗಲಾರದೆಂದು ಸೂಚಿಸುವ ಕೆಲವು ಸಂಗತಿಗಳೂ ಕಂಡುಬರುತ್ತವೆ. ಆದರೆ ಜನ್ಮದ ಪೂರ್ವದಲ್ಲಿ ಪ್ರಾಣಿಗಳ ಸ್ಥಿತಿ ಹೇಗಿತ್ತು ಅಥವಾ ಮರಣದ ನಂತರ ಹೇಗಾಗುವದು ಎಂಬ ಪ್ರಶ್ನೆಗೆ ಉತ್ತರವನ್ನು ಕೊಡುವದು ನಮ್ಮ ಕೇವಲ ಬುದ್ಧಿಗೆ ಅಶಕ್ಯವಾದ ಮಾತು. ಯಾಕಂದರೆ ಈ ಜ್ಞಾನವು ಯಾವನೊಬ್ಬ ವ್ಯಕ್ತಿಯ ಅಥವಾ ಮಾನವ ವಂಶದ ತಿಳುವಳಿಕೆ ಅಥವಾ ಸ್ಮರಣಶಕ್ತಿಯ ಹೊರಗಿನ ವಿಷಯವಾಗಿದೆ. ಆದರೆ ಇವೆರಡರ ಹೊರತು ಬೇರೆ ಮತ್ತಾವ ವಿಶ್ವಸನೀಯ ಜ್ಞಾನಸಾಧನವು ಮನುಷ್ಯನ ಬುದ್ಧಿಗೆ ಗಮ್ಯವಾಗಿರುವದಿಲ್ಲ. ಆದ್ದರಿಂದ ಇಂಥ ಸಂಕುಚಿತವಾದ ತನ್ನ ಬುದ್ಧಿಶಕ್ತಿಯಿಂದ ತನ್ನೆದುರಿಗೆ ಪ್ರತ್ಯಕ್ಷ ಕಂಡುಬರುವ ಸಂಗತಿಗಳ ಮೇಲೆ ಕೆಲವು ಸಿದ್ಧಾಂತಗಳನ್ನು ರಚಿಸಿ ಅವೇ ಅಂತಿಮ ಸತ್ಯವೆಂದು ಅವನು ನಂಬುತ್ತಾನೆ ಇದಲ್ಲದೆ, ಈ ವಿಶ್ವದ ಸ್ವರೂಪ, ಉಗಮ ಮತ್ತು ಅದರಲ್ಲಿಯ ಕ್ರಿಯೆಯ ಅಂತಿಮ ಉದ್ದೇಶ ಇವುಗಳ ಬಗ್ಗೆ ಇದ್ದ ಮನುಷ್ಯನ ಕಲ್ಪನೆಯ ಮೇಲೆ, ಅವನು ಮರಣೋತ್ತರ ಸ್ಥಿತಿಯ ಬಗ್ಗೆ ರಚಿಸಿದ ಪ್ರಮೇಯಗಳ ಸ್ವರೂಪವು ಅವಲಂಬಿಸಿರುತ್ತದೆ. ಈ ವಿಶ್ವದ ಕಲ್ಪನೆಯು ಭಿನ್ನವಾಗಿದ್ದಂತೆ, ಪೂರ್ವಜನ್ಮ, ಈ ಜನ್ಮ ಮತ್ತು ಪುನರ್ಜನ್ಮಗಳ ಅವನ ಕಲ್ಪನೆಗಳೂ ಭಿನ್ನವಾಗಿಯೇ ಇರುತ್ತವೆ.

ಈ ವಿಷಯದಲ್ಲಿಯ ಮೊದಲನೇ ಪ್ರಶ್ನೆಯೆಂದರೆ, ಪುನರ್ಜನ್ಮವಿದ್ದಲ್ಲಿ, ಜೀವನು ಜನ್ಮದ ಮೊದಲು ಮತ್ತು ಮರಣೋತ್ತರ, ಈಗಿನಂತೆ, ಭೌತಿಕ ಸ್ಥೂಲ ಶರೀರ ಮತ್ತು ಸ್ಥೂಲ ಪ್ರಾಣಗಳಿಂದಲೇ ಯುಕ್ತನಾಗಿರುವನೋ ಅಥವಾ ಬೇರೊಂದು ಸೂಕ್ಷ್ಮ ಮನೋಮಯ ಸ್ಥಿತಿಯಲ್ಲಿರುವನೋ ? ಈ ಜಗತ್ತಿನ ಅಂತಿಮ ತತ್ವವು ಚಾರ್ವಾಕರ ಅಥವಾ ಆಧುನಿಕ ಭೌತಿಕ ಶಾಸ್ತ್ರಜ್ಞರ ಕಲ್ಪನೆಯ ಪ್ರಕಾರ ಸ್ಥೂಲ ಪಂಚಭೂತಗಳೇ ಆಗಿದ್ದರೆ— ವರುಣನ ಮಗನಾದ ಭೃಗುವಿಗೆ ತನ್ನ ತಪಸ್ಸಿನ ಪ್ರಥಮದಲ್ಲಿ ಕಂಡಂತೆ ಮಹಾಭೂತಗಳೇ ಈ ಜಗತ್ತಿನ ಆದಿಕಾರಣವಿದ್ದು, ಇವುಗಳಿಂದಲೇ ಎಲ್ಲ ಚರಾಚರ ಸೃಷ್ಟಿಯು ಹುಟ್ಟಿ, ಅವುಗಳಲ್ಲಿಯೇ ಇದ್ದು, ಅಂತ್ಯದಲ್ಲಿ ಅಲ್ಲಿಯೇ ಅದು ನಾಶ ಹೊಂದುತ್ತಿದ್ದರೆ— ಈ ಸಂಶಯವೇ ಬರುತ್ತಿರಲಿಲ್ಲ. ಈ ನಮ್ಮ ದೇಹವು ಬೀಜ ( ರೇತಸ್ಸು) ಮತ್ತು ಆಹಾರ ( ರಕ್ತ ) ಇವುಗಳಲ್ಲಿಯ ಅಜ್ಞಾತ

ಶಕ್ತಿಗಳ ಸಂಯೋಗದಿಂದ ಹುಟ್ಟುವದೆಂದೂ, [ನಮ್ಮ ಚೈತನ್ಯ ಅಥವಾ ಜ್ಞಾನಶಕ್ತಿಯು ಸ್ಥೂಲ ಪ್ರಾಣ ಮತ್ತು ಮನಸ್ಸು ಇವುಗಳ, ತಾಯಿತಂದೆಗಳ ಶರೀರದಲ್ಲಿಯ ಭೌತಿಕ ಪದಾರ್ಥಗಳ ಮೇಲೆ ಆಗುವ ಕ್ರಿಯೆಯಿಂದುಂಟಾಗುವ ಪರಿಣಾಮವೆಂದೂ ಊಹೆಮಾಡಬಹುದಾಗಿತ್ತು. ಹಾಗು ಮರಣದ ನಂತರ ಈ ಸ್ಥೂಲ ಮತ್ತು ಸೂಕ್ಷ್ಮ ಶರೀರಗಳು, ಈ ಮಹಾಭೂತಗಳಲ್ಲಿಯೇ ವಿಲೀನವಾಗಿ, ದೇಹದಲ್ಲಿಯ ಚೈತನ್ಯವು ಎಣ್ಣೆ ತೀರಿದ ಮೇಲೆ ನೊಂದಿ ಹೋಗುವ ದೀಪದಂತೆ, ನಷ್ಟವಾಗುತ್ತಿತ್ತು. ಆದರೆ ಈ ಭೌತಿಕ ವಸ್ತುಗಳಷ್ಟೇ ಜಗತ್ತಿನ ಆದ್ಯ ತತ್ವಗಳೆಂದು ಸಿದ್ಧವಾಗಿರುವದಿಲ್ಲ. ಈ ಮಹಾಭೂತಗಳು ಸ್ವಯಂಸಿದ್ಧವಾಗಿರದೆ, ಇವುಗಳ ಇರುವಿಕೆಯು ಬೇರೊಂದು ತತ್ವದ ಮೇಲೆ ಅವಲಂಬಿಸಿರುತ್ತದೆ. ಆದ್ದರಿಂದ ಮೇಲೆ ಹೇಳಿದ ಪ್ರಾಣಿಗಳ ಉತ್ಪತ್ತಿಯ ಕಾರಣ ಮೀಮಾಂಸೆಯನ್ನು ಇಷ್ಟು ಸುಲಭ ರೀತಿಯಿಂದ ಮುಗಿಸಲು ಸಾಧ್ಯವಿಲ್ಲ.

ಈಶ್ವರನು ತನ್ನ ಅಚಿಂತ್ಯ ಶಕ್ತಿಯಿಂದ ತನ್ನೊಳಗಿಂದಲೇ ಉತ್ಪನ್ನ ಮಾಡಿದ ಸಾಮುಗ್ರಿಗಳಿಂದ ಈ ಪ್ರಾಣಿದೇಹಗಳನ್ನು ರಚಿಸಿ, ಅವುಗಳಲ್ಲಿ ಜೀವಗಳೆಯನ್ನು ಊದಿ, ಈ ಅನಂತ ಜೀವಗಳನ್ನು ಹುಟ್ಟಿಸಿರುವನೆಂದು ಕೆಲವು ಧರ್ಮಗಳಲ್ಲಿಯ ಇನ್ನೊಂದು ಹಳೇ ಶ್ರದ್ಧೆಯಿರುತ್ತದೆ. ಈ ಶ್ರದ್ಧೆಯು ತರ್ಕಕ್ಕೆ ಸರಿಯಾಗಿರುವದಿಲ್ಲ. ಯಾಕಂದರೆ, ಎರಡು ದೋಷಗಳು ಇದರಲ್ಲಿ ಕಂಡುಬರುತ್ತವೆ. ಒಂದು ವಿಶಿಷ್ಟ ಕ್ಷಣದಲ್ಲಿ ಉತ್ಪನ್ನವಾದ ಈ ಜೀವಗಳು ಅಂತ ಅಥವಾ ನಾಶಹೊಂದದೇ ಇರಲಾರವು. ಅಂತವಿಲ್ಲದ ವಸ್ತುವಿಗೆ ಹುಟ್ಟೂ ಇರಲಾರದು; ಹಾಗೂ ಹುಟ್ಟಿದ ವಸ್ತುವಿಗೆ ಸಾವು ಇಲ್ಲದ್ದು ಕಂಡುಬರುವದಿಲ್ಲ. ಆದ್ದರಿಂದ ಪರಮೇಶ್ವರನು ಉತ್ಪನ್ನಮಾಡಿದ ಜೀವವು ನಾಶರಹಿತವಾದದ್ದು ಅಂದರೆ ಸಾವಿಲ್ಲದ್ದು ಇರುತ್ತದೆಂದು ಕಲ್ಪಿಸುವದು ತಪ್ಪು. ಎರಡನೆಯ ದೋಷವೆಂದರೆ, ಈ ಜೀವಗಳು ಉತ್ಪನ್ನವಾದಾಗ, ಅವುಗಳ ಸಂಗಡವೇ ಅವುಗಳಲ್ಲಿ ಕಂಡುಬರುವ ಗುಣದೋಷಗಳ ವೈಷಮ್ಯವೂ ಪರಮೇಶ್ವರನಿಂದಲೇ ರಚಿತವಾಗಿರಬೇಕು. ಅಂದಮೇಲೆ ಈ ಗುಣದೋಷಗಳಿಗೆ ಹೊಣೆಯಾಗಿರದ ಜೀವಗಳನ್ನು ಆ ಗುಣದೋಷಗಳ

ಇಷ್ಟಾನಿಷ್ಟ ಸುಖದುಃಖಗಳಿಗೆ ಗುರಿಮಾಡುವದು ಸೃಷ್ಟಿಕರ್ತನ ಅನ್ಯಾಯ ವಾಗುವದು. ಶರೀರದಲ್ಲಿ ಚೈತನ್ಯವುಂಟಾಗಬೇಕೆಂದು ಜೀವಗಳ ಉತ್ಪತ್ತಿ ಯನ್ನು ಪರಮೇಶ್ವರನು ಮಾಡಿದ್ದರೆ, ಈ ಶರೀರವು ನಷ್ಟವಾದ ಕೂಡಲೆ, ಜೀವವೂ ಪುನಃ ಈಶ್ವರನಲ್ಲಿ ಲೀನವಾಗುವದು ಸಹಜವಾಗಿದೆ. ಈ ದೇಹ ನಾಶಹೊಂದಿದ ನಂತರವೂ, ಜೀವನು ಇರುವನೆಂದು ಕಲ್ಪಿಸಬೇಕಾ ದರೆ, ಜೀವನು ಈ ಸ್ಥೂಲ ದೇಹವು ಉತ್ಪನ್ನವಾಗುವ ಮೊದಲು ಸೂಕ್ಷ್ಮ ವಾದ ಮನೋಮಯ ಶರೀರದಲ್ಲಿ ಇರಬೇಕೆಂದೂ, ಆಮೇಲೆ ಅವನು ಈ ಸ್ಥೂಲದೇಹದಲ್ಲಿ ಪ್ರವೇಶಿಸಿರಬೇಕೆಂದೂ ನಿಶ್ಚಿತವಾಗಿ ಹೇಳಬಹುದು. ಈ ಕ್ಷಣಭಂಗುರವಾದ ದೇಹದಲ್ಲಿ ವಾಸಿಸುವದಕ್ಕೋಸ್ಕರ ಜೀವನ ಉತ್ಪತ್ತಿ ಯಾಗಿದ್ದರೆ, ಇಂಥ ಕ್ಷುದ್ರ ಕಾರಣಕ್ಕೆ ಉತ್ಪತ್ತಿ ಹೊಂದಿದ ಜೀವನು, ಅಮರನೆಂದು ಕಲ್ಪಿಸುವದು ತಪ್ಪು. ಆದರೆ ಮೊದಲೇ ಇದ್ದ ಜೀವನು, ಈ ಕ್ಷಣಭಂಗುರವಾದ ಶರೀರವನ್ನು ಪ್ರವೇಶಿಸಿ, ಈ ಅಚೇತನ ದೇಹಕ್ಕೆ ಚೇತನವನ್ನುಂಟು ಮಾಡಿದನೆಂದೂ, ತನ್ನ ಅಮರತ್ವವನ್ನು ಭೌತಿಕ ದ್ರವ್ಯಗಳಲ್ಲಿ ತಂದನೆಂದೂ ಹೇಳುವದು ಸಯುಕ್ತಿಕವಾದ ಮಾತು. ಜೀವನು ಸ್ವತಃ ಅಮರನಿದ್ದು ಉತ್ಪನ್ನಮಾಡಲ್ಪಟ್ಟನೆಂಬುವದೂ ಯೋಗ್ಯ ವಾಗಲಾರದು. ದೇಹರಹಿತ ಸ್ಥಿತಿಯಲ್ಲಿ ಅಂದರೆ ಈ ದೇಹವು ನಷ್ಟವಾದ ಮೇಲೂ ಜೀವಾತ್ಮನು ಇರುವನೆಂದು ಕಲ್ಪಿಸಿದರೆ, ಈ ದೇಹವು ಹುಟ್ಟುವ ಮೊದಲೂ ಅವನು ದೇಹರಹಿತ ಸ್ಥಿತಿಯಲ್ಲಿ ಇದ್ದನೆಂದು ಸಿದ್ಧವಾಗುತ್ತದೆ. ಯಾಕಂದರೆ, ದೇಹವು ನಷ್ಟವಾದ ನಂತರ ಅವನ ಅಸ್ತಿತ್ವವು ಶಕ್ಯವಿದ್ದರೆ, ಅವನ ಅಸ್ತಿತ್ವಕ್ಕೆ ದೇಹದ ಅಸ್ತಿತ್ವದ ಅವಶ್ಯಕತೆ ಇರುವದಿಲ್ಲ ಅಂದಮೇಲೆ ದೇಹ ಹುಟ್ಟುವ ಮೊದಲೂ ಅವನು ದೇಹರಹಿತ ಸ್ಥಿತಿಯಲ್ಲಿ ಇರಬೇಕೆಂದು ಕಲ್ಪಿಸುವದು ತರ್ಕಕ್ಕೆ ಅನುಕೂಲವಾಗಿಯೇ ಇದೆ

ಸಜೀವ ದೇಹವು ಉತ್ಪನ್ನವಾದ ಕೂಡಲೆ, ಅದರಲ್ಲಿ ಕೆಲಮಟ್ಟಿಗೆ ಬೆಳವಣಿಗೆ ಹೊಂದಿದ ವಿಷಮಪ್ರಕಾರದ ಗುಣದೋಷಗಳು ಕಂಡುಬರು ತ್ತವೆ. ಈ ದೇಹದಲ್ಲಿ ಬೆಳವಣಗೆ ಹೊಂದಿದ ಗುಣದೋಷಗಳಿಗೆ ಬೆಳವಣಿಗೆಗೆ ಎಲ್ಲಿ ಅವಕಾಶ ದೊರೆಯಿತು? ಜೀವಾತ್ಮನು ವಿಶಿಷ್ಟ ಬೆಳವಣಿಗೆಯನ್ನು ಪಡೆದ

ಗುಣದೋಷಯುಕ್ತವಾದ ವ್ಯಕ್ತಿತ್ವದಿಂದ ಈ ದೇಹವನ್ನು ಪ್ರವೇಶಿಸಿದನೆಂದು ತಿಳಿದರೆ, ಈ ವ್ಯಕ್ತಿತ್ವವು ಅವನಿಗೆ ಇಲ್ಲಿಯ ಅಥವಾ ಪಾರಲೌಕಿಕ ಹಿಂದಿನ ಜೀವನದಲ್ಲಿ ಉಂಟಾಗಿರಬೇಕೆಂದು ಸಿದ್ಧವಾಗುತ್ತದೆ. ಹೀಗಿರದೆ, ಜೀವಾತ್ಮನು ಮೊದಲೇ, ತನ್ನ ಸಲುವಾಗಿ ತಯಾರಿಸಿದ ಮನಸ್ಸು ಮತ್ತು ವ್ಯಕ್ತಿತ್ವವುಳ್ಳ ಆನುವಂಶಿಕವಾಗಿ ತಾಯಿತಂದೆಗಳಿಂದ ಪ್ರಾಪ್ತವಾದ ಶರೀರವನ್ನು ಧಾರಣಮಾಡಿದನೆಂದು ಅಂದರೆ, ಈ ಶರೀರವು ಅವನಿಗೆ ಅಕಸ್ಮಾತ್ ಪ್ರಾಪ್ತವಾದದ್ದರಿಂದ, ಅದರಿಂದುಂಟಾಗುವ ಕರ್ಮ-ಫಲಗಳ ಸಂಬಂಧವೂ ಅವನಿಗೆ ಇರಕೂಡದು. ಜೀವಾತ್ಮನು ರಾಸಾಯನಿಕ ಮಿಶ್ರಣದಿಂದ ತಯಾರಾಗದ ಅಮರ ವಸ್ತುವೇ ಆಗಿದ್ದರೆ, ಅವನು ಅನಾದ್ಯನಂತನೂ ಆಗಿರಬೇಕು. ಈ ಅನಾದ್ಯನಂತ ಜೀವನು ಕಾಲಕಾಲಕ್ಕೆ ಬದಲಾಗುತ್ತಿರುವ ತನ್ನ ವ್ಯಕ್ತಿತ್ವವನ್ನು ಈ ನಿಸರ್ಗದಲ್ಲಿ ತನ್ನ ಸ್ಥೂಲ ಶರೀರಗಳ ಜನ್ಮಮರಣಗಳ ರೂಪದಿಂದ ಮೇಲಿಂದ ಮೇಲೆ ಧರಿಸುತ್ತಿರುವದು ಸ್ವಾಭಾವಿಕವಾಗಿದೆ.

ಜೀವನ ಭೌತಿಕ ಉತ್ಪತ್ತಿಯು ಅಗ್ರಾಹ್ಯ ಮತವೆಂದು ನಾವು ಅದನ್ನು ತ್ಯಜಿಸಿದರೂ, ಜೀವಾತ್ಮನ ಅವಿನಾಶಿತ್ವವನ್ನು ಸಿದ್ಧಮಾಡುವದು ತುಸು ಕಠಿಣವಾಗಿದೆ. ಯಾಕಂದರೆ, ಈ ಜಗತ್ತಿನಲ್ಲಿ ಕಂಡುಬರುವ ಎಲ್ಲ ಚೇತನ ಮತ್ತು ಅಚೇತನ ಸೃಷ್ಟಿಯು ಆದಿಯಲ್ಲಿ ಒಂದೇ ( ಭೌತಿಕ ಅಥವಾ ಆಧ್ಯಾತ್ಮಿಕ ) ವಸ್ತುವಿನಿಂದ ನಿರ್ಮಿತವಾಗಿ, ಅದರಲ್ಲಿಯೇ ಇದ್ದು, ಅಲ್ಲಿಯೇ ವಿಲೀನವಾಗುವದರಿಂದ, ಚೇತನರೂಪನಾದ ಜೀವಾತ್ಮನೂ ಅದರಂತೆಯೇ ಹುಟ್ಟಿ, ಬಾಳಿ, ಮುಂದೆ ನಾಶಹೊಂದಬಹುದೆಂದು ವಾದಿಸಬಹುದು. ಆಧುನಿಕ ಭೌತಿಕ ಶಾಸ್ತ್ರಜ್ಞರು ಈಗಿನ ಹಲವು ಸಂಶೋಧನೆಗಳ ಸಹಾಯದಿಂದ ಹೇಳುವದೇನೆಂದರೆ, ಅಚೇತನ ಭೌತಿಕ ವಸ್ತುವೇ ವಿಶ್ವದ ಆದ್ಯ ತತ್ವವಾಗಿದ್ದು, ಈ ಭೌತಿಕ ತತ್ವದಿಂದಲೇ ಜಗತ್ತು ಉತ್ಪನ್ನವಾಗಿ, ಅದರಲ್ಲಿಯೇ ಈ ಭಂಗುರವಾದ ಚೈತನ್ಯವು ಹುಟ್ಟಿ ನಷ್ಟವಾಗುತ್ತದೆ. ಅಥವಾ ಕೆಲವರು ಹೇಳುವಂತೆ, ಈ ಶಾಶ್ವತ ರೂಪದ ಜಗತ್ತು ( ಅಚೇತನವಾದದ್ದು ) ಚೇತನಾಚೇತನ ರೂಪಗಳಲ್ಲಿ ಪರಿಣಮಿಸುವದು. ಈ ಪರಿಣಾಮದ ಒಂದು ತುದಿಗೆ ಅಚೇತನ ಭೌತಿಕ ಪದಾರ್ಥರೂಪವಾದ

ವಿಷಯಗಳೂ, ಮತ್ತೊಂದು ತುದಿಗೆ ಚೇತನ ವಿಷಯೀ ಸ್ವರೂಪದ ಮನಸ್ಸೂ ಉತ್ಪನ್ನವಾಗಿ, ಇವುಗಳ ರಾಸಾಯನಿಕ ಕ್ರಿಯೆಯಿಂದ, ಕ್ರಮೇಣ ಮನುಷ್ಯಪ್ರಾಣಿಯು ಉತ್ಪನ್ನನಾದನೆಂದು ಅವರು ಕಲ್ಪಿಸುತ್ತಾರೆ. ಅಥವಾ, ಮೂರನೆಯ ಮತ್ತೊಂದು ಹಳೇ ಧಾರ್ಮಿಕ ಕಲ್ಪನೆಯೂ ಉಂಟು ಆ ಪ್ರಕಾರ ಜಗತ್ತಿನ ಆರಂಭದಲ್ಲಿ ಕೇವಲ ಅಲಿಪ್ತವಾದ ಪರಬ್ರಹ್ಮ ವಸ್ತು ಒಂದೇ ಇದ್ದು, ಅದು ಮಾಯಾಶಕ್ತಿಯಿಂದ ಮಾಯಾಮಯವಾದ ಚೇತನಾಚೇತನ ಸೃಷ್ಟಿಯನ್ನು ನಿರ್ಮಿಸಿತೆಂದೂ, ಆದ್ದರಿಂದ ಜಗತ್ತಿನಲ್ಲಿ ಕಂಡುಬರುವ ಚರಾಚರ ಎಲ್ಲ ವಸ್ತುಗಳೂ ಅಸತ್ಯವಾದವುಗಳೆಂದೂ ಪ್ರತಿ-ಪಾದನೆ ಇದೆ. ಅಥವಾ ಬೌದ್ಧರ ತತ್ವಜ್ಞಾನದಂತೆ, ಶೂನ್ಯದಿಂದ ಕರ್ಮ ಮೂಲಕ ಜಗತ್ತು ಉತ್ಪನ್ನವಾಗಿ ವಿನಾಶೀ ಜೀವವು ಉಂಟಾಗಬಹುದು. ಈ ಎಲ್ಲ ತತ್ವ ವಿವೇಚನೆಗಳ ಪ್ರಕಾರ, ಪುನರ್ಜನ್ಮವು ಅನವಶ್ಯಕವಾದದ್ದು. ಯಾಕಂದರೆ, ಜೀವಾತ್ಮನ ಜ್ಞಾನಶಕ್ತಿಯು ಒಮ್ಮೆಲ್ಲೊಮ್ಮೆ ನಷ್ಟವಾಗುವದರಿಂದ, ಅವನು ಸಾಧಿಸಬೇಕಾದ ಶಾಶ್ವತ ಧ್ಯೇಯವು ಇರುವದಿಲ್ಲ. ಮತ್ತು ತಾನು ಹಿಂದೆ ಸಾಧಿಸಿದ ಪ್ರಗತಿಯನ್ನು ಮುಂದುವರಿಸುವದಕ್ಕೋಸ್ಕರ, ಒಂದು ಜನ್ಮದಿಂದ ಮತ್ತೊಂದು ಜನ್ಮಕ್ಕೆ ಹೋಗಬೇಕಾದ ಕಾರಣವೂ ಇಲ್ಲ. ಮೇಲಿನ ತಾತ್ವಿಕ ದೃಷ್ಟಿಗಳಿಂದ ನೋಡಲಾಗಿ, ಜೀವಾತ್ಮನು ಮಾಯಿಕ ಅಥವಾ ಸತ್ಯವಾದ ಒಂದು ಆದಿ ತತ್ವದಲ್ಲಿ ಕಂಡುಬರುವ, ಪ್ರತಿಕ್ಷಣದಲ್ಲಿಯೂ ಬದಲಾಗುತ್ತಿರುವ ಚೈತನ್ಯದ ಒಂದು ಪ್ರವಾಹವಾಗಬಹುದು, ಅಥವಾ ಅದು ಸನಾತನ ಪರಬ್ರಹ್ಮ ವಸ್ತುವಿನ ಪ್ರತಿಬಿಂಬವಾಗಬಹುದು. ಅದು ಜಗತ್ಪ್ರವಾಹದ ಅನುಭವವನ್ನು ಹೊಂದುವ ಸನಾತನ ಸಾಕ್ಷಿ ಚೈತನ್ಯವಾಗಲಾರದು. ನಾಶವಂತ ಜೀವಗಳ ಹಿಂದೆ, ಅನಂತ ಪ್ರವಾಹರೂಪೀ ಜಗತ್ತಾಗಲಿ, ಅಲಿಪ್ತ ನಿರಂಜನ ವಸ್ತುವಾಗಲಿ, ಸತತ ಕ್ರಿಯೆಯಲ್ಲಿ ತೊಡಗಿದ ಪ್ರಾಣಶಕ್ತಿಯಾಗಲಿ ಇದ್ದು, ಇವುಗಳಲ್ಲಿ ಯಾವದಾದರೊಂದು ಶಾಶ್ವತವಾದ ತತ್ವವಿರಬೇಕಾಗುತ್ತದೆ. ಆದರೆ, ವ್ಯಕ್ತಿತ್ವಯುಕ್ತ ಅವಿನಾಶಿಯಾದ ಜೀವಾತ್ಮನು, ಒಂದು ದೇಹವನ್ನು ಬಿಟ್ಟು ಮತ್ತೊಂದು ದೇಹವನ್ನು ಪ್ರವೇಶಿಸುವದೂ, ಒಂದು ಆಕಾರವನ್ನು ಬಿಟ್ಟು ಮತ್ತೊಂದು ಆಕಾರವನ್ನು ತಾಳುವದೂ ಮತ್ತು ಅಂತ್ಯದಲ್ಲಿ ಈ ಜನ್ಮ-ಮರಣ ಚಕ್ರಕ್ಕೆ ಕಾರಣವಾದ ಅಜ್ಞಾನವು ನಷ್ಟವಾದನಂತರ, ತನ್ನ ನಿಜಸ್ವರೂಪಾನುಭವದಿಂದ ಮುಕ್ತಿ

ಯನ್ನು ಪಡೆಯುವದೂ, ಅವನ ಲಕ್ಷಣವಾಗಿರಬೇಕೆಂದು ನಿಶ್ಚಿತವಾಗಿ ಹೇಳಲಿಕ್ಕೆ ಬರುವದಿಲ್ಲ. ಒಂದು ಸ್ವರೂಪವು ಉತ್ಕ್ರಾಂತಿಯಿಂದ ಪ್ರಾಪ್ತವಾದ ನಂತರ, ಅದರಲ್ಲಿ ಚೈತನ್ಯವುಂಟಾಗಿ, ಆ ರೂಪವು ನಷ್ಟವಾಗುತ್ತಲೇ, ಆ ಚೈತನ್ಯವೂ ನಷ್ಟವಾಗುತ್ತದೆಂದು ಹೇಳಿದರೆ, ಮೇಲಿನ ಅವೈದಿಕ ತತ್ವ-ಪ್ರಣಾಲಿಗಳಲ್ಲಿ ಯಾವದಕ್ಕೂ ವಿರೋಧವುಂಟಾಗುವದಿಲ್ಲ ಅಥವಾ ಈ ದೇಹವು ಪಂಚಮಹಾಭೂತಗಳ ಕಣಗಳ ಸಂಯೋಗದಿಂದ ಜನ್ಮತಾಳಿ, ಕಣಗಳ ವಿಯೋಗದಿಂದ ನಾಶವು ಉಂಟಾಗಬಹುದು; ಹಾಗೂ ಬೌದ್ಧಿಕ ಕಣಗಳು ಒಂದೆಡೆಗೆ ಕೂಡುವದರಿಂದ ಚೈತನ್ಯವು ಉಂಟಾಗಿ ಮರಣ ಕಾಲಕ್ಕೆ ಈ ಕಣಗಳು ಬೇರೆ ಬೇರೆಯಾಗುವದರಿಂದ ಚೈತನ್ಯವು ನಷ್ಟವಾಗಬಹುದು; ಎಂದು ಮೊದಲಾಗಿ ಕಲ್ಪಿಸಿದರೂ, ಮೇಲಿನ ತತ್ವಗಳಿಗೆ ವಿರೋಧ ಬರುವದಿಲ್ಲ. ಆದ್ದರಿಂದ ಈ ವಿಚಾರಸರಣಿಗಳ ಪ್ರಕಾರ ಪುನರ್ಜನ್ಮದ ಆವಶ್ಯಕತೆ ಇರುವದಿಲ್ಲ.

ಪುನರ್ಜನ್ಮದ ಹಳೇ ಮತ್ತು ಹೊಸ ವಿಚಾರ ಪದ್ಧತಿಗಳಲ್ಲಿ ಬಹಳೇಅಂತರವುಂಟು. ಆಧುನಿಕರು ಸ್ಥೂಲ ಶರೀರವೇ ಪ್ರಾಣಿಯ ಜೀವನಕ್ಕೆ ಕೇವಲ ಆಧಾರವೆಂದೂ, ಇಹಲೋಕದ ಹೊರತು ಬೇರೆ ಲೋಕಗಳ ಅಸ್ತಿತ್ವವು ಇರಲಾರದೆಂದೂ ನಂಬುತ್ತಾರೆ. ಮಾನಸಿಕ ಜ್ಞಾನಶಕ್ತಿಯು ದೇಹಜೀವನದ ಒಂದು ಭಾಗವೇ ಇದ್ದು, ದೇಹ ಹುಟ್ಟುವ ಮೊದಲೂ, ಅದು ಸತ್ತನಂತರವೂ ಮನೋಮಯ ಜ್ಞಾನಕ್ಕೆ ವ್ಯಕ್ತಿತ್ವವುಳ್ಳ ಸ್ವತಂತ್ರ ಅಸ್ತಿತ್ವವು ಇರುವದು ಶಕ್ಯವಿಲ್ಲವೆಂದು ಅವರ ಹೇಳಿಕೆಯಿದೆ. ಅವರು ಮತ್ತೂ ಅನ್ನುವದೇನಂದರೆ, ಜೀವನ ಉತ್ಪತ್ತಿಯ ಮೊದಲು, ಬೀಜಭೂತವಾದ ಅಚೇತನ ಪ್ರಾಣಶಕ್ತಿಯು ಮಾತ್ರ ಇರುತ್ತದೆ. ತಾಯಿತಂದೆಗಳ ದೇಹದಲ್ಲಿ ಈ ಜೀವನ ಬೀಜವು ಪ್ರಾಣಶಕ್ತಿಯ ಕ್ರಿಯೆಯಿಂದ ಒಂದು ವಿಶಿಷ್ಟ ಮಾನಸಿಕ ಮತ್ತು ಶಾರೀರಿಕ ಅಚ್ಚನ್ನು ತಯಾರು ಮಾಡುತ್ತದೆ. ತಾಯಿತಂದೆಗಳ ಜೀವಶಕ್ತಿಯು ತನ್ನ ಸಂತತಿಯಲ್ಲಿ ಬೀಜ ಮತ್ತು ಪ್ರಾಣಶಕ್ತಿಗಳನ್ನುಂಟು ಮಾಡಬಲ್ಲದು. ಪಿತೃದೇಹಗಳು ನಷ್ಟವಾದರೂ, ಅವರಿಂದ ಸಂತತಿಗೆ ಕೊಡಲ್ಪಟ್ಟ ಈ

ಬೀಜ ಮತ್ತು ಪ್ರಾಣಶಕ್ತಿಗಳು ವಂಶಪರಂಪರೆಯಿಂದ ಅವ್ಯಾಹತವಾಗಿ ನಡೆಯುವವು. ಈ ಪ್ರಕಾರ ಬೀಜ ಮತ್ತು ಪ್ರಾಣಶಕ್ತಿಗಳ ಪರಸ್ಪರ ಕ್ರಿಯೆಯಿಂದ ಜನ್ಮಕಾಲದಲ್ಲಿ ಇದ್ದ ಸುತ್ತಲಿನ ಪರಿಸ್ಥಿತಿ ಮತ್ತು ಭೌತಿಕ ಗುಣ-ಧರ್ಮ ಇವುಗಳಿಂದ ಆಕಸ್ಮಾತ್ತಾಗಿ ಲಭಿಸಿದ ಸಂಸ್ಕಾರಗಳೇ ಪ್ರಾಣಿಯ ದೇಹ ಮತ್ತು ಮನಸ್ಸಿನ ಬೆಳವಣಿಗೆಗೆ ಕಾರಣವಾಗುತ್ತವೆ. ಆದ್ದರಿಂದ, ಜೀವನ ಹಿಂದಿನ ಜನ್ಮದ ಅಸ್ತಿತ್ವದ ಕಲ್ಪನೆಯು ಅನವಶ್ಯಕವಾದದ್ದು. ಈ ಮಾನಸಿಕ ಮತ್ತು ಭೌತಿಕ ದೃಶ್ಯಗಳ ಹಿಂದೆ ಒಂದು ವಿಶ್ವಜೀವತತ್ವವನ್ನು ಅವರು ಕಲ್ಪಿಸುತ್ತಾರೆ. ಈ ತತ್ವವು ಪ್ರಾಣಿಗಳಿಗೆ ಉತ್ಕ್ರಾಂತಿಯ ಓಘದಲ್ಲಿ ವ್ಯಕ್ತಿತ್ವವನ್ನು ಉಂಟುಮಾಡುವದು. ಈ ವಿಶ್ವಜೀವ ತತ್ವವು ಸತ್ಯ ಜಗತ್ತಿನ ಉತ್ಪತ್ತಿಗೆ ಕಾರಣವಿದ್ದರೂ, ಅದು ವ್ಯಕ್ತಿಜೀವಗಳಿಗೆ, ಅವಿನಾಶಿ ವ್ಯಕ್ತಿತ್ವವನ್ನುಂಟು ಮಾಡಲಾರದು. ಆದ್ದರಿಂದ ಈ ವಿಚಾರದಲ್ಲಿ ಅವ್ಯಾಹತವಾದ ಜೀವನ ವ್ಯಕ್ತಿತ್ವದ ಕಲ್ಪನೆಗೆ, ಅಂತೆಯೇ ಪುನರ್ಜನ್ಮದ ಕಲ್ಪನೆಗೆ ಎಡೆ ಇಲ್ಲ.

ಆದರೆ ಕೇವಲ ಭೌತಿಕ ಸೃಷ್ಟಿಯ ನಿರೀಕ್ಷಣ ಮತ್ತು ಭೌತಿಕ ಪದಾರ್ಥಗಳ ಮೇಲೆ ಮಾಡಿದ ಪ್ರಯೋಗ, ಇವುಗಳ ಮೇಲಿಂದಲೇ ಸಿದ್ಧ ಮಾಡಿದ ಮನೋಮಯ ಚೈತನ್ಯದ ಅಸ್ತಿತ್ವವು ಸ್ಥೂಲ ಶರೀರದ ಮೇಲೆಯೇ ಸಂಪೂರ್ಣವಾಗಿ ಅವಲಂಬಿಸಿರುವದಿಲ್ಲವೆಂಬ ಸಂಗತಿಯು ಈಗಿನ ವ್ಯಾಪಕ ಸಂಶೋಧನ ಮತ್ತು ನಿರೀಕ್ಷಣಗಳಿಂದ ಬೆಳೆದ ಜ್ಞಾನದಿಂದ ತಿಳಿದು ಬರುತ್ತದೆ. ಮಾನವನ ವ್ಯಕ್ತಿತ್ವವು ಮನುಷ್ಯದೇಹದ ನಾಶವಾದೊಡನೆಯೇ ನಾಶವಾಗದೆ, ಅದು ಸ್ಥೂಲದೇಹದ ನಾಶವಾದ ನಂತರವೂ ಈ ಸೃಷ್ಟಿಯಲ್ಲಿ ಮತ್ತು ಇತರ ಸೃಷ್ಟಿಗಳಲ್ಲಿ ಅಲೆದಾಡುತ್ತಿರುತ್ತದೆಂದು ಸಿದ್ಧವಾಗಿದೆ. ಇದರಿಂದ ಆಧುನಿಕರ ಈ ಸಂಕುಚಿತ ವಿಚಾರಕ್ಕೆ ಜೋರಾದ ಪೆಟ್ಟು ತಗಲುತ್ತದೆ. ಈ ನಿಶ್ಚಿತವಾದ ಸಂಗತಿಯಿಂದ ಭೌತಿಕ ಶಾಸ್ತ್ರಜ್ಞರಿಗೆ ತಮ್ಮ ಈ ಸಂಕುಚಿತ ತಿಳುವಳಿಕೆಯನ್ನು ಹೆಚ್ಚು ವ್ಯಾಪಕಮಾಡಿ ಸ್ಥೂಲ ಶರೀರದ ಮೇಲೆಯೇ ಕೇವಲ ಅವಲಂಬಿಸಿರದ ಜೀವನ ವ್ಯಕ್ತಿತ್ವವನ್ನು ಒಪ್ಪಬೇಕಾಗುವದು. ಜ್ಞಾನಶಕ್ತಿಯುಳ್ಳ ಜೀವಾತ್ಮನ ಮನೋಮಯ ವ್ಯಕ್ತಿತ್ವವು ಅತಿಸೂಕ್ಷ್ಮವಾದ ರೂಪದಲ್ಲಿ ಸ್ಥೂಲಶರೀರದ ಉತ್ಪತ್ತಿಯ

ಮೊದಲು ತಯಾರಾಗಿಯೇ ಇರಬೇಕೆಂದೂ, ಈ ಮಾನಸಿಕ ವ್ಯಕ್ತಿತ್ವವುಳ್ಳ ಜೀವವು ಸ್ಥೂಲ ಶರೀರವು ಹುಟ್ಟುವ ಮೊದಲಾಗಲಿ, ಹುಟ್ಟುವ ಕಾಲಕ್ಕಾಗಲಿ ಅಥವಾ ಹುಟ್ಟಿದ ಮೇಲಾಗಲಿ ಅದನ್ನು ಪ್ರವೇಶಿಸುವದೆಂದೂ ಹೇಳಬಹುದು. ಅಥವಾ ಹೆಚ್ಚು ಸ್ಪಷ್ಟವಾಗಿ ಹೇಳಬೇಕಾದರೆ ಇತರ ಲೋಕಗಳಲ್ಲಿ ಸೂಕ್ಷ್ಮವಾದ ಮನೋಮಯ ವ್ಯಕ್ತಿತ್ವದಿಂದ ಜೀವಾತ್ಮನು ಇರುತ್ತಿದ್ದು, ಈ ಲೋಕಕ್ಕೆ ಅವನು ಅಲ್ಪಕಾಲ ವಾಸಿಸುವ ಉದ್ದೇಶದಿಂದ ಬರಬಹುದೆಂದಾಗಲಿ, ಅಥವಾ ಸೃಷ್ಟಿಯ ಉತ್ಕ್ರಾಂತಿಯ ನಿಯಮದ ಪ್ರಕಾರ, ಇಲ್ಲಿಯೇ ಅವನಿಗೆ ಈ ವ್ಯಕ್ತಿತ್ವವು ಉಂಟಾಗಿ, ಜೀವನು ಜನ್ಮ ಮರಣ ಚಕ್ರದಲ್ಲಿ ಸಿಗುವನೆಂದಾಗಲಿ ಊಹಿಸಬಹುದು ಹೀಗಾದಲ್ಲಿ ಈ ಮನುಷ್ಯ ದೇಹವನ್ನು ಪ್ರವೇಶಿಸುವ ಮೊದಲು ವಿಶ್ವಜೀವನ ತತ್ವದಲ್ಲಿ ನಮ್ಮ ಈ ವ್ಯಕ್ತಿತ್ವವು ಬೆಳವಣಿಗೆ ಹೊಂದಿರಬಹುದು. ಅಥವಾ ಈ ಸೃಷ್ಟಿಯಲ್ಲಿಯ ನೀಚ ಯೋನಿಗಳಲ್ಲಿಯೇ ಬೆಳೆದು ಈ ಮನುಷ್ಯ ದೇಹವನ್ನು ಹೊಂದಿರಬಹುದು. ನಮ್ಮ ಈ ಜೀವವು ಪಶುದೇಹಗಳಲ್ಲಿಯೂ ಮೊದಲು ವಾಸಿಸಿರಬೇಕು. ಇದರ ಮೇಲಿಂದ ಜೀವಕ್ಕೆ ಯಾವ ದೇಹವು ಪ್ರಾಪ್ತವಾಗುವದೋ, ಅದರಲ್ಲಿ ಅದು ಪೂರ್ಣವಾಗಿ ಸಮರಸವಾಗುವದೆಂದು ಹೇಳಬಹುದು. ಅಥವಾ ಉತ್ಕ್ರಾಂತಿಯಲ್ಲಿ ಸಿಕ್ಕ ಜೀವವು ಹೆಚ್ಚುಕಾಲ ಬಾಳುವ ಸೂಕ್ಷ್ಮದೇಹವನ್ನು ತಯಾರುಮಾಡಿಕೊಂಡು ಮನುಷ್ಯದೇಹವು ಉತ್ಪನ್ನವಾದೊಡನೆಯೇ, ಅದನ್ನು ಅದು ಪ್ರವೇಶಿಸಿರಬಹುದು ಸ್ಥೂಲ ದೇಹದಲ್ಲಿಯೇ ಸೂಕ್ಷ್ಮ ಮನೋಮಯ ಕೋಶದ ಬೆಳವಣಿಗೆಯಾಗಿ, ಅದರಲ್ಲಿಯ ಜ್ಞಾನಶಕ್ತಿಯೂ ಅಭಿವೃದ್ಧಿ ಹೊಂದುವದರಿಂದ ಸಂತತ ವ್ಯಕ್ತಿತ್ವವು ಮನುಷ್ಯನ ಸ್ಥೂಲದೇಹದಲ್ಲಿಯೇ ಜೀವನಿಗೆ ಉಂಟಾಗಿರಬಹುದು. ಮೇಲಿನ ಕಲ್ಪನೆಯ ಪ್ರಕಾರ, ಪಶುಗಳು ಕೂಡ ತಮ್ಮ ಸ್ಥೂಲ ದೇಹವು ನಷ್ಟವಾದ ನಂತರ, ಸೂಕ್ಷ್ಮಶರೀರದಿಂದ ಉಳಿಯುವವೆಂದೂ ಮತ್ತು ಅವು ಇತರ ಪಶು ಶರೀರಗಳನ್ನು ಪ್ರವೇಶಿಸಿ ಅಂತ್ಯದಲ್ಲಿ ಮನುಷ್ಯ ದೇಹವನ್ನು ಹೊಂದುವವೆಂದೂ ತಿಳಿದು ಬರಬಹುದು. ಆದರೆ, ಮನುಷ್ಯತ್ವವನ್ನು ಸಂಪಾದಿಸಿದ ಹೊರತು ಪಶುಜೀವಗಳಿಗೆ ಪರಲೋಕವಾಸದ ಸಾಮರ್ಥ್ಯವು ಉಂಟಾಗುವದೆಂದು ಕಲ್ಪಿಸಲಿಕ್ಕೆ ಅನುವಿಲ್ಲ. ಎರಡನೆಯ

ಕಲ್ಪನೆಯ ಪ್ರಕಾರ, ಸ್ಥೂಲ ಶರೀರದ ನಂತರ ಬಾಳತಕ್ಕ ಸೂಕ್ಷ್ಮ ಶರೀರವು ಮನುಷ್ಯ ದೇಹವನ್ನು ಪಡೆಯಲಿಕ್ಕೆ ಸಮರ್ಥವಾದ ನಂತರವೇ ಉಳಿಯುವ ದೆಂದು ಹೇಳಬಹುದು.

ಗ್ರೀಕ ತತ್ವಜ್ಞಾನಿಯಾದ ಪಾಯಥೇಗೋರಸ ಈತನು ಸತ್ಯಸ್ವರೂಪ ನಾದ ಜೀವನು ಒಂದು ನಶ್ವರ ದೇಹವನ್ನು ಬಿಟ್ಟು ಮತ್ತೊಂದು ದೇಹ ವನ್ನು ಪ್ರವೇಶಿಸುವನೆಂದು ನಂಬುತ್ತಾನೆ. ಆದರೆ ಅವನ ಕಲ್ಪನೆಯ ಪ್ರಕಾರ, ಈ ಜನ್ಮಾಂತರವು ಜೀವನ ಉತ್ಕ್ರಾಂತಿಯ ಅವಶ್ಯವಾದ ಸಾಧನವಾಗಿರದೆ, ಅದೊಂದು ಅವಿನಾಶೀ ಜೀವನ ಕಾರ್ಯಕ್ರಮದ ಭಾಗ ವಾಗಿದೆ ಆದರಲ್ಲಿ ಪರಲೋಕದ ಭಾವನೆಯೂ ಇಲ್ಲ. ಒಂದು ಸ್ಥೂಲ ದೇಹವನ್ನು ತ್ಯಜಿಸಿ ಮತ್ತೊಂದನ್ನು ಪರಿಧಾನ ಮಾಡುವದು ಅವನ ಕಾರ್ಯಕ್ರಮವಾಗಿದೆ ಆದರೆ ಆರ್ಯ ವೈದಿಕ ತತ್ವಜ್ಞಾನದ ಪ್ರಕಾರ ಜೀವನ ಪುನರ್ಜನ್ಮವು ಈ ವಿಶ್ವದಲ್ಲಿ ಕಂಡುಬರುವ ಜೀವನ ಉತ್ಕ್ರಾಂತಿಯ ಒಂದು ಅವಶ್ಯವಾದ ಅಂಗವಾಗಿದ್ದು ಈ ಸ್ಥೂಲ ದೇಹವನ್ನು ತ್ಯಜಿಸಿದ ನಂತರ ಜೀವನು ಸೂಕ್ಷ್ಮದೇಹದಿಂದ ಪರಲೋಕಗಳಲ್ಲಿ ವಾಸಿಸಿ ಪುನಃ ಈ ಲೋಕಕ್ಕೆ ಬರುವನು. ಆದರೆ ಜೀವನು ಈ ಲೋಕಕ್ಕೆ ತಿರುಗಿ ಬರುವದು ಅವಶ್ಯವೇ ಇದೆ ಎಂದು ಮಾತ್ರ ಹೇಳಲಿಕ್ಕೆ ಬರುವದಿಲ್ಲ. ಪುನಃ ಈ ಲೋಕಕ್ಕೆ ಬರಲಿಕ್ಕೆ ವಿಶಿಷ್ಟ ಕಾರಣವಿದ್ದ ಹೊರತು ಅವನು ಇಲ್ಲಿಗೆ ಬಂದೇ ತೀರುವನೆಂದು ಹೇಳುವದು ಶಕ್ಯವಿಲ್ಲ. ಅವನು ತನ್ನ ಉತ್ಕ್ರಾಂತಿಯನ್ನು ಅಲ್ಲಿಂದಲೇ ಮುಂದೆ ಸಾಗಿಸಬಹುದು.

ಚೈತನ್ಯವು ಮನಸ್ಸಿನ ಸ್ವಭಾವವೆಂದು ಕೆಲವರ ಅಭಿಪ್ರಾಯವಿದೆ ಈ ಪ್ರಕಾರದ ಮನೋಮಯ ಜೀವನ ಉತ್ಕ್ರಾಂತಿಯಲ್ಲಿ ಸ್ವತಂತ್ರ ಅವಿನಾಶಿ ಯಾದ ಚೈತನ್ಯವು ಇರಲಾರದು. ಈ ಚೈತನ್ಯಯುಕ್ತ ವ್ಯಕ್ತಿತ್ವವು ಜೀವಕ್ಕೆ ಭೌತಿಕ ಪದಾರ್ಥಗಳ ಕ್ರಿಯೆಯಿಂದಾಗಲಿ, ಅಥವಾ ಮಾಯೆಯಿಂದಾಗಲಿ ಉಂಟಾಗಬಹುದು. ಆದ್ದರಿಂದ ಈ ಚೈತನ್ಯವು ವಿನಾಶಿಯಾಗಬಹುದು. ಬೌದ್ಧದರ್ಶನಕಾರರು ಪರಲೋಕ ಮತ್ತು ಕರ್ಮವಿಪಾಕವನ್ನು ಒಪ್ಪಿ-ದಾಗ್ಯೂ ಜೀವಾತ್ಮನು ಅವಿನಾಶಿ ಚೇತನ ವ್ಯಕ್ತಿಯಾಗಿರುವನೆಂದು ಅವರು

ತಿಳಿಯುವದಿಲ್ಲ. ಕ್ಷಣಕ್ಷಣಕ್ಕೂ ಬದಲಾಗುತ್ತಿರುವ ಪ್ರವಾಹ ರೂಪದ ಜ್ಞಾನವು ಮನಸ್ಸಿನ ಗುಣವೆಂದು ಅವರು ಅನ್ನುತ್ತಾರೆ. ಪರಲೋಕ ಗಮನದ ಕಲ್ಪನೆಯನ್ನು ಬೌದ್ಧರು ಹಿಂದುಸ್ಥಾನದಲ್ಲಿ ಅನಾದಿಕಾಲದಿಂದ ಪ್ರಚಲಿತವಾಗಿದ್ದ ವಿಚಾರವಾಹಿನಿಯಿಂದ ತೆಗೆದುಕೊಂಡಿರುವರು. ಅದು ಬೌದ್ಧ ತತ್ವಜ್ಞಾನದ ಒಂದು ಅವಶ್ಯವಾದ ಭಾಗವಿರುವದಿಲ್ಲ ಅವಿನಾಶಿ ಆತ್ಮವು ಬೌದ್ಧರಿಗೆ ಸಮ್ಮತವಿಲ್ಲ. ವೈದಿಕ ಮಾಯಾವಾದದಲ್ಲಿ ಆತ್ಮನ ಅಸ್ತಿತ್ವವನ್ನು ಒಪ್ಪಿದಾಗ್ಯೂ, ವ್ಯಕ್ತಿಯ ಜೀವನವು ಮಾಯಿಕ ಅರ್ಥಾತ್ ಅಸತ್ಯವಾಗುವದು. ಜನ್ಮ, ಮರಣ, ಪುನರ್ಜನ್ಮ, ಪರಲೋಕ ಇವೆಲ್ಲವೂ ಮಾಯಿಕವೇ ಇದ್ದು, ಬ್ರಹ್ಮಜ್ಞಾನವಾಗುವವರೆಗೇ ಇವು ಸತ್ಯವಾಗಿ ತೋರುತ್ತವೆ. ವೈದಿಕ ವಿಚಾರಸರಣಿಯಲ್ಲಿ ಮತ್ತೊಂದು ಪ್ರಕ್ರಿಯೆಯು ಕಂಡುಬರುತ್ತದೆ. ಅದರ ಪ್ರಕಾರ ಅನಾದಿ ಸತ್ಯವಸ್ತುವೇ ಸತ್ಯ ಜಗತ್ತನ್ನೂ ಜೀವಜಾತಗಳನ್ನೂ ತನ್ನಿಂದಲೇ ನಿರ್ಮಿಸುತ್ತದೆ ಜೀವನ ವ್ಯಕ್ತಿತ್ವವು ಸತ್ಯವಿದ್ದು ಅವನು ಈ ಜನನ–ಮರಣ ಚಕ್ರಕ್ಕೆ ಈಶನ ಇಚ್ಛೆಯಿಂದಲೇ ಒಳಗಾಗಿರುವನು. ಪುನರ್ಜನ್ಮವು ಈ ಸಿದ್ಧಾಂತದ ಪ್ರಕಾರ ಸತ್ಯವಾದ ಜಗತ್ತಿನ ನಿಯಮವಿದ್ದಾಗ್ಯೂ, ಅದು ವ್ಯಕ್ತಿ ಮತ್ತು ಜಗತ್ತಿನ ಉತ್ಪತ್ತಿಯ ಉದ್ದೇಶ ಅರ್ಥಾತ್ ವ್ಯಷ್ಟಿ ಸಮಷ್ಟಿಗಳಲ್ಲಿಯ ಅವಶ್ಯವಾಗಿದ್ದ ಸಂಬಂಧ ದಿಂದ ಉಂಟಾದದ್ದಲ್ಲ. ಯಾಕಂದರೆ, ಜಗತ್ತಿನ ಉತ್ಪತ್ತಿಯ ಕಾರಣವು ಈಶನ ಇಚ್ಛೆಯು ಹೊರತು ಮತ್ತೇನೂ ಇರದ್ದರಿಂದ, ವ್ಯಕ್ತಿಯ ಅಸ್ತಿತ್ವಕ್ಕೆ ಪುನರ್ಜನ್ಮದ ಅವಶ್ಯಕತೆ ಇರುವದಿಲ್ಲ. ಈಶನು ತನ್ನ ಇಚ್ಛೆಯಿಂದ ವಿನಾಶಿ ಯಾದ ಜೀವಗಳನ್ನು ನಿರ್ಮಾಣಮಾಡಿ ಜಗತ್ತಿನ ಆಟವನ್ನು ಹೂಡ ಬಹುದು. ಸಮುದ್ರದಲ್ಲಿ ಒಂದರ ಹಿಂದೊಂದು ತೆರೆಗಳು ಉತ್ಪನ್ನವಾಗಿ ಅಲ್ಲಿಯೇ ಲೀನವಾಗುವಂತೆ, ಜೀವವು ಈ ಜಗತ್ತಿನ ಕಡಲಿನಲ್ಲಿ ಉತ್ಪನ್ನ ವಾಗಿ ಅಲ್ಲಿಯೇ ನಷ್ಟವಾಗಬಹುದು. ಇಲ್ಲಿಯೂ ಒಂದು ವಿಶಿಷ್ಟ ವ್ಯಕ್ತಿತ್ವ ವುಳ್ಳ ಅವಿನಾಶಿ ಜೀವದ ಅಸ್ತಿತ್ವವು ಅವಶ್ಯವಿರುವದಿಲ್ಲ.

ಆದರೆ ಜೀವಾತ್ಮನು ಅತ್ಯಂತ ಅಜ್ಞಾನದಲ್ಲಿ ಪ್ರಕಟನಾಗಿ ಉತ್ಕ್ರಾಂತಿ ಯಿಂದ ಅವನ ಬೆಳವಣಿಗೆಯು ಪೂರ್ಣಜ್ಞಾನಸ್ವರೂಪದ ವರೆಗೆ ಸಾವಕಾಶ

ವಾಗಿ ಆಗುತ್ತಿರುವದೇ ಜಗತ್ತಿನಲ್ಲಿ ಕಂಡುಬರುವ ಚರಾಚರ ಸೃಷ್ಟಿಯ ನಿಯಮವಾಗಿರುತ್ತದೆಂದು ತಿಳಿದರೆ ಜೀವಾತ್ಮನಿಗೆ ತನ್ನ ಈ ಅಂತಿಮ ಧ್ಯೇಯವನ್ನು ಸಾಧಿಸುವದಕ್ಕೆ ತನ್ನ ವ್ಯಕ್ತಿತ್ವವನ್ನು ಅಳಿಯದೆ ಹಾಗೆಯೇ ಇಟ್ಟುಕೊಂಡು, ವಿನಾಶಿಯಾದ ಈ ಸ್ಥೂಲದೇಹವನ್ನು ಪುನಃ ಪುನಃ ತ್ಯಜಿಸಿ, ತನ್ನ ಉದ್ದೇಶವು ಸಫಲವಾಗುವವರೆಗೆ ಮೇಲಿಂದ ಮೇಲೆ ಜನ್ಮ ವನ್ನು ತಾಳಬೇಕಾಗುವದೆಂಬದು ಸಿದ್ಧವಾಗುತ್ತದೆ. ಈ ಮಾತನ್ನು ಹೆಚ್ಚು ಸ್ಪಷ್ಟವಾಗಿ ಹೇಳುವದಾದರೆ, ಈ ಜಗತ್ತು ಏಕಮೇವಾದ್ವಿತಿಯ ಪರಬ್ರಹ್ಮ ವಸ್ತುವಿನ ಪ್ರಕಟನೆಯು ಅಥವಾ ದೃಶ್ಯರೂಪಕ್ಕೆ ಬರವ ಪದ್ಧತಿಯಿದ್ದು, ಜಗತ್ತಿನಲ್ಲಿ ಕಂಡುಬರುವ ಎಲ್ಲ ಚರಾಚರ ವಸ್ತುವು ಆದ್ಯ ಸದ್ವಸ್ತುವಿನ ರೂಪವೇ ಆಗಿರುವದು. ಕೇವಲ ಶಕ್ತಿ, ಕೇವಲ ಜ್ಞಾನ ಮತ್ತು ಕೇವಲ ಆನಂದ ಇವೇ ಈ ದೃಶ್ಯ ಜಗತ್ತಿನ ಆಂತರಿಕ ರಹಸ್ಯವಿದ್ದು, ಇದೇ ಅಂತಿಮ ಸತ್ಯವಾಗಿದೆ. ಈ ಸಚ್ಚಿದಾನಂದ ಸ್ವರೂಪವಾದ ಪರಬ್ರಹ್ಮ ವಸ್ತುವು ತನ್ನ ಪ್ರಕೃತಿ, ( ಶಕ್ತಿ ) ಯಿಂದ ಈ ವಿಶ್ವವನ್ನು ನಿರ್ಮಿಸಿತು. ಆದರೆ ಅದು ತನ್ನ ಅನಿರ್ಬಂಧ ರೂಪವನ್ನು ಬಿಟ್ಟು ಮರ್ಯಾದಿತವಾದ ಮತ್ತು ನಮಗೆ ಪ್ರತ್ಯಕ್ಷ ತಿಳಿದುಬರುವ ಬುದ್ಧಿ–ಪ್ರಾಣ ಮತ್ತು ಪಂಚಮಹಾಭೂತಗಳಾಗಿ ಈ ಸೃಷ್ಟಿರೂಪದಿಂದ ಪ್ರಕಟವಾಯಿತು ಈ ಪರಮಾತ್ಮನ ಪ್ರಕಟ ಸ್ವರೂಪದಲ್ಲಿ ಎಲ್ಲಕ್ಕಿಂತ ಕೆಳಗಿನ ಮೆಟ್ಟಲೆಂದರೆ ಪಂಚಮಹಾಭೂತಗಳು— ಅತ್ಯಂತ ಅಜ್ಞಾನದಲ್ಲಿ ಅವಕ್ರಾಂತವಾದ ಅವನ ಅಚೇತನ ರೂಪವು. ಈ ಅಚೇತನ ರೂಪದಿಂದ ಬೇಳೆಯುತ್ತ ಹೋಗಿ ಕೇವಲ ಚೇತನ ಅಥವಾ ಜ್ಞಾನ ರೂಪವನ್ನು ಹೊಂದುವದೇ ಈ ವಿಶ್ವದ ಉತ್ಕ್ರಾಂತಿಯ ಸರಣಿಯು. ಅವಕ್ರಾಂತವಾದ ಪ್ರತಿಯೊಂದು ವಸ್ತುವಿಗೆ ಉತ್ಕ್ರಾಂತಿಯನ್ನು ಹೊಂದದೆ ಗತ್ಯಂತರವಿಲ್ಲ. ಏಕೆಂದರೆ, ಈ ಎಲ್ಲ ವಸ್ತುಗಳು ಬರಿಯ ಅಸ್ತಿತ್ವರೂಪದಿಂ ದಷ್ಟೇ ಇರದೆ ಅವುಗಳಲ್ಲಿ ಜ್ಞಾನ ಮತ್ತು ಆನಂದ ಶಕ್ತಿಗಳೂ ಅಡಕವಾಗಿವೆ. ಈ ಹೆಚ್ಚಿನ ಮೆಟ್ಟಲುಗಳನ್ನು ಏರಿ ತನ್ನ ನಿಜಸ್ವರೂಪವನ್ನು ಪ್ರಕಟಗೊಳಿಸು ವದೇ ಈ ಸೃಷ್ಟಿಯ ಉದ್ದೇಶವಾಗಿರಲಿಕ್ಕೆ ಬೇಕು. ತನ್ನ ಚೇತನ ಸ್ವರೂಪ ವನ್ನು ಕಳೆದುಕೊಂಡ ಅಜ್ಞಾನರೂಪ ಅಚೇತನ ಸೃಷ್ಟಿಯ ಓಘವು ಜ್ಞಾನ-ರೂಪನಾದ ಪರಮಾತ್ಮನ ಕಡೆಗೇ ಇರಬೇಕೆನ್ನುವದು ಕ್ರಮಪ್ರಾಪ್ತವಾಗಿದೆ.

ಆದರೆ ಆರಂಭದಲ್ಲಿ ಈ ಉತ್ಕ್ರಾಂತಿಯು ನಿಸರ್ಗದ ಒತ್ತರದಿಂದ ಆದಾಗ್ಯೂ ಮುಂದಿನ ಪ್ರಗತಿಯು ಈ ತತ್ವವನ್ನು ಚನ್ನಾಗಿ ಅರಿತು ಅದನ್ನು ಅನುಸರಿಸುವಷ್ಟು ಸಾಮರ್ಥ್ಯವು ವ್ಯಕ್ತಿಯಲ್ಲಿ ಉಂಟಾದ ಹೊರತು ಅದು ವೇಗದಿಂದ ಸಾಗಲಾರದು. ತನ್ನ ಸತ್ಯ ಸ್ವರೂಪವನ್ನು ತಿಳಿದುಕೊಳ್ಳುವ ಸಾಮರ್ಥ್ಯವು ವಿವೇಕ ಜ್ಞಾನವನ್ನು ಪಡೆದ ವ್ಯಕ್ತಿತ್ವಯುಕ್ತ ಮನುಷ್ಯನಿಗೇ ಉಂಟಾಗುತ್ತದೆ ತಿಳುವಳಿಕೆ ಇಲ್ಲದ, ವ್ಯಕ್ತಿತ್ವರಹಿತ, ಕತ್ತಲೆಯಂತೆ ವಿವೇಕಶೂನ್ಯವಾದ, ಅಜ್ಞಾನದಿಂದ ಆರಂಭವಾಡಿ ಉತ್ಕ್ರಾಂತಿಯ ಶ್ರೇಣಿಯ ಒಂದೊಂದೇ ಮೆಟ್ಟಿಲನ್ನು ಏರುತ್ತಿರುವ ಜೀವನಿಗೆ, ಹೆಚ್ಚು ಹೆಚ್ಚು ಪ್ರಗತಿಯನ್ನು ಹೊಂದಿದಂತೆ ಈ ಅವಿನಾಶಿ ವ್ಯಕ್ತಿತ್ವದ ಮಹತ್ವವು ಎಷ್ಟು ಇರುವದೆಂಬದು ಸರ್ವಗೆ ಸುಲಭವಾಗಿ ತಿಳಿಯಬಹುದು. ಈ ವ್ಯಕ್ತಿತ್ವವುಳ್ಳ ಜೀವಾತ್ಮನು ಪರಮಾತ್ಮನಷ್ಟೇ ಅನಾದಿಯೂ, ಅವ್ಯಯನೂ, ಅದ್ವಿತೀಯ ವಸ್ತುವಿನ ಸ್ವರೂಪಭೂತನಾದವನೂ ಆಗಿದ್ದರೇ ಈ ವ್ಯಕ್ತಿತ್ವದ ಮಹತ್ವವು ಒಡೆದು ಕಾಣುತ್ತದೆ. ಈ ಜೀವಾತ್ಮನು ತನ್ನ ಸತ್ಯ ಸ್ವರೂಪದ ಸಂಶೋಧನೆಯಿಂದ ಜಗತ್ತಿನ ಆತ್ಮನೂ, ಪೂರ್ಣ ಜ್ಞಾನಮಯನೂ, ಆದ ಪರಮಾತ್ಮನನ್ನು ಕಾಣುವದೇ ವಿಶ್ವರಚನೆಯಲ್ಲಿಯ ಗುರಿಯೆಂದು ನಾವು ಭಾವಿಸಿದರೇ, ಅವನ ವ್ಯಕ್ತಿತ್ವದ ಬೆಳವಣಿಗೆಗೆ ತರ್ಕಶುದ್ಧವಾದ ಗತ್ಯಂತರವಿಲ್ಲದ ಕಾರಣವನ್ನು ತೋರಿಸಬಹುದು. ಈ ಸಿದ್ಧಾಂತವನ್ನು ನಾವು ಸ್ವೀಕರಿಸುವದರಿಂದಲೇ ಅವಿನಾಶಿ ವ್ಯಕ್ತಿತ್ವವು ಅದರ ಮೊದಲನೆಯ ಪ್ರಮೇಯವಾಗುವದು. ಪುನರ್ಜನ್ಮವು ಇದರಿಂದ ಒಂದು ಬರೇ ಶಕ್ಯಸಂಗತಿಯಾಗಿರದೆ, ನಮ್ಮ ಅಸ್ತಿತ್ವದ ಉದ್ದೇಶ ಸಾಧನೆಯಲ್ಲಿ ಅದೊಂದು ಅತ್ಯವಶ್ಯವಾದ ಸಾಧನವಾಗುವದು.

ನಾವು ಮೇಲೆ ಹೇಳಿದ ಸಿದ್ಧಾಂತದ ಸಾಧನೆಗೆ ಚೇತನ ಜೀವಾತ್ಮನ ಹಿಂದೆ ಒಂದು ಮಾಯಿಕ ಭಂಗುರವಾದ ವ್ಯಕ್ತಿತ್ವವನ್ನು ಕಲ್ಪಿಸಿದರೆ ಸಾಲದು. ಈ ವ್ಯಕ್ತಿತ್ವವು ಸ್ಥೂಲದೇಹದಲ್ಲಿ ಕಂಡುಬರುವ ಚೈತನ್ಯದ ಸಂಗಡವೇ ಹುಟ್ಟಿ ಅದರ ಸಂಗಡವೇ ತನ್ನ ಆಟವನ್ನು ಮುಗಿಸಬಹುದು, ಅಥವಾ ಮುಗಿಸದೇ ಇರಬಹುದೆಂದೂ, ಒಂದು ಸ್ಥೂಲ ಶರೀರದಿಂದ ಮತ್ತೊಂದು

ಸ್ಥೂಲ ಶರೀರಕ್ಕೆ ಈ ವ್ಯಕ್ತಿತ್ವವು ಪ್ರಯಾಣಮಾಡಬಹುದು, ಅಥವಾ ಮಾಡದೆ ಇರಬಹುದೆಂದೂ, ಅನ್ನುವ ಅನಿಶ್ಚಿತತೆಯು ಈ ನಮ್ಮ ಸಿದ್ಧಾಂತಕ್ಕೆ ಸರಿಹೋಗುವದಿಲ್ಲ. ಈ ಸ್ಥೂಲ ಜಗತ್ತಿನಲ್ಲಿ ಒಂದು ಆಕಾರವು ನಷ್ಟವಾಗಿ ಮತ್ತೊಂದು ಆಕಾರವು ಉತ್ಪನ್ನವಾಗುವದನ್ನೂ, ಆ ಆಕಾರದ ಸಂಗಡವೇ ವ್ಯಕ್ತಿತ್ವವು ನಷ್ಟವಾಗುವದನ್ನೂ, ನಾವು ಮೇಲೆ ಮೇಲೆ ಕಾಣುತ್ತೇವೆ. ಆದರೆ ಇದೊಂದು ಕೇವಲ ಬಾಹ್ಯದೃಷ್ಟಿಯಾಗಿರುತ್ತದೆ. ಇದು ಬಾಹ್ಯ ವಿಶ್ವವು ಪ್ರಕಟವಾಗುವ ಒಂದು ಸ್ಥೂಲ ಸ್ವರೂಪವಾಗಿರಬಹುದು. ಆದರೆ ಜೀವನ ವ್ಯಕ್ತಿತ್ವ-ಜ್ಞಾನವು ಅನಂತಕಾಲದ ವರೆಗೆ ಉಳಿಯುವ ಸತ್ಯವಸ್ತುವೂ, ಒಂದೇ ಒಂದಾದ ಅವ್ಯಯ ವಸ್ತುವಿನ ಅಂಶವೂ ಆಗಿದ್ದ ಪಕ್ಷಕ್ಕೆ, ಆತ್ಮಜ್ಞಾನದ ಅಭಿವೃದ್ಧಿಯು ಪ್ರತಿಯೊಂದು ಚರಾಚರ ವಸ್ತುವಿನ ಹೃದ್ಗತವನ್ನು ವ್ಯಕ್ತಮಾಡುವ ಸಾಧನವೂ, ಆಗಿದ್ದ ಪಕ್ಷಕ್ಕೆ, ಈ ದೃಶ್ಯಮಾನ ಚರಾಚರ ವಿಶ್ವವು ಅನಂತನಾಮರೂಪಗಳನ್ನು ತಾಳಿದ ಸಚ್ಚಿದಾನಂದ ಪರಮಾತ್ಮನೇ ಎಂದು ಹೇಳಬೇಕಾಗುವದು ಅಂದ ಮೇಲೆ ನಮ್ಮ ಈ ವ್ಯಕ್ತಿತ್ವದ ಸಂಕೋಚ ವಿಕೋಚಕ್ಕೆ ಆಧಾರಭೂತನಾಗಿ ಮತ್ತು ಪ್ರತಿಕ್ಷಣವೂ, ಬದಲಾಗುತ್ತಿರುವ ಸ್ಥೂಲವಿಶ್ವದ ಪ್ರವಾಹದ ಹಿಂದೆ ಸಾಕ್ಷೀಭೂತನಾಗಿ ಪರಮಾತ್ಮನೊಬ್ಬನೇ ಇರುವನೆಂದು ಖಂಡಿತವಾಗಿ ಹೇಳಬೇಕಾಗುವದು. ವಿಶ್ವರೂಪದಿಂದ ಪ್ರಕಟವಾಗುವ ಕ್ರಿಯೆಯಲ್ಲಿ ಆದ್ಯವಸ್ತುವಾದ ಪರಮಾತ್ಮನೇ ಬಹುರೂಪದಿಂದ ಈ ವ್ಯಕ್ತಿತ್ವದಲ್ಲಿ ತನ್ನನ್ನು ತಾನೇ ವ್ಯಕ್ತಪಡಿಸಿಕೊಳ್ಳುವನು. ಈ ವ್ಯಕ್ತಿತ್ವದಲ್ಲಿಯೇ ಅವನು ತನ್ನ ವಿಶ್ವರೂಪವನ್ನೂ, ಅವ್ಯಯತ್ವವನ್ನೂ ತೋರಿಸುವನು. ಈ ಬಹು-ರೂಪದಿಂದ ಕಂಗೊಳಿಸುವ ವ್ಯಕ್ತಿತ್ವಕ್ಕೆ ಕೇವಲ ಒಂದೇ ಆದಿ ವಸ್ತುವು ಹಿನ್ನೆಲೆಯಾಗಿರಬೇಕು. ಈ ಎಲ್ಲ ಪ್ರಕಾರಗಳು ಅನೇಕದಲ್ಲಿ ಕಂಡುಬರುವ ಏಕತ್ವದ ಅಗಾಧಲೀಲೆಯು ; ಅನಾದ್ಯನಂತ ಸದ್ವಸ್ತುವಿನ ಮಾಯೆಯ ಗಾರುಡೀ ಆಟವು. ಇವೆಲ್ಲವೂ ತಮೋರೂಪ ಅಜ್ಞಾನದಿಂದ ಜ್ಯೋತಿರ್ಮಯ ಜ್ಞಾನದ ಕಡೆಗೆ ಸಾಗುತ್ತಿದ್ದ ಜಗತ್ತಿನ ನಿಯಮಬದ್ಧವಾದ ಉತ್ಕ್ರಾಂತಿಯು.

ಈ ಪ್ರಕಾರ ಆತ್ಮಸಾಕ್ಷಾತ್‌ಕಾರವೇ ಜಗದುತ್ಪತ್ತಿಯ ಮುಖ್ಯ ಹೇತುವಾಗಿರದಿದ್ದರೆ, ಇದು ಸಚ್ಚಿದಾನಂದ ಸ್ವರೂಪದ ಕೇವಲ ಉದ್ದೇಶ

ವಿಲ್ಲದ ಆಟವಾಗಿದ್ದರೆ, ಉತ್ಕ್ರಮವೂ, ಪುನರ್ಜನ್ಮವೂ, ಕಾರ್ಯರೂಪ ದಿಂದ ಪರಿಣಮಿಸುವದು ಅವಶ್ಯವಿರಲಿಲ್ಲ. ಆದರೆ ಏಕತ್ವವೇ ಮನಸ್ಸಿನ ರೂಪದಿಂದ ಅನೇಕತ್ವಕ್ಕೆ ಇಳಿದ ಕಾರಣ, ಕೇವಲ ಜ್ಞಾನಮಯ ವಸ್ತುವೇ ಅಜ್ಞಾನದಲ್ಲಿ ಧುಮುಕಿ ತನ್ನ ಅವಿನಾಶಿ ಏಕತ್ವವನ್ನು ಕಳೆದುಕೊಂಡ ಕಾರಣ, ಈ ವಿವಿಧತೆಯಿಂದ ಗೋಚರವಾಗುವ ಅನೇಕತ್ವವೇ ಸತ್ಯವೆಂದು ಭಾಸವಾಗುತ್ತಗೆ. ಈ ವಿವಿಧತೆಯ ಬೀಜವು ಮನಸ್ಸಿನಲ್ಲಿ ಜನ್ಮತಾಳಿದ ಅಹಂ ಕಾರದಲ್ಲಿ ವೃಕ್ಷರೂಪವಾಗಿ ಪರಿಣಮಿಸಿ, ಈ ವಿವಿಧತೆಯನ್ನ ಸ್ಥಿರಗೋಳಿಸಿದೆ. ಈ ಅಹಂಕಾರ ರೂಪನಾದ ಜೀವಾತ್ಮನು ತಾನು ಬಾಹ್ಯ ಜಗತ್ತಿನಿಂದ ಬೇರೆಯಾಗಿದ್ದೇನೆಂದು ತಿಳಿದುಕೊಳ್ಳುತ್ತಾನೆ ಸಚ್ಚಿದಾನಂದದ ಜ್ಞಾನ-ಮಯ ಕೃತಿಯು ಪ್ರಕೃತಿಯ ಅಜ್ಞಾನದಲ್ಲಿ ಇಳಿದು ಪಂಚಮಹಾಭೂತಗಳ ವಿವಿಧತೆಯಲ್ಲಿ ಗೋಚರವಾಗುತ್ತದೆ. ಈ ವಿವಿಧತೆಯು ಮಹಾಭೂತಗಳಲ್ಲಿ ಭದ್ರತೆಯನ್ನು ಹೊಂದುತ್ತದೆ. ಯಾಕಂದರೆ ಅದು ಏಕತ್ವದ ಜ್ಞಾನಕ್ಕೆ ಗೋಡೆಯಂತೆ ಸ್ಥಿರವಾದ ತಡೆಯನ್ನು ಉಂಟುಮಾಡಿದೆ. ಆದರೆ ಇದು ಪರಿಣಾಮತಃ ಜ್ಞಾನದ ಗತಿಯನ್ನು ತಡೆಗಟ್ಟಿದರೂ ಈ ತಡೆಯು ಕೇವಲ ಭಾಸಮಾನವಾದದ್ದೂ, ಅಂತೆಯೇ ನಾಶಹೊಂದುವದೂ, ಆಗಿರುತ್ತದೆ. ಜ್ಞಾನಮಯನಾದ ಪರಮಾತ್ಮನು ಈ ದೃಶ್ಯ ಜಗತ್ತಿನ ಹೊರಗೂ, ಒಳಗೂ ಮತ್ತು ಅದಕ್ಕೆ ಆಧಾರವಾಗಿಯೂ, ಇದ್ದೇ ಇರುವದರಿಂದ, ಈ ಜಗತ್ತಿನಲ್ಲಿ ಕಂಡುಬರುವ ಅಜ್ಞಾನವು ದೃಶ್ಯಮಾನವಾದ ಜಗತ್ತನ್ನು ಉಂಟುಮಾಡುವ ಕ್ರಿಯೆಯಲ್ಲಿ ತನ್ಮಯತೆಯನ್ನು ಹೊಂದಿ ತನ್ನನ್ನು ತಾನೇ ಮರೆತು, ಒಂದು ಅಗಾಧನಾದ ಮಡುವಿನಲ್ಲಿ ಮುಳುಗಿದಂತೆ ತೋರುವ ಜ್ಞಾನವೆಂದೇ ಹೇಳ ಬೇಕಾಗುವದು. ಈ ಪ್ರಕಾರ ಉತ್ಪನ್ನವಾದ ಈ ಜಗತ್ತಿನಲ್ಲಿ ಅನೇಕತ್ವ ವನ್ನು ಹೊಂದಿದ ನಾಮರೂಪಗಳೇ ಜೀವಾತ್ಮನ ಕಾರ್ಯಕ್ಷೇತ್ರವು. ಆದ್ದರಿಂದ ಜೀವನು ಈ ವಿವಿಧ ನಾಮರೂಪಗಳನ್ನಾಶ್ರಯಿಸಿಯೇ ಈ ಜಗತ್ತಿನಲ್ಲಿ ಆದ್ಯ ಏಕತ್ವದ ಸಂಬಂಧವನ್ನು ಪಡೆದುಕೊಳ್ಳಬೇಕಾಗುವದು. ಅಂದರೆ ಜೀವನು ಪೂರ್ಣತ್ವಕ್ಕೆ ಮುಟ್ಟಬೇಕಾದರೆ ಈ ಸ್ಥೂಲ ಶರೀರದ ಆಶ್ರಯದಿಂದಲೇ ಅವನಿಗೆ ತನ್ನ ಮನಸ್ಸು, ಪ್ರಾಣ, ಮತ್ತು ಆತ್ಮದ ಬೆಳವಣಿಗೆಯ ಪ್ರಯತ್ನವನ್ನು ಆರಂಭಿಸಬೇಕಾಗುವದು. ಜೀವನು ಈ ಪ್ರಕಾರದ ಸ್ಥೂಲ

ದೇಹವನ್ನು ಹೊಂದುವದೇ ಜನ್ಮವು. ಮತ್ತು ಜನ್ಮದಿಂದಲೇ ಅವನ ಉತ್ಕ್ರಾಂತಿಯು ಆಗಬಲ್ಲದು. ಜೀವ–ವ್ಯಕ್ತಿಯ ಸಂಬಂಧವು ಈ ವಿಶ್ವದ ಸಂಗಡವೂ ಇತರ ವ್ಯಕ್ತಿಗಳ ಸಂಗಡವೂ ಜನ್ಮದಿಂದಲೇ ಆಗಬಲ್ಲದು. ನಮ್ಮ ಮರ್ಯಾದಿತವಾದ ಜ್ಞಾನದ ಅಭಿವೃದ್ಧಿಯು ಪೂರ್ಣಜ್ಞಾನದ ಕಡೆಗೆ ಅಂದರೆ ಪರಮಾತ್ಮನ ಕಡೆಗೆ ಇದ್ದ ಗತಿಯಿಂದಲೇ ಸಾಧ್ಯವಾಗಬಲ್ಲದು. ಈ ಜಗತ್ತಿನಲ್ಲಿ ನಾವು ಜೀವವೆಂದು ಕರೆಯುವ ವಸ್ತುವು ಮರ್ಯಾದಿತ ರೂಪವನ್ನು ತಾಳಿದ, ಪರಮಾತ್ಮನ ಕಡೆಗೆ ಹೊರಟ ಆತ್ಮನ ಗತಿಯೆಂದು ಹೇಳಬಹುದು. ಈ ಗತಿಯು ಸ್ಥೂಲ ದೇಹದಲ್ಲಿ ಪ್ರಕಟವಾಗುವದರಿಂದ ಅದು ಅವನ ಪ್ರಯತ್ನದ ಮಧ್ಯಬಿಂದುವಾಗಿ, ಈ ದೇಹವು ನಷ್ಟವಾದ ನಂತರವೂ, ಈ ಪ್ರಯತ್ನದ ಪ್ರವಾಹವನ್ನು ಸಂತತವಾಗಿ ಮುಂದುವರಿಸ ಲಿಕ್ಕೆ ಅವಶ್ಯವಿದ್ದ, ಭೂತ, ವರ್ತಮಾನ, ಮತ್ತು ಭವಿಷ್ಯತ್‌ಕಾಲಗಳಲ್ಲಿ ಸಂಬಂಧವನ್ನು ಉಂಟುಮಾಡುವ, ವ್ಯಕ್ತಿತ್ವಕ್ಕೆ ಈ ಸ್ಥೂಲದೇಹವೇ ಕಾರಣವಾಗುವದೆಂದು ಅನ್ನಬಹುದು.

ಈ ಜಗತ್ತಿನಲ್ಲಿ ಜೀವಾತ್ಮನ ಆವಿರ್ಭಾವವು ಜನ್ಮದಿಂದಲೇ ಆಗ ಬೇಕೆಂದು ಸಿದ್ಧವಾಯಿತು. ಆದರೆ ಈ ನಾನಾಲೋಕಗಳಿಂದ ಕೂಡಿದ ವಿಶ್ವದಲ್ಲಿ ಜೀವನ ಜನ್ಮವು ಮನುಷ್ಯದೇಹದಲ್ಲಾಗಲಿ, ಅಥವಾ ಇತರ ದೇಹದಲ್ಲಾಗಲಿ, ಕಾರಣ ಪರಂಪರೆಯ ಹೊರತಾಗಿ, ಅಂದರೆ—ಅವನು ಆ ಜನ್ಮದ ಪೂರ್ವಸಿದ್ಧತೆಯನ್ನು ಮಾಡಿಕೊಂಡ ಹೊರತು, ಮುಂದಿನ ಜನ್ಮದ ಸಾಧನವಿಲ್ಲದೆ, ಅಕಸ್ಮಾತ್ತಾಗಿ ಆಗಲಾರದು. ಈ ಜಗತ್ತು ಕ್ರಮದಿಂದ ಸಾಗಿದ ಉತ್ಕ್ರಾಂತಿ ಅಥವಾ ಅವಕ್ರಾಂತಿಯ ಮೇಲೆ ರಚಿತವಾಗಿದ್ದು, ಈ ನಿಯಮವು ಕೇವಲ ಸ್ಥೂಲ ಶರೀರವನ್ನಷ್ಟೇ ವ್ಯಾಪಿಸಿರದೆ, ಜೀವನ ಮನಸ್ಸು, ಬುದ್ಧಿ ಮತ್ತು ಆತ್ಮ ಇವೆಲ್ಲವನ್ನೂ ವ್ಯಾಪಿಸಿದೆ. ಆದ್ದರಿಂದ ಮನುಷ್ಯಯೋನಿಯಲ್ಲಾಗಲಿ ಇತರ ಯೋನಿಗಳಲ್ಲಾಗಲಿ, ಒಮ್ಮಿಂದೊಮ್ಮೆ ಪೂರ್ವಸಿದ್ಧತೆಯ ಹೊರತು ಜೀವನು ಜನ್ಮತಾಳುವದು ವಿಶ್ವರಚನೆಯ ಉದ್ದೇಶವಾಗಿರಲಾರದು. ಅಕಸ್ಮಾತ್ತಾದ ಜನ್ಮದ ಕಲ್ಪನೆಗೆ ವಿಶ್ವದ ರಚನೆ ಯಲ್ಲಿ ಎಡೆಯಿಲ್ಲ. ಅದು ಜೀವಾತ್ಮನ ಗುಣವಿಕಾಸದಲ್ಲಿದ್ದ ನಿಯಮಬದ್ಧತ್ವಕ್ಕೆ

ವಿರುದ್ಧವಾಗಿರುವದು. ಜೀವನ ಕ್ರಮವಾದ ಉತ್ಕ್ರಾಂತಿಯಲ್ಲಿ ಈ ಪ್ರಕಾರದ ಅಕಸ್ಮಾತ್ತಾದ ಜನ್ಮವು ಉಂಟಾಗುವದೆಂದರೆ ಹೇತುರಹಿತವಾದ ಪರಿಣಾಮವನ್ನೂ ಅಥವಾ ಪರಿಣಾಮವಿಲ್ಲದ ಹೇತುವನ್ನೂ ಕಲ್ಪಿಸಿದಂತಾಗುವದು. ಅದೊಂದು ಭೂತ, ಭವಿಷ್ಯತ್‌ಕಾಲಗಳಿಂದ ಕಡಿದುಹಾಕಿದ ವರ್ತಮಾನಕಾಲವಾಗುವದು. ವ್ಯಕ್ತಿಯ ಜೀವನವು ವಿಶ್ವಜೀವನದ ಕಾರ್ಯಕಾರಣ ನಿಯಮಗಳನ್ನು ಅನುಸರಿಸಿಯೇ ಉತ್ಕ್ರಾಂತಿಯನ್ನು ಹೊಂದಬೇಕು. ವಿಶ್ವದ ಕಾರ್ಯಕಾರಣ-ಪರಂಪರೆಯಲ್ಲಿ ಜೀವಾತ್ಮನ ಜನ್ಮಕ್ರಿಯೆಯು ಅಕಸ್ಮಾತ್, ಕಾರಣವಿಲ್ಲದೆ ಒಳನುಗ್ಗಲಾರದು. ವಿಶ್ವದ ಅಬಾಧಿತವಾದ ನಿಯಮಗಳನ್ನು ಪಾಲಿಸುವದೇ ಜೀವಾತ್ಮನ ಜನ್ಮದ ಹೇತುವಾಗಿರಬೇಕು. ಅಂದಮೇಲೆ ಜೀವಾತ್ಮನು ಒಮ್ಮಿಂದೊಮ್ಮೆ ಈ ಲೋಕದಲ್ಲಿಯ ಮನುಷ್ಯ ಶರೀರವನ್ನು ಧಾರಣಮಾಡುವದಾಗಲಿ, ಅಥವಾ ಮನುಷ್ಯ ಜನ್ಮವು ಅವನ ಮೊದಲನೆಯ ಮತ್ತು ಕೊನೆಯದಾಗಿರುವದಾಗಲಿ ಶಕ್ಯವಿಲ್ಲ. ಅಥವಾ ಅವನು ಪರಲೋಕಗಳಲ್ಲಿ ಒಂದೇ ಸಾರೆ ವಾಸಿಸಿ, ಈ ಲೋಕಕ್ಕೆ ಒಂದೇ ಸಾರೆ ಬಂದು ಮುಂದೆ ತನ್ನ ಅನುಭವದ ಕ್ಷೇತ್ರವನ್ನು ಒಮ್ಮೆಲೇ ಮತ್ತೊಂದು ಲೋಕಕ್ಕೆ ಬದಲಿಸುವನೆಂಬುವದೂ ಸಾಧ್ಯವಿಲ್ಲ. ಯಾಕಂದರೆ, ಈ ಜಗತ್ತಿನಲ್ಲಿಯ ಜೀವನ ಜನ್ಮವು ಅವನ ಲೋಕಯಾತ್ರೆಯ ಪ್ರಯಾಣದಲ್ಲಿ ಒಂದು ರಾತ್ರಿ ಉಳಿದುಕೊಳ್ಳುವ ಧರ್ಮಶಾಲೆಯಾಗಲಾರದು. ಜೀವನ ಪ್ರಗತಿಯು ಬಹು ಸಾವಕಾಶವಾದ ಮತ್ತು ಬಹಳ ದೂರದ ವರೆಗಿನ ಪ್ರಯಾಣವಾಗಿರುವದೆಂದೂ, ಅವನ ಉತ್ಕ್ರಾಂತಿಗೆ ಅಗಣಿತಕಾಲವು ಬೇಕಾಗುವದೆಂದೂ, ನಮಗೆ ಅನುಭವದಿಂದ ತಿಳಿದುಬರುವದು. ಜೀವಾತ್ಮನು ಈ ವಿಶ್ವದಲ್ಲಿ ತನ್ನ ಪ್ರಗತಿಯನ್ನು ಕ್ರಮವಾಗಿಯೂ, ಸಾವಕಾಶವಾಗಿಯೂ, ಮಾಡಿಕೊಳ್ಳುತ್ತಿದ್ದು ಅದ ಅವನ ಆಂತರಿಕ ಆತ್ಮಜ್ಞಾನದ ವಿಕಾಸದಿಂದಲೇ ಸಾಧ್ಯ. ಮತ್ತು ಈ ವಿಕಾಸಕ್ಕೆ ಕಾರಣವಾದ ಅನೇಕ ಜನ್ಮಗಳ ಶ್ರೇಣಿಯಲ್ಲಿ ಮನುಷ್ಯ ಜನ್ಮವು ಒಂದು ಪಾವಟಿಗೆಯಾಗಿರುವದು. ಈ ಜನ್ಮಕ್ಕೆ ಅವನು ಪುನಃ ಪುನಃ ಬಂದು ತನ್ನ ಅನುಭವವನ್ನು ಹೆಚ್ಚಿಸಿಕೊಳ್ಳುವದರಿಂದಲೇ ಅವನ ಮುಂದಿನ ಪ್ರಗತಿಯಾಗುವದು. ಯಾವದಾದರೊಂದು ಯೋನಿಯಲ್ಲಿ ಒಮ್ಮೆ

ಜನ್ಮವೆತ್ತಿ ಅವನು ತನ್ನ ಮನಸ್ಸಿನ ಲಹರಿಯ ಪ್ರಕಾರ ಕೊಟ್ಟ ಭೆಟ್ಟಿಯಿಂದ ಈ ಪ್ರಗತಿಯು ಆಗಲಾರದು.

ಜೀವಾತ್ಮನು ಸ್ವಚ್ಛಂದವಾಗಿ ಒಂದು ಕಾರ್ಯಕ್ಷೇತ್ರದಿಂದ ಮತ್ತೊಂದು ಕಾರ್ಯಕ್ಷೇತ್ರಕ್ಕೆ, ಒಂದು ದೇಹದಿಂದ ಮತ್ತೊಂದು ದೇಹಕ್ಕೆ ತನ್ನ ಮನ ಬಂದಂತೆ ಪ್ರಯಾಣಮಾಡಲಾರನು. ಇದು ಮುಕ್ತಸ್ಥಿತಿಯಲ್ಲಿ ಮೇಲಿನ ಲೋಕಗಳಲ್ಲಿ ಅವನಿಗೆ ಕೆಲಮಟ್ಟಿಗೆ ಶಕ್ಯವಿದ್ದಾಗ್ಯೂ ಈ ಸ್ಥೂಲ ಜಗತ್ತಿನಲ್ಲಿಯ ಸ್ಥಿತಿಯಲ್ಲಿ ಅದು ಶಕ್ಯವಿಲ್ಲ. ಈ ಜಗತ್ತಿನಲ್ಲಿ ಮನುಷ್ಯದೇಹದಲ್ಲಿಯ ಜೀವನಿಗೆ ಎರಡು ಪ್ರಕಾರದ ಸಮ್ಮಿಶ್ರ ಸ್ಥಿತಿ ಉಂಟು. ಕೇವಲ ಸಾಕ್ಷಿಭೂತವಾದ ಕೂಟಸ್ಥ ಚೈತನ್ಯ—ಆತ್ಮಸ್ಥಿತಿ ಒಂದನೆಯದು; ಅಹಂಕಾರಯುಕ್ತ ವ್ಯಕ್ತಿತ್ವವುಳ್ಳ ಜೀವಸ್ಥಿತಿ ಎರಡನೆಯದು; ಇವೆರಡು ಸ್ಥಿತಿಗಳ ವಿವೇಕ ರಹಿತ ಸಮ್ಮಿಶ್ರಣವು ಎಲ್ಲ ಅಜ್ಞಾನೀ ಜೀವಗಳಲ್ಲಿ ಇದ್ದದ್ದು ಕಂಡುಬರುತ್ತದೆ. ಮೊದಲನೆಯದು ಅವನ ಸನಾತನ, ಅವ್ಯಯ, ಎಂದೂ ಬದಲಾಗದ, ನಾಶಹೊಂದದ ಸ್ವರೂಪವು. ಎರಡನೆಯದು ಈ ವಿಶ್ವಕ್ಕೆ ಅಧೀನವಾದ ಬದಲಾಗುತ್ತಿರುವ ಸ್ವರೂಪವು. ಕೂಟಸ್ಥ ಚೈತನ್ಯರೂಪದಿಂದ ಜೀವಾತ್ಮನು ಪರಮಾತ್ಮನ ಸ್ವತಂತ್ರವಾದ ಸಚ್ಚಿದಾನಂದ ರೂಪವೇ ಇದ್ದು, ಅವನು ಅಜ್ಞಾನಮಯ ಪ್ರಕೃತಿಯಲ್ಲಿ ಆತ್ಮಸ್ವರೂಪದ ಅನುಭವವನ್ನು ಪಡೆಯುವದಕ್ಕೋಸ್ಕರ ಅವಕ್ರಾಂತನಾಗಬೇಕೆಂದು ಇಚ್ಛಿಸಿ, ತನ್ನ ಪೂರ್ಣ ಜ್ಞಾನರೂಪವನ್ನು ಬಿಟ್ಟು ಪ್ರಕೃತಿಯ ಅಜ್ಞಾನರೂಪಕ್ಕೆ ಇಳಿಯಲು ಸಮ್ಮತಿಸಿ ಜನನ-ಮರಣ ಚಕ್ರದಲ್ಲಿ ಸಿಲುಕಿದನು; ಮತ್ತು ತನ್ನ ಉತ್ಕ್ರಾಂತಿಯ—ತನ್ನ ಮೂಲ ಜ್ಞಾನ ಸ್ವರೂಪಕ್ಕೆ ಏರುವ—ಕೆಲಸವನ್ನು ಅಧ್ಯಕ್ಷನಾಗಿ ನೋಡುತ್ತಿರುವನು. ಅವನೇ ತನ್ನ ಇನ್ನೊಂದು ಸ್ವರೂಪವಾದ ವ್ಯಕ್ತಿಜೀವನದ ಆತ್ಮನಾಗಿ ಪ್ರಕೃತಿಯಲ್ಲಿಯ ದೀರ್ಘಕಾಲದ ಅನುಭವವನ್ನು ಹೊಂದಿ ಉತ್ಕ್ರಾಂತಿಯ ಗತಿಯ ಕಾರಣನೂ ಆಗಿದ್ದಾನೆ. ಅವನು ಆತ್ಮರೂಪದಿಂದ ಈ ಜಗತ್ತನ್ನೆಲ್ಲ ವ್ಯಾಪಿಸಿದ ಮತ್ತು ಈ ವಿಶ್ವವನ್ನು ಸಾಕ್ಷಿರೂಪನಾಗಿ ನೋಡುತ್ತಿರುವ ಅವ್ಯಯ ಬ್ರಹ್ಮವಸ್ತುವೇ ಇದ್ದು, ಜೀವರೂಪದಿಂದ ಈ ಜಗತ್ತಿನ ಭಾಗವಾಗಿ ತನ್ನ ನಿಜಸ್ವರೂಪವಾದ ಸಚ್ಚಿದಾನಂದದ ಅನುಭವವನ್ನು ಪಡೆಯುವದಕ್ಕೋಸ್ಕರ ಜಗತ್ತಿನಲ್ಲಿ ಪ್ರಕಟರೂಪ-

ವನ್ನು ಧಾರಣಮಾಡಿ ವ್ಯಕ್ತಿತ್ವವನ್ನು ಹೊಂದಿರುತ್ತಾನೆ. ಈ ವ್ಯಕ್ತಿಯ ಅನುಭವವು ವಿಶ್ವದ ಅನುಭವದ ಕ್ರಮದ ಮೆಟ್ಟಿಲನ್ನು ಏರಿಯೇ ಹೋಗ ತಕ್ಕದ್ದು. ಅರ್ಥಾತ್ ವಿಶ್ವಚಕ್ರದ ಅನುಭವವನ್ನು ಅನುಸರಿಸಿಯೇ ಅವನ ಉತ್ಕ್ರಾಂತಿಯು ಆಗತಕ್ಕದ್ದು.

ಸ್ಥೂಲ ಜಗತ್ತಿನ ಅಚೇತನ ವಸ್ತುಗಳಲ್ಲಿ ಅಡಗಿದ ಚೈತನ್ಯವು ಸ್ಥೂಲ ಶರೀರವನ್ನು ಧಾರಣಮಾಡಿಯೇ ತನ್ನನ್ನು ಕ್ರಮವಾಗಿ ಮಹಾಭೂತಗಳು, ಪ್ರಾಣ, ಬುದ್ಧಿ ಮತ್ತು ಆತ್ಮಾ ಈ—ಶ್ರೇಣಿಯಿಂದಲೇ ಪ್ರಕಟಗೊಳಿಸುತ್ತದೆ. ಎಲ್ಲ ಅಚೇತನ ವಸ್ತುಗಳಲ್ಲಿ ಕೇವಲ ಅಜ್ಞಾನ ರೂಪವನ್ನು ತಾಳಿದಂತೆ ತೋರಿಸಿಕೊಂಡು, ಆತ್ಮನು ಅತಿ ಗುಪ್ತರೀತಿಯಿಂದ ತನ್ನ ಆತ್ಮತ್ವವನ್ನು ಆರಂಭದಲ್ಲಿ ತೋರಿಸುತ್ತಾನೆ. ಮುಂದೆ, ಅವನು ಇನ್ನೂ ಬಹುಗುಪ್ತನಾಗಿ ಉಳಿದಾಗ್ಯೂ, ಪ್ರಾಣರೂಪದಿಂದ, ಅಜ್ಞಾನದ ಕಗ್ಗತ್ತಲೆ ಮತ್ತು ಜ್ಞಾನ-ಜ್ಯೋತಿಯ ಮಿಣುಕಾದ ಬೆಳಕು ಇವುಗಳ ಗಡಿ ಪ್ರದೇಶದಲ್ಲಿ ಇದ್ದಂತೆ ಕಾಣುವ ಉದ್ಭಿಜ್ಜ ಯೋನಿಗಳಲ್ಲಿ ( ಸಸ್ಯ, ಲತಾ, ವೃಕ್ಷಾದಿಗಳಲ್ಲಿ ) ಕಂಡು ಬರುವನು. ಇನ್ನೂ ತುಸು ಮುಂದೆ, ಪ್ರಾಣಿಯೋನಿಗಳಲ್ಲಿ ಅವನು ಪ್ರಾಥಮಿಕ ಜ್ಞಾನಜ್ಯೋತಿಯನ್ನು ಪ್ರಕಟಮಾಡುವನು. ಅದಕ್ಕೂ ಮುಂದೆ ಹೋದಂತೆ, ಮನುಷ್ಯ ಯೋನಿಯಲ್ಲಿ ಹೆಚ್ಚಿನ ಬೌದ್ಧಿಕ ವಿಕಾಸವು ಕಂಡುಬರುವದು. ಆದರೆ ಇಲ್ಲಿಯೂ ತನ್ನ ಆತ್ಮದ ನಿಜಸ್ವರೂಪದ ಜ್ಞಾನವು ಜೀವಕ್ಕಾಗಿರುವದಿಲ್ಲ. ಬೀಜಭೂತವಾದ ಜ್ಞಾನವು ವಿಶ್ವದಲ್ಲಿಯ ಪ್ರತಿಯೊಂದು ವಸ್ತುವಿನ ಅಂತರಾತ್ಮದಲ್ಲಿ ಇದ್ದು, ಅದರ ಆವಿರ್ಭಾವವು ಮಾತ್ರ ಜಗತ್ತಿನಲ್ಲಿ ವಿಶ್ವದ ಅನುಭವದ ಬೆಳವಣಿಗೆಯಿಂದಲೇ ಆಗತಕ್ಕದ್ದು. ಇದೇ ಜೀವನ ಉತ್ಕ್ರಾಂತಿಯು.

ಈ ಉತ್ಕ್ರಾಂತಿಯ ಸ್ವರೂಪವು ಎರಡು ಪ್ರಕಾರದ್ದು. ಒಂದು, ವ್ಯಷ್ಟಿಗೆ—ಜೀವವ್ಯಕ್ತಿಗೆ ಸಂಬಂಧಿಸಿದ್ದು, ಎರಡನೆಯದು, ಇಡೀ ಸಮಷ್ಟಿಗೆ ಸಂಬಂಧಿಸಿದ್ದು. ಸಮಷ್ಟಿಯು ಉದ್ಭಿಜ್ಜ, ಸ್ವೇದಜ, ಅಂಡಜ, ಜರಾಯುಜ, ಮುಂತಾದ ಪ್ರಾಣಿಗಳ ಯೋನಿಗಳನ್ನು ಉಂಟುಮಾಡುವದು. ವ್ಯಷ್ಟಿಯು ಇವುಗಳಿಂದ ತನ್ನ ವ್ಯಕ್ತಿತ್ವವನ್ನು ವಿಕಾಸಗೊಳಿಸಿಕೊಳ್ಳುವದು. ಸಮಷ್ಟಿ

ಯಲ್ಲಿ ಪುರುಷನು ಪಶುಪಕ್ಷ್ಯಾದಿ ಯೋನಿಗಳಿಂದ ಬೆಳೆಯುತ್ತ ಬಂದ ತನ್ನ ಶಕ್ತಿಯನ್ನು ಮುಂದುವರಿಸಿ ವೈಶ್ವಾನರ, ಹಿರಣ್ಯಗರ್ಭ, ಮತ್ತು ಈಶ್ವರ, ಮುಂತಾದ ಸಂಜ್ಞೆಗಳನ್ನೂ, ವ್ಯಷ್ಟಿಯಲ್ಲಿ ಅದೇ ಪ್ರಕಾರ ವಿಶ್ವ, ತೈಜಸ, ಪ್ರಾಜ್ಞ, ಮುಂತಾದ ಸಂಜ್ಞೆಗಳನ್ನು ಹೊಂದುವನು. ಸಮಷ್ಟಿ ಪುರುಷನು ಹೇಗೆ ಸಸ್ಯ ಪಶುಪಕ್ಷ್ಯಾದಿ ನೀಚ ಯೋನಿಗಳಿಂದ ಮನುಷ್ಯ ಯೋನಿಯಲ್ಲಿ ಉತ್ಕ್ರಮಿಸಿದನೋ ಹಾಗೆಯೇ ವ್ಯಷ್ಟಿಯಲ್ಲಿಯೂ, ಈ ಮನುಷ್ಯ ದೇಹವನ್ನು ಧಾರಣಮಾಡಿದ ವ್ಯಕ್ತಿಯು ತನ್ನ ಹಿಂದಿನ ಜನ್ಮಗಳಲ್ಲಿ ಈ ನೀಚ ಯೋನಿಗಳ ಅನುಭವವನ್ನು ಪಡೆದೇ ಇರಬೇಕು. ಈ ವ್ಯಕ್ತಿಯು ಈಗ ಮನುಷ್ಯ ಜೀವನದ ಅನುಭವವನ್ನು ಪಡೆಯುವದಕ್ಕೆ ಮನುಷ್ಯದೇಹದ ಒಳ-ಹೊರಗಿನ ರೂಪಗಳನ್ನು ವ್ಯಾಪಿಸಿದ್ದಾನೆ. ಆದರೆ ಹಿಂದೆ ಅವನು ತಾಳಿದ ಸಸ್ಯ, ಪಶುಪಕ್ಷ್ಯಾದಿ ರೂಪಗಳು ಹೇಗೆ ಅವನಿಗೆ ಈಗ ಉಳಿದಿರುವದಿಲ್ಲವೋ ಹಾಗೆಯೇ ಈ ಮನುಷ್ಯತ್ವವು ಅವನ ಕೊನೆಯ ಸ್ವರೂಪವಾಗಲಾರದು. ಸೃಷ್ಟಿಕ್ರಮದ ಶ್ರೇಣಿಯಲ್ಲಿಯ ಮೇಲಿನ ಮೆಟ್ಟಲುಗಳನ್ನು ಏರಿ ತನ್ನ ಆತ್ಮವಿಕಾಸವನ್ನು ಇನ್ನೂ ಮುಂದುವರಿಸುವದೇ ಅವನಿಗೆ ಕ್ರಮಪ್ರಾಪ್ತವಾಗಿದೆ.

ಮನುಷ್ಯತ್ವಕ್ಕಿಂತ ಹೆಚ್ಚಿನ ಗತಿಯು ಜೀವನಿಗೆ ಶಕ್ಯವಿಲ್ಲವೆಂದು ಹೇಳಿದರೆ, ಜೀವನ ಅನುಭವವನ್ನು ಸಾಕ್ಷಿರೂಪದಿಂದ ನೋಡುವ ಮತ್ತು ಜ್ಞಾನಶಕ್ತಿಯನ್ನುಂಟುಮಾಡುವ ಆತ್ಮನು ಮನುಷ್ಯದೇಹ ಮತ್ತು ಮನಸ್ಸು ಇವುಗಳಿಂದಲೇ ಉತ್ಪನ್ನನಾಗಿ, ಅವು ಇರುವ ವರೆಗೂ ಇದ್ದು ಅವುಗಳ ಸಂಗಡವೇ ನಷ್ಟವಾಗುವನೆಂದು ಹೇಳಬೇಕಾಗುವದು. ದೇಹ, ಮನಸ್ಸುಗಳ ಅಸ್ತಿತ್ವದಿಂದಲೇ ಆತ್ಮನಿಗೆ ಅಸ್ತಿತ್ವವು ಉಂಟಾದ್ದರೆ ಅವುಗಳನ್ನು ಬಿಟ್ಟು ಅವನಿಗೆ ಇರುವದೂ, ಅಥವಾ ಮನುಷ್ಯದೇಹಕ್ಕಿಂತ ಕೆಳಗಿನ ಅಥವಾ ಮೇಲಿನ ತರಗತಿಯ ದೇಹಗಳನ್ನು ಸ್ವೀಕರಿಸುವದೂ ಅವನಿಗೆ ಶಕ್ಯವಿಲ್ಲವೆಂದು ಹೇಳಬೇಕಾಗುವದು. ಆದರೆ ದೇಹ, ಮನಸ್ಸುಗಳಿಂದ ಆತ್ಮನು ಉತ್ಪನ್ನನಾಗಿರದೆ ಆತ್ಮನೇ ಮನಸ್ಸು ದೇಹಗಳನ್ನು ಉಂಟುಮಾಡುತ್ತಾನೆ ( ಜೇಡಹುಳವು ತನ್ನ ಬಲೆಯನ್ನು ತಾನೇ ರಚಿಸು

ವಂತೆ ) ಆತ್ಮನು ಮನೋದೇಹಗಳನ್ನು ತನ್ನಿಂದಲೇ ರಚಿಸುತ್ತಾನೆ. ದೇಹ ಮನಸ್ಸುಗಳ ಮಿಶ್ರಣದಿಂದ ಆತ್ಮನ ಜ್ಞಾನಶಕ್ತಿಯು ಉಂಟಾಗಿರುವದಿಲ್ಲ. ಅಥವಾ ಅವನು ಅವುಗಳ ಪರಿಣಾಮದಿಂದ ಆದವನೂ ಅಲ್ಲ ಆದರೆ ಹೊರಗಿನಿಂದ ನೋಡುವವರಿಗೆ ಅವನು ಭೌತಿಕ ಶರೀರ ಮತ್ತು ಮನಸ್ಸಿನ ಪರಿಣಾಮವಾಗಿ ಉಂಟಾದಂತೆ ಕಾಣುತ್ತಾನೆ. ಯಾಕಂದರೆ ದೇಹ ಮತ್ತು ಮನಸ್ಸುಗಳಲ್ಲಿ ಅವನು ನಾವಕಾಶವಾಗಿ ಪ್ರಕಟನಾಗುತ್ತಾನೆ. ಅವನನ್ನು ಮನಸ್ಸು ಅಥವಾ ದೇಹವು ಉಂಟುಮಾಡುವದಿಲ್ಲ. ಅವನು ಅವುಗಳಲ್ಲಿ ಪ್ರಕಟನಾದಹಾಗೆ ದೇಹ ಮತ್ತು ಮನಸ್ಸುಗಳು ಅವನಿಗೆ ಸಾಧನ ಭೂತವಾಗಿ ಅವನ ಮೇಲೆ ಅವಲಂಬಿಸಿಯೇ ಬೆಳೆಯುತ್ತಿರುತ್ತವೆ. ಆತ್ಮನು ಸ್ವತಃ ಯಾವದೊಂದು ನಾಮರೂಪವಿಲ್ಲದವನಾದಾಗ್ಯೂ ಅವನ ಆವಿರ್ಭಾವಕ್ಕೆ ಈ ಅನೇಕ ನಾಮರೂಪಗಳುಳ್ಳ ದೇಹ ಮನಸ್ಸುಗಳು ಕೇವಲ ಸಾಧನವಾಗಿರುತ್ತವೆ. ದೇಹ ಮನಸ್ಸುಗಳು ಉಂಟಾಗುವ ಮೊದಲೂ ಅವನು ಇದ್ದನು. ಅವು ನಷ್ಟವಾದನಂತರವೂ ಅವನು ಇದ್ದೇ ಇರುವನು. ಅವನಿಗೆ ಈ ವಿಶ್ವದ ಉತ್ಕ್ರಾಂತಿಯು ಕ್ರಮದಿಂದಲೇ ಈ ದೇಹ ಮನಸ್ಸುಗಳೂ, ಅವುಗಳಲ್ಲಿಯ ಉಚ್ಚ-ನೀಚ ತರಗತಿಯ ಜ್ಞಾನವೂ ಪ್ರಾಪ್ತವಾಗುತ್ತವೆ. ಒಂದೇ ಆಕಾರವನ್ನು ಧಾರಣಮಾಡಬೇಕೆಂಬ ಬಂಧನಕ್ಕೆ ಅವನು ಒಳಗಾಗಿರುವದಿಲ್ಲ ಹಾಗೂ ಅವನು ಮನುಷ್ಯನ ಮನೋರಚನೆಗೆ ಬದ್ಧನಾದವನೂ ಇರುವದಿಲ್ಲ. ಆತ್ಮನು ಮನುಷ್ಯ ಜನ್ಮದಿಂದ ಜನ್ಮ ತಾಳಿದವನು ಅಲ್ಲ. ಅಥವಾ ಮನುಷ್ಯತ್ವದ ನಾಶದಿಂದ ನಾಶಹೊಂದುವವನೂ ಅಲ್ಲ ಮನುಷ್ಯ ಜೀವನಕ್ಕೂ ಕೆಳಗಿನ ತರಗತಿಯ ಸ್ಥಿತಿಯು ಅವನಿಗೆ ಭೂತಕಾಲದಲ್ಲಿ ಇತ್ತು. ಮತ್ತು ಮೇಲ್ತರಗತಿಯ ಜೀವನದ ಭವಿಷ್ಯಕಾಲವೂ ಅವನಿಗಿರುವದು

ನಿಸರ್ಗ ಮತ್ತು ಮನುಷ್ಯ ಸ್ವಭಾವ ಇವುಗಳ ಸೂಕ್ಷ್ಮ ನಿರೀಕ್ಷಣದಿಂದ ತಿಳಿಯುವದೇನಂದರೆ ಜೀವಾತ್ಮನು ಜ್ಞಾನಸಂಪನ್ನ ಮನುಷ್ಯ ಮಟ್ಟಕ್ಕೆ ಮುಟ್ಟುವ ವರೆಗೆ ಅನೇಕ ಕ್ಷುದ್ರ ಯೋನಿಗಳಲ್ಲಿ ಜನ್ಮತಾಳಿರುವನು ಮತ್ತು ಈ ಮನುಷ್ಯ ಮಟ್ಟದಲ್ಲಿ ಅವನಿಗೆ ಪ್ರಾಪ್ತವಾದ ಬುದ್ಧಿಯು ಸಹಾಯು

ದಿಂದ ಇನ್ನೂ ಮೇಲಿನ ತರಗತಿಯ ಜನ್ಮಗಳನ್ನು ಹೊಂದುವನು. ನಿಸರ್ಗ ದಲ್ಲಿ ಅಚೇತನ ಪಂಚಭೂತಗಳಿಂದ ಹಿಡಿದು ಬುದ್ಧಿಸಂಪನ್ನನಾದ ಮನುಷ್ಯ ಪ್ರಾಣಿಯ ವರೆಗೆ ಬೇರೆ ಬೇರೆ ತರಗತಿಗಳ ಶ್ರೇಣಿಯು ಇದ್ದದ್ದನ್ನೂ, ಅತಿ ಕೀಳ ತರಗತಿಯ ಸಾಮುಗ್ರಿ ಮತ್ತು ಅನುಭವಗಳೇ ಮೇಲ್ತರಗತಿಯ ಪ್ರಗತಿಯ ಸಾಧನವಾಗಿ ಉಪಯೋಗಕ್ಕೆ ಬರುವದನ್ನೂ ನಾವು ನೋಡು ತ್ತೇವೆ. ಮನುಷ್ಯ ವ್ಯವಹಾರವೂ ಇದೇ ತರಹದ್ದಿದೆ. ಅದರಲ್ಲಿ ಪಂಚ- ಮಹಾಭೂತಗಳಿಂದುಂಟಾದ ಸ್ಥೂಲದೇಹವೂ, ಈ ದೇಹದಿಂದ ಕೂಡಿದ ಪ್ರಾಣವೂ, ಪ್ರಾಣಗಳಿಂದೊಡಗೂಡಿದ ಮನಸ್ಸೂ, ಮನಸ್ಸಿನ ಸಂಗಡವೇ ಜೀವವೂ ಒಂದಕ್ಕೊಂದು ತಕಕಾಗಿ ಬಿಡದೆ ಇರುವದನ್ನು ನಾವು ಕಾಣ ಬಹುದು. ಮನುಷ್ಯನಲ್ಲಿ ಪಶುತ್ವವು ಇನ್ನೂ ಗೋಚರವಾಗುತ್ತದೆ. ಮನುಷ್ಯ ಜೀವನದಲ್ಲಿ ಕಂಡುಬರುವ ಪಂಚಭೂತಾತ್ಮಕ ದೇಹವೂ, ಪ್ರಾಣದಿಂದುಂ ಟಾದ ಮನಸ್ಸೂ, ಅವನ ವಿವಿಧ ಸ್ವಭಾವಕ್ಕೆ ಕಾರಣವಾದ ಪಶುತ್ವವೂ, ಇವೆಲ್ಲ ಅವನು ಹಿಂದೆ ಅನುಭವಿಸಿದ ಸ್ಥಿತಿಯ ಅವಶೇಷಗಳೆಂದು ತಿಳಿಯ ಬೇಕಾಗುವದು. ಭೌತಿಕ ವಿಕಾಸವಾದಿಗಳು ಅನ್ನುವಂತೆ ಅಚೇತನ ನಿಸರ್ಗವೇ ಉತ್ಕ್ರಾಂತಿಯಿಂದ ಶರೀರ, ಪ್ರಾಣ ಮತ್ತು ಮನಸ್ಸುಗಳಲ್ಲಿ ಪರಿಣಮಿಸಿ, ಹೀಗೆ ತಯಾರಾದ ಸಾಮುಗ್ರಿಗಳಿಂದ ಮುಂದೆ ಜೀವನು ಉಂಟಾದನೆಂದು ನಾವು ತಿಳಿಯುದಿರೋಣ. ಈ ವಿಚಾರ-ಸರಣಿಯಲ್ಲಿ ಸ್ವಲ್ಪ ಸತ್ಯಾಂಶ ಉಂಟು. ಆದರೆ ಅವರು ಗ್ರಹಿಸಿದ ಪ್ರಕ್ರಿಯೆಯು ಯಥಾಸ್ಥಿತವಾಗಿರುವ ದಿಲ್ಲ. ಯಾಕಂದರೆ ಅವರು ಜೀವಯುಕ್ತ ದೇಹ, ಜೀವಯುಕ್ತ ಪ್ರಾಣ, ಜೀವಯುಕ್ತ ಮನಸ್ಸು ಈ ದ್ವಂದ್ವಗಳಲ್ಲಿ ಖಂಡವನ್ನು, ಅಂದರೆ ಜೀವ- ದೇಹ; ಜೀವ-ಪ್ರಾಣ; ಮತ್ತು ಜೀವ-ಮನಸ್ಸು ಈ ಮೂರು ದ್ವಂದ್ವ ಗಳಲ್ಲಿಯ ಪ್ರತಿಯೊಂದಕ್ಕೂ ಸ್ವತಂತ್ರವಾದ ಅಸ್ತಿತ್ವವನ್ನು ಕಲ್ಪಿಸುತ್ತಾರೆ. ಆದರೆ ಜೀವನ ಹೊರತು ದೇಹವು ಉಂಟಾಗಲಾರದು. ಮತ್ತು ಜೀವನ ಹೊರತು ಪ್ರಾಣ, ಮನಸ್ಸುಗಳೂ ಇರಲಾರವು ನೀರೇ ತೆರೆಗಳ ರೂಪದಿಂದ ಪರಿಣಮಿಸುವಂತೆ ಜೀವನೇ ವಿವಿಧ ದೇಹಾಕಾರಗಳಿಂದ ಪರಿಣಮಿಸುವನು. ಆತ್ಮನೇ ಅಚೇತನ ಭೂತ ರೂಪಹೊಂದಿದ್ದು ಆತ್ಮನ ಹೊರತು ಈ ಭೂತ ಗಳಿಗೆ ಸ್ವತಂತ್ರವಾದ ಇರುವಿಕೆ ಇರಲಾರದು. ನೀರಿನ ಹೊರತು ತೆರೆಗಳು

ಉತ್ಪನ್ನವಾಗಲಾರವು. ಅಚೇತನ ಸ್ಥೂಲದೇಹವೇ ಹೀಗೆ ಆತ್ಮರೂಪ ವಿದ್ದ ಮೇಲೆ, ಜೀವಗಳೆಯನ್ನುಂಟುಮಾಡುವ, ಚೇತನತ್ವಕ್ಕೆ ಹೆಚ್ಚು ಸಮೀಪವಾದ ಪ್ರಾಣ ಮನಸ್ಸುಗಳೂ ಆತ್ಮರೂಪವೇ ಎಂದು ಹೇಳುವ ಕಾರಣವಿಲ್ಲ. ಮಹಾಭೂತ ಪ್ರಾಣಾದಿಗಳಲ್ಲಿಯೇ ಆತ್ಮನಿರದಿದ್ದರೆ, ಮನುಷ್ಯನಲ್ಲಿಯೇ ಅವನು ಅಕಸ್ಮಾತ್ತಾಗಿ ಹುಟ್ಟುವದು ಅಸಂಭವನೀಯ ವಾದ ಮಾತು.

ಜೀವಾತ್ಮನ ಉತ್ಕ್ರಾಂತಿಯಲ್ಲಿ ಮನುಷ್ಯಮಟ್ಟವು ಒಂದು ಮಧ್ಯ ಸ್ಥಿತಿಯೆಂದು ಇಲ್ಲಿಯ ವರೆಗಿನ ಪ್ರತಿಪಾದನೆಯಿಂದ ತಿಳಿದಿರಬಹುದು. ಇನ್ನು ಅವನು ಒಮ್ಮೆ ಮನುಷ್ಯತ್ವವನ್ನು ಪಡೆದನಂತರ, ಅವನಿಗೆ ಪುನಃ ಜನ್ಮವನ್ನು ಎತ್ತಬೇಕಾಗುವದೋ ಹೇಗೆ? ಎತ್ತಬೇಕಾದರೆ, ಈ ಜನ್ಮದ ಲಕ್ಷಣವು, ಯಾವ ಪ್ರಕಾರದ್ದು ಎಂಬದನ್ನು ನೋಡುವಾ. ಜೀವನು ಮನುಷ್ಯ ಜೀವನವನ್ನು ಮುಗಿಸಿ ಪುನಃ ಉತ್ಕ್ರಾಂತಿಯ ಮುಂದಿನ ಗತಿಯನ್ನು ಬದಲಿಸಿ ಪಶುಪಕ್ಷ್ಯಾದಿ ಯೋನಿಗಳಿಗೆ ಹಿಂತಿರುಗಬಹುದೇ? —ಮನುಷ್ಯ ಯೋನಿಯಿಂದ ಪುನಃ ಪಶುಪಕ್ಷ್ಯಾದಿ ಯೋನಿಗಳಲ್ಲಿ ಜನ್ಮತಾಳಬಹುದೇ? —ಎಂಬದು ಇದರಲ್ಲಿಯ ಮೊದಲನೆಯ ಸಂಶಯ. ಹೀಗೆ ಪುನಃ ಜೀವಾತ್ಮನು ತನ್ನ ಗತಿಯನ್ನು ಹಿಂದಕ್ಕೆ ತಿರುಗಿಸಬಹುದೆಂದು ಕೆಲವರ ಕಲ್ಪನೆಯೂ ಇದೆ. ಆದರೆ ಈ ಪ್ರಕಾರದ ಚಿರಕಾಲದ ನೀಚ ಸ್ಥಿತಿಯನ್ನು ಅವನು ಹೊಂದಲಾರನೆಂದು ನಮಗನಿಸುತ್ತದೆ ಯಾಕಂದರೆ, ಪಶುಯೋನಿಯಿಂದ ಮನುಷ್ಯಯೋನಿಯಲ್ಲಿ ಜೀವಾತ್ಮನ ಉತ್ಕ್ರಮಣವಾಗಬೇಕಾದರೆ, ಅವನು ಒಂದು ನಿಶ್ಚಿತವಾದ ಜ್ಞಾನದ ಮಟ್ಟಕ್ಕೆ ಮುಟ್ಟಿರಬೇಕು ಉದ್ಭಿಜ್ಜಗಳಲ್ಲಿಯ ಪ್ರಾಣಮಯ ಕೋಶದಲ್ಲಿ ಅಲ್ಪಸ್ವಲ್ಪ ಅರಿವು ಉಂಟಾಗಿರುತ್ತದೆ ಇವುಗಳಿಗಿಂತ ಮುಂದಿನ ಹೆಜ್ಜೆ ಎನಿಸಿದ ಪಶುಜೀವನದಲ್ಲಿ ಪ್ರಾಣಮಯ ಮತು ಮನೋಮಯ ಕೋಶಗಳಲ್ಲಿಯ ಅರಿವು ಮೊದಲಿಗಿಂತ ಹೆಚ್ಚಿನದಾಗಿರುತ್ತದೆ. ಹಾಗೆಯೇ ಪಶುತ್ವದಿಂದ ಮನುಷ್ಯತ್ವಕ್ಕೆ ಜೀವನು ಮುಟ್ಟಬೇಕಾದರೆ ಈ ಅರಿವು ಇದಕ್ಕೂ ಹೆಚ್ಚು ಬೆಳೆದು ಒಂದು ನಿಶ್ಚಿತವಾದ ಮಟ್ಟಕ್ಕೆ ಬಂದು ಮುಟ್ಟಿರಬೇಕು. ಇನ್ನೂ ಈ ಬಗ್ಗೆ ಅನಿಶ್ಚಿತ ಸ್ಥಿತಿ ಇದ್ದರೆ ಮಾತ್ರ ಜೀವನ ಹಿಂತಿರುಗುವಿಕೆಯನ್ನು ನಾವು ಕಲ್ಪಿಸಬಹುದು ಸೃಷ್ಟಿಯ ಸಹೈತುಕ

ಉತ್ಕ್ರಾಂತಿಯ ನಿಯಮವನ್ನು ಅಲ್ಲಗಳೆದು ಜೀವನು ಕಾರಣವಿಲ್ಲದೆ ಅಧೋಗತಿಯನ್ನು ಹೊಂದಲಾರನು. ಆದರೆ ಜೀವನು ಮನುಷ್ಯ ಶರೀರ ವನ್ನು ಪ್ರವೇಶಿಸಲಿಕ್ಕೆ ಸಾಕಷ್ಟು ಪ್ರಗತಿಯನ್ನು ಹೊಂದಿದಾಗ್ಯೂ, ಆ ಪ್ರಗತಿಯು ಇನ್ನೂ ಅನಿಶ್ಚಿತ ಸ್ವರೂಪದ್ದಾಗಿದ್ದರೆ, ಅಂದರೆ ಮನುಷ್ಯದೇಹ ವನ್ನು ಭದ್ರತೆಯಿಂದ ಇರಿಸಿಕೊಳ್ಳುವಷ್ಟು ಅವನಲ್ಲಿ ಸಾಮರ್ಥ್ಯವಿಲ್ಲದಿದ್ದರೆ, ಮನುಷ್ಯನಿಗೆ ಅವಶ್ಯವಾಗಿ ಇರತಕ್ಕಷ್ಟು ಅರಿವು ಅವನಲ್ಲಿ ಇನ್ನೂ ಬರದಿದ್ದರೆ ಅಥವಾ ಅವನು ಮನುಷ್ಯಶೀಲಕ್ಕೆ ಅಂಟಿಕೊಂಡು ಇರುವಷ್ಟು ಸಾಮರ್ಥ್ಯ ವಂತನಾಗಿರದಿದ್ದರೆ, ಅವನ ಅಧೋಗತಿಯ ಕಲ್ಪನೆ ಶಕ್ಯವೆಂದೆನಿಸಬಹುದು. ಅಥವಾ ಪಶುಜೀವನದಲ್ಲಿಯ ಅದೃಷ್ಟ ಸಂಸ್ಕಾರಗಳು ಇನ್ನೂ ಬಲವತ್ತರ ವಾಗಿದ್ದು ಅದನ್ನು ತೃಪ್ತಿಗೊಳಿಸಿಕೊಳ್ಳುವದಕ್ಕೋಸ್ಕರ, ಒಂದು ಸ್ವತಂತ್ರ ಪಶುಜೀವನದ ಅವಶ್ಯಕತೆ ಇದ್ದರೆ, ಅವನು ಆ ಯೋನಿಯನ್ನು ಕೇಕಾಲ ಹೊಂದಿ ಪುನಃ ತನ್ನ ಪೂರ್ವದ ಪ್ರಗತಿಯ ಮಟ್ಟಕ್ಕೇ ಮುಟ್ಟಬೇಕು. ಮನುಷ್ಯತ್ವವನ್ನು ಹೊಂದಿದ ನಂತರ ಜೀವನಿಗೆ ಪಶುಯೋನಿಯು ನಿಶ್ಚಿತ ವಾಗಿ ಅಸಾಧ್ಯವೆಂದು ಹೇಳುವಷ್ಟು ಸೃಷ್ಟಿಯ ನಿಯಮವು ಸರಳವಾಗಿರುವ ದಿಲ್ಲ. ಆದ್ದರಿಂದ ನಾವು ಮೇಲೆ ಹೇಳಿದ ಕಾರಣಗಳ ಮೂಲಕ ಅಧೋ ಗತಿಯು ಕೆಲಕಾಲ ಆಗಬಹುದು ಆದರೆ ಸರ್ವಸಾಮಾನ್ಯರ ಈ ಅಧೋ ಗತಿಯ ಕಲ್ಪನೆಯಲ್ಲಿ ತುಸು ಅತಿಶಯೋಕ್ತಿಯೂ ಇದ್ದದ್ದು ಕಂಡುಬರುತ್ತದೆ. ಮನುಷ್ಯ ಜೀವವು ಪುನಃ ಪಶುಯೋನಿಯಲ್ಲಿ ಜನ್ಮ ತಾಳುವದು ಸಂಭವ ನೀಯವಿರಲಿ ಅಥವಾ ಇರದಿರಲಿ, ಸರ್ವಸಾಮಾನ್ಯ ನಿಯಮವೆಂದರೆ, ಜೀವನು ಒಮ್ಮೆ ಮನುಷ್ಯಯೋನಿಯಲ್ಲಿ ಜನ್ಮಪಡೆಯುವಷ್ಟು ಪ್ರಗತಿಯನ್ನು ಹೊಂದಿದ ನಂತರ, ಅವನು ಪುನಃ ಪುನಃ ಅದೇ ಯೋನಿಯಲ್ಲಿಯೇ ಜನ್ಮ ತಾಳಬೇಕು

ಆದರೆ, ಮನುಷ್ಯಯೋನಿಯಲ್ಲಿ, ಜೀವಾತ್ಮನ ಅನೇಕ ಜನ್ಮಗಳೇಕೆ ? ಒಂದೇ ಜನ್ಮವು ಯಾಕಾಗಬಾರದು ? ಎಂಬ ಪ್ರಶ್ನೆಯು ಮುಂದೆ ಬರು ತ್ತದೆ. ಇದರ ಉತ್ತರವು ಮನುಷ್ಯಯೋನಿಯಲ್ಲಿ, ಜೀವನು ಸಾಧಿಸಬೇಕಾದ ಪ್ರಗತಿಯ ಲಕ್ಷಣದ ಮೇಲೆ ಅವಲಂಬಿಸಿರುತ್ತದೆ. ಮನುಷ್ಯಯೋನಿಯಲ್ಲಿ

ಅವನ ಜನ್ಮವು ಈ ಸ್ಥೂಲ ಶರೀರದ ಉನ್ನತಿಯ ಕೊನೆಯ ಮಟ್ಟದಲ್ಲಿ ಆಗುತ್ತಿದ್ದು, ಈ ಶರೀರದಲ್ಲಿ ಅವನ ಮುಂದಿನ ಆಧ್ಯಾತ್ಮಿಕ ಪ್ರಗತಿಗೆ ತಕ್ಕಷ್ಟು ಪ್ರಾಣಮಯ ಮತ್ತು ಮನೋಮಯ ಕೋಶಗಳೂ ಉತ್ಕ್ರಾಂತ ವಾಗಿರುತ್ತವೆ. ಈ ಸ್ಥೂಲ ಮತ್ತು ಸೂಕ್ಷ್ಮ ಶರೀರಗಳ ಸಹಾಯದಿಂದ ಅವನಿಗೆ ಇನ್ನು ಮುಂದೆ ಆಧ್ಯಾತ್ಮಿಕ ಉನ್ನತಿಯನ್ನು ಹೊಂದುವದಿರುತ್ತದೆ. ಈ ಹೊಸಬಾರಿಯು ಜೀವಾತ್ಮನಿಗೆ ಕಠಿಣತರವಾದದ್ದಿದ್ದು, ಮನುಷ್ಯಜೀವನ ದಲ್ಲಿ ಪ್ರಾಪ್ತವಾದ ಜ್ಞಾನ ಮತ್ತು ವಿವೇಕಗಳ ಸಹಾಯದಿಂದ ಅವನಿಗೆ ಈ ದಾರಿಯನ್ನು ಏಕಾಕಿಯಾಗಿ ನಡೆಯಬೇಕಾಗುವದು ನಿಸರ್ಗದ ಸಹಾಯವು ಅವನಿಗೆ ಮೊದಲಿನಂತೆ ಇದ್ದಾಗ್ಯೂ, ಅವನ ಈಗಿನ ಮನೋರಚನೆಯು ಮೊದಲಿನಂತೆ ಈ ಸಹಾಯವನ್ನು ಪಡೆಯಲಿಕ್ಕೆ ಅನುಕೂಲವಿರುವದಿಲ್ಲ. ಅದು ಈಗ ಮೊದಲಿನಂತೆ ತಾಮಸ ಸ್ವಭಾವದ್ದಿರದೆ ಅಂದರೆ ಸ್ಥೂಲ ಅಜ್ಞಾನಮಯವಿರದೆ ರಾಜಸ ಸ್ವಭಾವದ್ದಾಗಿರುತ್ತದೆ. ಅಂದರೆ ಅತಿಶಯ ಚಂಚಲತೆಗೆ ಪ್ರಾಪ್ತವಾಗಿರುತ್ತದೆ. ಜೀವನ ವ್ಯಕ್ತಿತ್ವಕ್ಕೆ ಈಗ ಸ್ವತಂತ್ರ ವಿಚಾರಶಕ್ತಿಯು ಉಂಟಾಗಿದ್ದು, ಪಶುಜೀವನಕ್ಕಿಂತ ಹೆಚ್ಚು ಕ್ರಿಯಾ ಸ್ವಾತಂತ್ರ್ಯವು ಲಭಿಸಿರುತ್ತದೆ. ಅವನ ಹಿಂದಿನ ಪಶುಜೀವನದಲ್ಲಿಯ ಸಂಸ್ಕಾರಗಳು ಅವನನ್ನು ಹಿಂದಕ್ಕೆಳೆಯಲು ಪ್ರಯತ್ನಿಸುತ್ತಿದ್ದು ನಿಸರ್ಗತಃ ಅವನ ಉತ್ಕ್ರಾಂತಿಗೆ ಸಿಗುತ್ತಿದ್ದ ಬಲವು ಈ ಹಿಂದೆಳೆತದಿಂದ ಕಡಿಮೆ ಯಾಗುತ್ತದೆ. ಇಷ್ಟೇ ಅಲ್ಲ. ಈ ಸಂಸ್ಕಾರಗಳು ಬಲವತ್ತರವಾಗಿದ್ದರೆ ನಿಸರ್ಗದ ಈ ಸುಪ್ತಪ್ರಗತಿಯ ಒತ್ತರವನ್ನು ಯಥಾರ್ಥ ತಿಳಿದುಕೊಳ್ಳುವ ಸಾಮರ್ಥ್ಯವು ನಷ್ಟವಾಗುತ್ತದೆ. ಮನುಷ್ಯನು ಕಾಡುಸ್ಥಿತಿಯಲ್ಲಿದ್ದಾಗ ಅವನಿಗೆ ತನ್ನ ಈ ಪ್ರಗತಿಯ ಕಲ್ಪನೆಯು ಪೂರ್ಣವಾಗಿ ಬಂದಿರುವದಿಲ್ಲ. ಇನ್ನೂ ಅವನ ಬುದ್ಧಿಯಲ್ಲಿ ತಮಸ್ಸಿನ ಪ್ರಾಧಾನ್ಯವು ಇರುತ್ತದೆ. ಮನುಷ್ಯ ಜನ್ಮದ ನಿಜವಾದ ಅರ್ಥವು ಅವನಿಗಾಗಿರುವದಿಲ್ಲ. ಮುಂದೆ ತಮೋಗುಣ ದಿಂದ ರಜೋಗುಣ ಪ್ರಧಾನ ಸ್ಥಿತಿಗೆ ಮನಸ್ಸು ಏರಿದಾಗ್ಯೂ ಜೀವನ ಅಂತಿಮ ಧ್ಯೇಯದ ಕಲ್ಪನೆಯಾಗುವದಿಲ್ಲ. ಉದ್ಯೋಗ, ವೃತ್ತಿ, ವ್ಯಾಪಾರ, ಕಲಾಕೌಶಲ್ಯ, ಮುಂತಾದವುಗಳಿಂದ ಮನುಷ್ಯ ಜಾತಿಯ ಆಧಿಭೌತಿಕ ವಿಷಯಸುಖವನ್ನು ಬೆಳೆಸುವ ಕಡೆಗೇ ಅವನ ಲಕ್ಷ್ಯವಿರುತ್ತದೆ ಮುಂದೆ

ಈ ರಜೋಗುಣವನ್ನು ಜಯಿಸಿ ಜೀವನು ಕೇವಲ ಸಾತ್ವಿಕವಾದ ಆಧ್ಯಾತ್ಮಿಕ ಕಲ್ಪನೆಯನ್ನು ಆತ್ಮಸಾತ್ ಮಾಡಿಕೊಳ್ಳುವ ವರೆಗೆ ಈ ಮನುಷ್ಯ ಯೋನಿಯಲ್ಲಿಯೇ ಜೀವನಿಗೆ ಬಹುಕಾಲ ಜನ್ಮತಾಳಬೇಕಾಗುತ್ತದೆ. ಆದ್ದರಿಂದ ಬುದ್ಧಿಯು ಪೂರ್ಣ ಮತ್ತು ಯಥಾರ್ಥ ಬೆಳವಣಿಗೆಯಾಗುವ ವರೆಗೆ ಅವನು ಮನುಷ್ಯ ಯೋನಿಯಲ್ಲಿಯೇ ಅನೇಕ ಜನ್ಮಗಳನ್ನು ಹೊಂದುವನು. ಪ್ಲೇಟೋ ಅಥವಾ ಶಂಕರಾಚಾರ್ಯರಂಥ ಮಾನವೀ ಪ್ರಗತಿಯ ಪರಾಕಾಷ್ಟಕ್ಕೆ ಮುಟ್ಟಿದ ಸಂತರಿಗೂ ಕೂಡ ಪುನರ್ಜನ್ಮವು ತಪ್ಪೀತೆಂದು ನಿಶ್ಚಿತವಾಗಿ ಹೇಳಲಿಕ್ಕೆ ಬರುವದಿಲ್ಲ. ಇವರಿಗಿಂತ ಹೆಚ್ಚಿನವರನ್ನು ನಾವು ಈ ಲೋಕದಲ್ಲಿ ಕಾಣದ್ದರಿಂದ ಪುನರ್ಜನ್ಮ ಚಕ್ರದಿಂದ ಅವರು ಮುಕ್ತರಾಗಿರಬಹುದೆಂದು ನಾವು ಕಲ್ಪಿಸುತ್ತೇವೆ. ಆದರೆ ಕೆಲವುಸಾರೆ ಇದು ನಮ್ಮ ಭ್ರಾಮಕ ತಿಳುವಳಿಕೆಯೂ ಆಗಬಹುದು. ಮನುಷ್ಯ ಜೀವನದಲ್ಲಿಯೇ ಇದಕ್ಕಿಂತ ಹೆಚ್ಚಿನ ಗತಿಯನ್ನು ಸಾಧಿಸುವದಕ್ಕಾಗಲಿ, ಅಥವಾ ಇದಕ್ಕಿಂತ ಹೆಚ್ಚಿನ ದಿವ್ಯ ಕಾರ್ಯಗಳನ್ನು ಈ ದೇಹದಿಂದಲೇ ಸಾಧಿಸಬೇಕೆಂದಾಗಲಿ, ಆ ಜೀವಗಳ ವಿಚಾರವಿರಬಹುದು. ಇಂಥ ಜೀವಗಳ ಪುನರ್ಜನ್ಮದಿಂದ ಮತ್ತು ಅವರ ಐಹಿಕ ಆಚಾರ ವಿಚಾರಗಳಿಂದ ಸಾಮಾನ್ಯರಿಗೆ ಮಾರ್ಗದರ್ಶನವಾಗಬೇಕೆಂದು ಈಶ್ವರೇಚ್ಛೆ ಇರಬಹುದು. ಆದರೆ ನಾವು ಯಾವದೊಂದು ಜೀವದ ಜನ್ಮ-ಮರಣ ಗತಿಯು ನಿಂತಿತೆಂದು ಹೇಳಬೇಕಾದರೆ ಆ ಸಂತರು ಮುಟ್ಟಿದ ಮಟ್ಟವನ್ನಾದರೂ ಪ್ರತಿಯೊಂದು ಪ್ರಾಣಿಯು ಮುಟ್ಟಲಿಕ್ಕೇಬೇಕು.

ತನ್ನ ದೇಹ ಮತ್ತು ಬುದ್ಧಿ ಇವಿಷ್ಟೇ ತಾನೆಂಬ ಸಂಕುಚಿತ ಅಜ್ಞಾನ ಮನೋವೃತ್ತಿಯನ್ನೂ, ಜೀವನವನ್ನೂ ಬಿಟ್ಟು ಸರ್ವಶಕ್ತಿಮಾನ್, ಸರ್ವವ್ಯಾಪೀ, ಸಚ್ಚಿದಾನಂದ ಪರಮಾತ್ಮನೇ ತಾನಿರುವೆನೆಂಬದನ್ನು ತಿಳಿದುಕೊಂಡು ವಿಶ್ವಕುಟುಂಬಿಯಾಗುವದೇ ಇಹಲೋಕದಲ್ಲಿಯ ಮನುಷ್ಯ ಜನ್ಮದ ಗುರಿಯಾಗಿರುವದು. ಇದು ಜೀವನ ಆತ್ಮವಿಕಾಸದಿಂದಲೇ ಆಗಬೇಕು ಶಾಸ್ವತವಾಗಿ ಈ ಲೋಕದಲ್ಲಿಯ ಮನುಷ್ಯ ಜನ್ಮವನ್ನು ಬಿಟ್ಟು ಮೇಲಕ್ಕೇರಬೇಕಾದರೆ ಜೀವನಿಗೆ ತನ್ನ ಸತ್ಯ ಸ್ವರೂಪವಾದ ಆತ್ಮನ ಯಥಾರ್ಥ ಜ್ಞಾನವಾಗಿ ಅವನು ಆಧ್ಯಾತ್ಮ ಜೀವನವನ್ನು ಇಹಲೋಕದಲ್ಲಿ

ಆಚರಿಸಿರಬೇಕು. ಮೇಲೆ ವರ್ಣಿಸಿದ ಸ್ಥಿತಿಯು ಮನುಷ್ಯನ ಪ್ರಾಪ್ತವ್ಯದ ಕೊನೆಯಾದಾಗ್ಯೂ ಅವನು ಇನ್ನೂ ಮುಂದೆ ಸಂಪಾದಿಸತಕ್ಕ ಆತ್ಮನ ಹೆಚ್ಚಿನ ವಿಕಾಸದ ಸ್ಥಿತಿಯನ್ನು ಈ ಮನುಷ್ಯದೇಹದಲ್ಲಿಯೇ ಪ್ರಾಪ್ತಮಾಡಿ ಕೊಳ್ಳಬಹುದು. ಈಗಿನ ಆಧ್ಯಾತ್ಮಿಕ ಸ್ಥಿತಿಯು ಅವನಿಗೆ ಮುಂದಿನ ಗತಿ ಯನ್ನು ಸೂಚಿಸುತ್ತದಷ್ಟೇ. ಈಗ ಪ್ರಾಪ್ತವಾಗಿರುವ ಅಪರಿಪೂರ್ಣ ಮನುಷ್ಯಮಟ್ಟದಿಂದ ನಿಸರ್ಗದ ಉತ್ಕ್ರಾಂತಿಯ ಕೊನೆಯು ಹೇಗೆ ಆಗಲಾರದೋ ಹಾಗೆಯೇ ಮನುಷ್ಯ ಜನ್ಮದ ಸಾರ್ಥಕತೆಯು ಆತ್ಮಜ್ಞಾನ ದಿಂದಾದರೂ ಅದು ಜೀವಾತ್ಮನ ಉತ್ಕ್ರಾಂತಿಯ ಕೊನೆಯಾಗಲಾರದು. ಮನುಷ್ಯ ಜೀವನದಲ್ಲಿಯ ಬುದ್ಧಿಯು ವಿಶ್ವರಚನೆಯ ಕೊನೆಯ ತತ್ವವೆಂದು ಹೇಳಲಿಕ್ಕೆ ಬರುವದಿಲ್ಲ. ಶ್ರೇಷ್ಠ ತರಗತಿಯ ಮನುಷ್ಯ ಬುದ್ಧಿಗೂ ಆಕಲನ ವಾಗದ-ತಿಳಿಯದ ಹೆಚ್ಚಿನ ಸುಪ್ತವಾದ ಶಕ್ತಿಯು ಮನುಷ್ಯನಲ್ಲಿ ಇನ್ನೂ ಇರುತ್ತಿದ್ದರೆ ಅವನ ಉತ್ಕ್ರಾಂತಿಯು ಪೂರ್ಣವಾಯಿತೆಂದು ತಿಳಿಯು ವದು ತಪ್ಪಾಗುವದು ಈ ಶಕ್ತಿಗಳು ಪೂರ್ಣ ವಿಕಾಸಹೊಂದುವವರೆಗೆ ಪುನರ್ಜನ್ಮದ ಚಕ್ರವು ಅವನನ್ನು ಬಿಡಲಾರದು. ಮನುಷ್ಯನಲ್ಲಿ ಕಂಡು ಬರುವ ಪರಿಪಕ್ವವಾದ ಬುದ್ಧಿಗಿಂತಲೂ ಹೆಚ್ಚಿನ ತರಗತಿಯ ಶ್ರೇಷ್ಠತರವಾದ ಬುದ್ಧಿ—ಅಥವಾ ಅತಿಮಾನುಷ ಬುದ್ಧಿಯೂ ಉಂಟು. ಅದೂ ಈ ಉತ್ಕ್ರಾಂತಿಯಲ್ಲಿಯ ಮುಂದಿನ ದಾರಿಯೇ ಆಗಿದೆ. ಬುದ್ಧಿ ತಳಹದಿ ಯಾಗಿರುವ ಈಗಿನ ಆತ್ಮರೂಪವು ನಷ್ಟವಾಗಿ ಕೇವಲ ಆತ್ಮಸ್ವರೂಪವು ಪ್ರಾಪ್ತವಾದ ಹೊರತು ಮುಕ್ತಿಯಿಲ್ಲ. ಈ ಅತಿಮಾನುಷ ಬುದ್ಧಿಯೂ ಮನುಷ್ಯದೇಹವನ್ನು ಧರಿಸಿ ಈ ಲೋಕದಲ್ಲಿ ಮನುಷ್ಯ ಜಾತಿಯ ನಾಯಕ ನೆನಿಸಿಕೊಳ್ಳಬಹುದು

**ಸಾರಾಂಶ :—** ಈ ಪ್ರಕಾರ ಪುನರ್ಜನ್ಮದ ಕಲ್ಪನೆಗೆ ತರ್ಕಶುದ್ಧ ವಾದ ತಾತ್ವಿಕ ತಳಹದಿ ಇರುತ್ತದೆ. ನಿಸರ್ಗದ ಕ್ರಿಯೆಯಲ್ಲಿ ಉತ್ಕ್ರಾಂತಿ ತತ್ವವೇ ಅಡಕವಾಗಿದ್ದಲ್ಲಿ ಮತ್ತು ಸತ್ಯಸ್ವರೂಪವುಳ್ಳ ವ್ಯಕ್ತಿತ್ವಯುಕ್ತ ಜೀವನು ಈ ಉತ್ಕ್ರಾಂತಿಗೆ ಒಳಪಟ್ಟ ನಿಸರ್ಗದಲ್ಲಿ ಉತ್ಪನ್ನನಾಗುತ್ತಿದ್ದಲ್ಲಿ ಪುನರ್ಜನ್ಮವು ತರ್ಕಶುದ್ಧವಾದ ಕಲ್ಪನೆಯಾಗಿರುತ್ತದೆ. ಈ ಸತ್ಯಸ್ವರೂಪ

ನಾದ ಜೀವಾತ್ಮನ ಅಸ್ತಿತ್ವವನ್ನೇ ನಾವು ಅಲ್ಲಗಳೆದರೆ ಈ ಸೃಷ್ಟಿಯಲ್ಲಿಯ ಉತ್ಕ್ರಾಂತಿಯು ಒಂದು ನಿರ್ಹೇತುಕ ಅನವಶ್ಯಕವಾದ ಯಂತ್ರವಾಗುತ್ತದೆ. ಚೇತನ ಪ್ರಾಣಿಯ ಜನ್ಮವೂ ಈ ವಿಚಿತ್ರ ಅರ್ಥರಹಿತ ಯಂತ್ರದ ಒಂದು ಭಾಗವಾಗುತ್ತದೆ ಮತ್ತು ಜೀವನ ವ್ಯಕ್ತಿತ್ವವು ವಿನಾಶಿಯಿದ್ದು ದೇಹದ ಸಂಗಡಲೇ ಈ ವ್ಯಕ್ತಿತ್ವವು ನಷ್ಟವಾಗುತ್ತಿದ್ದರೆ ಈ ವಿಶ್ವದಲ್ಲಿ ಕಂಡುಬರುವ ಉತ್ಕ್ರಾಂತಿಯ ಗತಿಯು ವಿಶ್ವಾತ್ಮನ ಒಂದು ಆಟವಾಗಿ ಅದರಲ್ಲಿ ಜೀವನು ಒಂದು ಜಾತಿಯಿಂದ ಮತ್ತೊಂದು ಮೇಲ್ತರಗತಿಯ ಜಾತಿಗೆ ಏರುತ್ತಿರುವ, ಪ್ರತಿ–ಜನ್ಮದಲ್ಲಿಯೂ ಬದಲುತ್ತಿರುವ ಒಂದು ಸಂತತಪ್ರವಾಹರೂಪನಾಗುತ್ತಾನೆ. ಈ ಕಲ್ಪನೆಯಲ್ಲಿ ಉತ್ಕ್ರಾಂತಿಯು ಪುನರ್ಜನ್ಮದ ಅವಶ್ಯಕತೆಯನ್ನು ಸಿದ್ಧಮಾಡಲಾರದು. ಅಥವಾ ಬ್ರಹ್ಮ ತತ್ವವೇ ಮಾಯಿಕ ವ್ಯಕ್ತಿತ್ವವನ್ನು ಉಂಟುಮಾಡುತ್ತಿದ್ದರೆ ಪುನರ್ಜನ್ಮದ ಶಕ್ಯತೆಯನ್ನು ಕಲ್ಪಿಸಬಹುದಾದರೂ ಅದು ಆತ್ಮವಿಕಾಸದ ಒಂದು ಅಂಗವಾಗಲಾರದು. ಆದರೆ ಅದು ತನ್ನ ಮಾಯಿಕ ರೂಪವನ್ನು ಶಕ್ಯವಿದ್ದಷ್ಟು ಇಟ್ಟುಕೊಳ್ಳುವ ಸಾಧನವಾಗಬಹುದು. ಹಾಗೂ ಒಂದು ಸತ್ಯಸ್ವರೂಪದ ಸ್ವತಂತ್ರ ವ್ಯಕ್ತಿತ್ವವುಳ್ಳ ಜೀವ ಅಥವಾ ಪುರುಷನು ಈ ದೇಹದಲ್ಲಿ ತನ್ನ ಉದ್ದೇಶದ ಸಾಧನೆಗಾಗಿದ್ದು ಅದನ್ನು ಅವನು ತನ್ನ ಉದ್ದೇಶ ಸಾಧನೆಯ ಸಾಧನವನ್ನಾಗಿ ಉಪಯೋಗಿಸಿಕೊಳ್ಳುತ್ತಿದ್ದರೆ ಪುನರ್ಜನ್ಮವು ಶಕ್ಯವಾಗಬಹುದು. ಆದರೆ ಅವನು ತನ್ನ ಸಾಧನದ ಉಪಯೋಗದಲ್ಲಿ ಸ್ವತಂತ್ರನಿರುವ ಕಾರಣ ಜೀವಾತ್ಮನು ಈ ಸೃಷ್ಟಿಯ ಉತ್ಕ್ರಾಂತಿಗೆ ಒಳಪಟ್ಟವನಾಗಲಾರನು. ಮತ್ತು ಜೀವಾತ್ಮನ ದೇಹದಲ್ಲಿಯ ವಾಸವು ಕ್ಷಣಿಕ ದೃಶ್ಯವಾಗಬಹುದು. ಅವನಿಗೆ ಈ ಲೋಕದಲ್ಲಿ ಭೂತ ಅಥವಾ ಭವಿಷ್ಯತ್ಕಾಲಗಳು ಇರಲಾರವು. ಈ ಜನ್ಮದ ಹಿಂದೆಯೂ ಮರಣದ ನಂತರವೂ ಈ ಲೋಕದಲ್ಲಿ ಅವನಿಗೆ ಜನ್ಮವೆತ್ತುವದು ಅವಶ್ಯವಿರುವದೆಂದು ಪ್ರತಿಪಾದಿಸುವದು ಕಠಿಣವಾಗುತ್ತದೆ. ಆದರೆ ಉತ್ಕ್ರಮಣ ಹೊಂದುತ್ತಿರುವ ಶರೀರವೇ ಜ್ಞಾನವಿಕಾಸಕ್ಕೆ ಸಾಧನವಾಗಿದ್ದು ಅದರಲ್ಲಿ ವಾಸಿಸುತ್ತಿರುವ ಜೀವನು ತತ್ವತಃ ಜ್ಞಾನಮಯನೂ, ಸತ್ಯಸ್ವರೂಪನೂ ಇದ್ದರೆ ಮಾತ್ರ ಈ ನಿಸರ್ಗದಲ್ಲಿ ಕ್ರಮದಿಂದ ಬೆಳೆಯುತ್ತಿದ್ದ ಅವನ ಅನುಭವವೇ ಉತ್ಕ್ರಾಂತಿಯ ರೂಪದಲ್ಲಿ ಪರಿಣಮಿ

ಸುವದೆಂದು ಹೇಳಬೇಕಾಗುವದು ಮತ್ತು ಪುನರ್ಜನ್ಮವು ಈ ಜ್ಞಾನವಿಕಾಸ ರೂಪ ಉತ್ಕ್ರಾಂತಿಗೆ ಅಪರಿಹಾರ್ಯವಾದ ಒಂದೇ ಸಾಧನವಾಗುತ್ತದೆ. ಜೀವನ ಪ್ರಥಮ ಜನ್ಮವು ಈ ಕ್ರಮದಲ್ಲಿ ಎಷ್ಟು ಮಹತ್ವದ್ದೋ ಅಷ್ಟೇ ಮಹತ್ವದ್ದು ಎರಡನೆಯ ಅಥವಾ ಅದರ ಮುಂದಿನ ಜನ್ಮಗಳೂ ಆಗುವವು. ಯಾಕಂದರೆ ಪುನರ್ಜನ್ಮವಿಲ್ಲದ ಪ್ರಥಮ ಜನ್ಮವು ಪ್ರವಾಸಿಗನ ಪ್ರವಾಸದಲ್ಲಿಯ ಕೇವಲ ಮೊದಲನೆಯ ಹೆಜ್ಜೆಯೇ ಆಗುವದು. ಊರನ್ನು ಮುಟ್ಟಲು ಹೊರಟ ಪ್ರವಾಸಿಗನ ಆರಂಭ ಸ್ಥಾನವೇ ಆಗುವದು. ಆದ್ದರಿಂದ ಪುನರ್ಜನ್ಮವು ಇನ್ನೂ ಅಪೂರ್ಣ ಸ್ಥಿತಿಯಲ್ಲಿದ್ದ ದೇಹಧಾರಿ ಜೀವನಿಗೆ ಪೂರ್ಣತ್ವದ ಆಶ್ವಾಸನವನ್ನು ಕೊಡುವ, ಅವನ ಆತ್ಮಸ್ವರೂಪದ ಗುರಿಯನ್ನು ವ್ಯಕ್ತಗೊಳಿಸುವ ಏಕಮೇವ ಸಾಧನವಾಗುತ್ತದೆ.

---

# ಎರಡನೆಯ ಪರಿಚ್ಛೇದ

## ಪರಲೋಕಗಳು



ನಾವು ಈ ಜಗತ್ತಿನಲ್ಲಿ ಉತ್ಕ್ರಾಂತಿಯ ತತ್ವಕ್ಕನುಗುಣವಾಗಿ ಜೀವನ ಜ್ಞಾನ ಸ್ವರೂಪದ ಬೆಳವಣಿಗೆಯನ್ನೂ ಮತ್ತು ಪುನಃ ಪುನಃ ಸ್ಥೂಲ ದೇಹವನ್ನು ಧಾರಣಮಾಡುವ ಈ ಜೀವನ ವ್ಯಕ್ತಿಯ ಪುನರ್ಜನ್ಮದ ಅವಶ್ಯಕತೆಯನ್ನೂ ಕಂಡೆವು. ಈ ನಮ್ಮ ಹಿಂದಿನ ಪ್ರತಿಪಾದನೆಯನ್ನು ಒಪ್ಪಿದರೆ ಮುಂದೆ ಉದ್ಭವಿಸುವ ಮತ್ತೊಂದು ಪ್ರಶ್ನೆ ಏನೆಂದರೆ ಈ ಜಗತ್ತಿನಲ್ಲಿ ಕಂಡುಬರುವ ಉತ್ಕ್ರಾಂತಿಯ ಗತಿಯು ಈ ಲೋಕಕ್ಕಷ್ಟೇ ಸಂಬಂಧಿಸಿರುವದೋ ಅಥವಾ ಈ ಗತಿಯು ಇಲ್ಲಿಗೇ ಮುಗಿಯದೆ ಇದೊಂದು ವಿಶ್ವವ್ಯಾಪೀ ತತ್ವದ ಭಾಗವಾಗಿ ನಮಗೆ ಇಲ್ಲಿ ಗೋಚರವಾಗುವದೋ? ಇದರ ಉತ್ತರದ ಬೀಜವು ನಾವು ಹಿಂದೆ ಹೇಳಿದ ಜಗತ್ತಿನ ಉತ್ಪತ್ತಿಯ ಮೀಮಾಂಸೆಯಲ್ಲಿಯೇ ಇರುವದು. ಪರಿಪೂರ್ಣ ಸಚ್ಚಿದಾನಂದ ಸರ್ವಜ್ಞ ಪರಮಾತ್ಮನೇ ತನ್ನ ಸತ್ಯಸ್ವರೂಪದ ಅನುಭವವನ್ನು ಪಡೆಯುವದಕ್ಕೋಸ್ಕರ ಅಜ್ಞಾನಕ್ಕಿಳಿದು ಈ ವಿಶ್ವರೂಪದಿಂದ ನಾಮರೂಪಗಳನ್ನು ಧಾರಣ ಮಾಡಿರುವನೆಂದೂ, ತನ್ನ ಸತ್ಯಸ್ವರೂಪದ ಈ ಸಂಶೋಧನ ಕ್ರಿಯೆಯೇ ಉತ್ಕ್ರಾಂತಿಯೆಂದೂ ನಾವು ಹೇಳಿದ್ದೇವೆ. ಈ ಜಗತ್ತನ್ನಷ್ಟೇ ಅವಲೋಕನ ಮಾಡುತ್ತಿರುವ ನಮಗೆ ಈ ಲೋಕವು ಪರಮಾತ್ಮನ ವ್ಯಾಪಕವಾದ ಈ ಕ್ರಿಯೆಯ ಪರಿಸಮಾಪ್ತಿಯೆಂದು ಕಂಡುಬರಲಾರದು. ಯಾಕಂದರೆ ಈ ಜಗತ್ತು ಅಪೂರ್ಣತೆ, ದುಃಖ, ಕುಂದುಕೊರತೆಗಳಿಂದ ತುಂಬಿದ್ದಿದ್ದು, ಇಷ್ಟರಿಂದಲೇ ಜ್ಞಾನವಾನ್ ಪ್ರಾಣಿಯ ಸಮಾಧಾನವಾದೀತೆಂದು ಅನಿಸುವದಿಲ್ಲ. ಈ ಜಗತ್ತು ಪರಮಾತ್ಮನ ಪರಿಪೂರ್ಣವಾದ ವಿಶ್ವರಚನೆಯ ಒಂದು ಅಂಶ ಮಾತ್ರ ಇದ್ದು ಈ ಜಗತ್ತಿಗಿಂತ ಮೇಲ್ತರಗತಿಯ ಭುವನಗಳು ಅಂದರೆ

ಮೇಲಿನ ಮಟ್ಟಕ್ಕೆ ಮುಟ್ಟಿದ ಜೀವಗಳ ವಾಸಸ್ಥಾನಗಳೂ ಇರಬಹುದೆಂದು ಈ ಜಗತ್ತಿನ ಅಪೂರ್ಣತೆಯಿಂದ ಊಹಿಸಲು ಆಸ್ಪದವಿದೆ. ಈ ಭುವನಗಳು ಇದ್ದ ಪಕ್ಷಕ್ಕೆ ಈ ಉತ್ಕ್ರಾಂತಿಗೆ ಅವೂ ಸಂಬಂಧಿಸಿರಬೇಕು. ಪರಲೋಕಗಳ ಪರಿಣಾಮವು ಈ ಲೋಕಗಳ ಮೇಲೆ ಹೇಗೆ ಆಗಬೇಕು? ಪ್ರಾಣ, ಮನಸ್ಸು, ಮತ್ತು ಜೀವ, ಇವುಗಳಲ್ಲಿ ಸುಪ್ತವಾಗಿದ್ದ ತತ್ವಗಳನ್ನು ಜಾಗ್ರತಾವಸ್ಥೆಗೆ ತಂದು ಈ ಜಗತ್ತಿನಲ್ಲಿ ಅವುಗಳ ವರ್ಚಸ್ಸು ಬೆಳೆಯುವಂತೆ ಮಾಡುವದು ಈ ಲೋಕಗಳ ಅಸ್ತಿತ್ವಪ್ರಭಾವದಿಂದ ಆಗಬಹುದೇ? ಅಥವಾ ಇದಕ್ಕಿಂತ ಹೆಚ್ಚಿನ ಯಾವ ಸಂಬಂಧವನ್ನೂ ಅವು ಈ ಜಗತ್ತಿನ ಸಂಗಡ ಇಟ್ಟುಕೊಳ್ಳಲಾರವೆಂದು ನಾವು ನಿಶ್ಚಿತವಾಗಿ ಹೇಳಬಹುದೇ? ಇಹಲೋಕ ಮತ್ತು ಪರಲೋಕ ಇವುಗಳ ಜೀವನದಲ್ಲಿ ಪರಸ್ಪರ ಪ್ರತ್ಯಕ್ಷ ವ್ಯವಹಾರವೂ ಇರಬಹುದೇ? ಎಂಬ ಪ್ರಶ್ನೆಗಳು ಉದ್ಭವಿಸುತ್ತವೆ. ಆದ್ದರಿಂದ ನಾವು ಈ ವಿಷಯವನ್ನು ಹೆಚ್ಚು ಆಳವಾಗಿ ವಿಚಾರಮಾಡಿ ಈ ಲೋಕಗಳಲ್ಲಿಯ ಪರಸ್ಪರ ಸಂಬಂಧ ಮತ್ತು ವ್ಯವಹಾರ ಇವುಗಳ ಸ್ವರೂಪ ಮತ್ತು ಮರ್ಯಾದೆಯನ್ನು ಉತ್ಕ್ರಾಂತಿ ಮತ್ತು ಪುನರ್ಜನ್ಮಗಳಿಗೆ ಸಂಬಂಧಪಟ್ಟ ವಿಷಯಗಳ ಮಟ್ಟಿಗೆ ವಿಚಾರಮಾಡುವಾ.

ಕೇವಲ ನಿರ್ಗುಣ ಬ್ರಹ್ಮವು ಒಮ್ಮಿಂದೊಮ್ಮೆ ಮಧ್ಯದಲ್ಲಿ ಯಾವ ವಸ್ತುಗಳ ಅಂತರವೂ ಇರದೆ, ಅಜ್ಞಾನದಲ್ಲಿ ಪರಿಣಮಿಸಿದ್ದರಿಂದ ಈ ಸ್ಥೂಲ ಜಗತ್ತು ಉಂಟಾಯಿತೆಂದು ನಾವು ಕಲ್ಪಿಸಿದರೆ ಒಂದು ಕಡೆಗೆ ಶ್ರೇಷ್ಠವಾದ ಅಚಿಂತ್ಯ ಬ್ರಹ್ಮತತ್ವವೂ, ಮತ್ತೊಂದು ಕಡೆಗೆ ಕೇವಲ ಅಜ್ಞಾನದಿಂದ ಉಂಟಾದ ಜಗತ್ತೂ ಇದ್ದು ಜಗತ್ತಿನಿಂದ ಬ್ರಹ್ಮದ ಕಡೆಗಿನ ಜೀವಗಳ ಪ್ರಯಾಣವು ಇದೇ ರೀತಿಯಿಂದ ಒಮ್ಮಿಂದೊಮ್ಮೆ ಸ್ಥೂಲ ಜಗತ್ತಿನಿಂದ ನಿರ್ಗುಣ ಬ್ರಹ್ಮದಲ್ಲಿ ಆಗತಕ್ಕದ್ದು ಬ್ರಹ್ಮ ಮತ್ತು ಸ್ಥೂಲ ಜಗತ್ತು ಇವೆರಡರ ಮಧ್ಯದಲ್ಲಿ ಯಾವ ಪ್ರಕಾರದ್ದೂ ಆಂತರಿಕ ತತ್ವಗಳು ಇರಲಾರವು. ಆದರೆ ಈ ವಿಶ್ವದ ಜಟಿಲವಾದ (ತೊಡಕಿನ) ರಚನೆಯನ್ನು ನೋಡಲಾಗಿ ನಿರ್ಗುಣ ಬ್ರಹ್ಮನ ಕಡೆಗಿನ ಈ ಪಯಣವು ಇಷ್ಟು ಸುಲಭವಾಗಿದ್ದೀತೆಂದು ಅನಿಸುವದಿಲ್ಲ.

ಈ ಜಗತ್ತಿನ ಅಂತಿಮ, ಸ್ಥಿರ, ಮತ್ತು ಸಮತೋಲಂದ ರಚನೆಯು ಹೇಗಾಗಿರಬಹುದೆಂಬ ಬಗ್ಗೆ ಹಲವು ಶಕ್ಯಕಾಣುವ ಕಲ್ಪನೆಗಳು ಇರಬಹುದು. ಸರ್ವಶಕ್ತಿಯುತ ಪರಮೇಶ್ವರನ ಆಜ್ಞೆಯಿಂದ ಇದು ಆಗಿರಬಹುದು. ಅಥವಾ ಆತ್ಮನು ಈ ಅಜ್ಞಾನಮಯ ಅಹಂಕಾರಯುಕ್ತ ಭೌತಿಕ ಜೀವನದ ಕಡೆಗೆ ತಾನಾಗಿಯೇ ಬಂದಿರಬಹುದು. ಅವಿನಾಶೀ ಜೀವನು ತನ್ನ ಮನಸ್ಸಿನ ಒಂದು ಅಚಿಂತ್ಯ ರೀತಿಯಿಂದುಂಟಾದ ಇಚ್ಛೆಯನ್ನು ತೃಪ್ತಿಗೊಳಿಸುವದಕ್ಕೋಸ್ಕರ ಮಹಾಸಾಹಸಮಾಡಿ ತನ್ನ ಜ್ಞಾನಮಯ ಸ್ಥಿತಿಯಿಂದ ಪ್ರಕೃತಿಯ ಕಗ್ಗತ್ತಲೆಯ ಅಗಾಧ ಮಡುವಿನಲ್ಲಿ ಧುಮುಕಿದ್ದರಿಂದ ಈ ಅಜ್ಞಾನಮಯ ಜಗತ್ತು ಹುಟ್ಟಿರಬಹುದು. ಅಥವಾ ಈ ಪ್ರಕಾರ ಜೀವಗಳ ಸಮೂಹವು ಅನೇಕವಾಗಿಯೇ ಈ ಸಂಸಾರ ಕಡಲಿನಲ್ಲಿ ಬಿದ್ದಿರಬಹುದು. ಯಾಕಂದರೆ ಒಂದೇ ಆತ್ಮನಿಂದ ವಿಶ್ವರಚನೆಯಲ್ಲಿಯ ಅನೇಕತ್ವವು ಉಂಟಾಗಲಾರದು. ವಿಶ್ವವು ವ್ಯಕ್ತಿರಹಿತವಾದದ್ದಾಗಲಿ, ಅನೇಕ ವ್ಯಕ್ತಿಗಳಿಂದ ಕೂಡಿದ್ದಾಗಲಿ, ಅಥವಾ ಅಮಿತ ಸರ್ವವ್ಯಾಪೀ ಆತ್ಮನೇ ಅನೇಕತ್ವದಲ್ಲಿ ತನ್ನನ್ನು ತಾನೇ ಪ್ರಕಟಮಾಡಿಕೊಂಡ ಕೃತಿಯಾಗಲಿ ಇರಬೇಕು. ವಿಶ್ವಾತ್ಮನ ಇಚ್ಛೆಯು ಪರಮಾತ್ಮನನ್ನೇ ತನ್ನ ಸಂಗಡ ಅಜ್ಞಾನ ಶಕ್ತಿಯಿಂದ ಈ ಜಗತ್ತನ್ನು ರಚಿಸುವದಕ್ಕೋಸ್ಕರ ಕೆಳಗೆಳೆದಿರಬಹುದು. ಇದೂ ಇರದಿದ್ದರೆ, ಸನಾತನ ಸರ್ವಜ್ಞನಾದ ವಿಶ್ವಾತ್ಮನೇ ತನ್ನ ಜ್ಞಾನವನ್ನು ಅಜ್ಞಾನ ಕತ್ತಲೆಯಲ್ಲಿ ಅಕಸ್ಮಾತ್ತಾಗಿ ಚಲ್ಲಿದಾಗ ವೈಯಕ್ತಿಕ ಜೀವಗಳೂ ಅದರ ಸಂಗಡವೇ ಕೆಳಗಿಳಿದು ಪ್ರಾಣ, ಮನಸ್ಸು, ಮತ್ತು ಚಿಚ್ಛಕ್ತಿಗಳ ಮೆಟ್ಟಲನ್ನು ಏರುತ್ತ ಹೋಗುವ ಉತ್ಕ್ರಾಂತಿಯನ್ನು ಆರಂಭಿಸಿರಬಹುದು. ಅಥವಾ ವ್ಯಕ್ತಿತ್ವವುಳ್ಳ ಜೀವನ ಅಸ್ತಿತ್ವವು ಸೃಷ್ಟ್ಯಾರಂಭದ ಮೊದಲು ಇರಲಿಲ್ಲವೆಂದು ತಿಳಿದರೆ—ಅಂದರೆ ನಾವು ಸರ್ವಜ್ಞ ವಸ್ತುವಿನಿಂದ ನಿರ್ಮಿಸಲ್ಪಟ್ಟಿದ್ದರೆ, ನಾವು ಅಚೇತನ ಅಜ್ಞಾನದ ಒಂದು ಮಾಯಿಕ ನಿರ್ಮಿತಿಯಿಂದುಂಟಾಗಿದ್ದರೆ ಅಥವಾ ಸಾಮ್ಯಾವಸ್ಥೆಯಲ್ಲಿದ್ದ ಆದ್ಯಪ್ರಕೃತಿಯಿಂದ ಜಗನ್ನಿರ್ಮಾತ್ರಿಯು ನಾಮರೂಪಗಳನ್ನು ನಿರ್ಮಿಸಿ ಅಸಂಖ್ಯ ಜೀವಗಳ ಉತ್ಪತ್ತಿಯನ್ನು ಮಾಡಿದ್ದರೆ, ನಾನಾಜೀವಗಳು ಅವ್ಯಾಕೃತ ಆದ್ಯಭೌತಿಕ ವಸ್ತುವಿನಿಂದ, (ಕುಂಬಾರನು, ಆಕಾರರಹಿತ ಮಣ್ಣಿನ ಒಂದೇ ಮುದ್ದೆ

ಯಿಂದ ಕೊಡ, ಗಡಿಗೆ, ಹರವಿ ಮುಂತಾದ ನಾನಾ ಆಕಾರಗಳ ವಸ್ತು ಗಳನ್ನು ತಯಾರುಮಾಡುವಂತೆ) ಉತ್ಪನ್ನಮಾಡಲ್ಪಟ್ಟದ್ದರೆ ಅವುಗಳ ಉತ್ಪತ್ತಿಯು ತಾತ್ಪೂರ್ತಿಕವಾಗಿ ಜೀವಗಳು ನಾಶವುಳ್ಳವಾಗುತ್ತವೆ.

ಮೇಲಿನ ಎಲ್ಲ ಅಥವಾ ಯಾವದೊಂದು ಕಲ್ಪನೆಯು ಪ್ರಕಾರ ಕೇವಲ ಎರಡೇ ಲೋಕಗಳ ಅಸ್ತಿತ್ವವು ಶಕ್ಯವಾಗಬಹುದು. ಒಂದು ಬದಿಗೆ ಅಜ್ಞಾನದಿಂದ ಜನಿತವಾದ ಅಚೇತನ ನಿಸರ್ಗದ ಶಕ್ತಿಯು ಈ ಭೌತಿಕ ಸ್ಥೂಲ ಜಗತ್ತನ್ನು ನಿರ್ಮಿಸಿದ್ದು, ಈ ನಿಸರ್ಗ ಶಕ್ತಿಯೇ ಒಂದು ಅಜ್ಞಾತ ಆಂತರಿಕ ಆತ್ಮನ ಇಚ್ಛೆಯಂತೆ ಈ ಸ್ಥೂಲ ಜಗತ್ತಿನ ವಿವಿಧ ವ್ಯವಹಾರ ಗಳನ್ನು ನಿಯಂತ್ರಿಸುತ್ತಿರಬಹು. ಮತ್ತೊಂದು ಬದಿಗೆ ಅತಿಮಾನುಷ ಜ್ಞಾನಮಯ ಒಂದೇ ತತ್ವವಿದ್ದು ಈ ಅಜ್ಞಾನ ಸ್ಥಿತಿಯಿಂದ ಆ ಜ್ಞಾನ-ಮಯ ಸ್ಥಿತಿಯನ್ನು ನಾವು ಸೇರುತ್ತಿರಬಹುದು. ಅಥವಾ ನಾವು ಈ ಭೌತಿಕ ಜಗದ್ರೂಪದ ಒಂದೇ ಲೋಕವಿರಬಹುದೆಂದು ತಿಳಿದುಕೊಂಡರೆ ಇದರ ಆಂತರಿಕ ತತ್ವದ ಹೊರತು ಬೇರೊಂದು ಅಲೌಕಿಕ ತತ್ವವಿರ ಬೇಕೆಂದು ಕಲ್ಪಿಸುವದು ಅವಶ್ಯವಿಲ್ಲ ಆದರೆ ಚೇತನ ಜೀವಗಳ ಬೇರೆ ಬೇರೆ ತರಗತಿಗಳಿದ್ದು ಅವು ವಾಸಿಸುವ ಬೇರೆ ಬೇರೆ ಲೋಕಗಳೂ, ಇರುವ ವೆಂದು ಸಿದ್ಧವಾದರೆ ಮಾತ್ರ ಮೇಲಿನ ತರ್ಕವು ಬಿದ್ದುಹೋಗುವದು. ಆದಾಗ್ಯೂ ನಾವು ಪರಲೋಕಗಳು ಈ ಜಗತ್ತಿನಿಂದಲೇ ಉತ್ಕ್ರಮಿಸುತ್ತಿ ರುವ ಜೀವಗಳ ಸಲುವಾಗಿ ಈ ಜಗತ್ತಿನ ಉತ್ಪತ್ತಿಯ ನಂತರ ನಿರ್ಮಿಸಲ್ಪಟ್ಟ ವೆಂದು ಹೇಳಬಹುದು. ಏನೇ ಆದರೂ, ಒಂದೇ ಭೌತಿಕ ಇಹಲೋಕ ವುಳ್ಳದ್ದಾಗಲಿ, ಅಥವಾ ಅನೇಕ ಲೋಕಗಳಿಂದ ಕೂಡಿದ್ದಾಗಲಿ, ಈ ಎಲ್ಲ ವಿಶ್ವವು ಅಜ್ಞಾನದಿಂದಲೇ ಉತ್ಪತ್ತಿ ಹೊಂದಿದ್ದಿರಬೇಕಾಗುವದು. ಆದರೆ ನಮ್ಮ ಕಲ್ಪನೆಯ ಪ್ರಕಾರ ಜ್ಞಾನಮಯ ಸಚ್ಚಿದಾನಂದ ವಸ್ತುವಿನಿಂದ ಈ ವಿಶ್ವವು ಅಚೇತನವಾದ ಭೌತಿಕ ಜಗತ್ತಿನ ಕಡೆಗೆ ಅವಕ್ರಾಂತವಾಗಿದ್ದು ಪ್ರತಿಕ್ರಿಯೆಯಿಂದ ಈ ಅಜ್ಞಾನವು ಜ್ಞಾನದ ಕಡೆಗೆ ಸಾಗುವದೇ ಜಗತ್ತಿನಲ್ಲಿ ಕಂಡುಬರುವ ಉತ್ಕ್ರಾಂತಿಯು. ಅನಾದ್ಯ ಜ್ಞಾನದಿಂದುಂಟಾದ ಇಚ್ಛೆ ಯನ್ನು ನಾಶಗೊಳಿಸಿ ಜೀವನು ತನ್ನ ಪರಿಮಿತವಾದ ಅಹಂಕಾರಯುಕ್ತ

ವ್ಯಕ್ತಿತ್ವವನ್ನು ಅಖಂಡ ಸಚ್ಚಿದಾನಂದ ಸ್ವರೂಪನಾದ ವಿಶ್ವಾತ್ಮನಲ್ಲಿ ಬೆರೆಸುವದೇ ಇದರ ಉದ್ದೇಶವಿರಬೇಕು.

ಮೇಲೆ ಹೇಳಿದ ಜಗದುತ್ಪತ್ತಿಯ ಕಲ್ಪನೆಗಳಲ್ಲಿ ಮನಸ್ಸಿನ ಉತ್ಪತ್ತಿಯ ಶಕ್ತಿಗೇ ಅಥವಾ ಜೀವನ ವ್ಯಕ್ತಿತ್ವಕ್ಕೇ ನಾವು ಹೆಚ್ಚು ಮಹತ್ವವನ್ನು ಕೊಟ್ಟಿರುತ್ತೇವೆ. ಇವೆರಡಕ್ಕೂ ಜಗದುತ್ಪತ್ತಿಯಲ್ಲಿ ಮಹತ್ವವಾದ ಸ್ಥಾನ ವಿರುವದೇನೋ ನಿಜ. ಆದರೆ ಅವಿನಾಶೀ ಬ್ರಹ್ಮತತ್ವವೇ ಇವೆಲ್ಲವಕ್ಕೂ ಮೂಲಶಕ್ತಿಯಾಗಿರುವದೆಂಬದನ್ನು ನಾವು ಮರೆಯಕೂಡದು. ಕಲ್ಪನಾ ಮಯ ರಚನೆಗೆ ಕಾರಣವಾದ ವಿಚಾರವು ಮನಸ್ಸಿನಲ್ಲಿಯ ಚಲನವಲನವು. (ಈ ರಚನಾತ್ಮಕ ವಿಚಾರವು ತನ್ನನ್ನು ತಾನೇ ತಿಳಿದುಕೊಳ್ಳುವ ಸತ್ಸಂಕಲ್ಪದಿಂದ ಬೇರೆಯಾಗಿದ್ದು ಇದು ಸ್ವಯಂಸಿದ್ಧವಾದ ತನ್ನ ಆತ್ಮ-ಜ್ಞಾನದಿಂದ ನಿಸರ್ಗದ ರಚನೆಗೆ ಕಾರಣವಾಗಿದೆ) ಹಾಗೂ ಇಚ್ಛೆಯು ಮನಸ್ಸಿನಲ್ಲಿಯ ಪ್ರಾಣಶಕ್ತಿಯ ಚಲನವಲನವು. ಜಗತ್ತು ರಚಿತವಾಗುವ ಮೊದಲು ಈ ರಚನೆಗೆ ಕಾರಣವಾದ ಪ್ರಾಣ ಮತ್ತು ಮನಸ್ಸು, ಇವೆರಡೂ ಇರಲಿಕ್ಕೆ ಬೇಕು. ಇವೇ ಈ ಜಗತ್ತಿನ ಉತ್ಪತ್ತಿಯನ್ನು ನಿಶ್ಚಿತವಮಾಡಲಿಕ್ಕೆ ಕಾರಣವಾಗಿರಬೇಕು ಅಂದಮೇಲೆ ಇವೇ ಈ ಸ್ಥೂಲ ಜಗತ್ತಿಗಿಂತ ಸೂಕ್ಷ್ಮಲೋಕಗಳ ರಚನೆಯನ್ನು ನಿಶ್ಚಯಿಸಲಿಕ್ಕೆ ಕಾರಣವೆಂದು ಹೇಳಿದರೆ ತಪ್ಪಾಗಲಾರದು. ಅಥವಾ ನಾವು ಜಗದುತ್ಪತ್ತಿಗೆ ವ್ಯಕ್ತಿಯ ಅಥವಾ ವಿಶ್ವದ ಮನಸ್ಸು-ಪ್ರಾಣಗಳು ಕಾರಣವಾಗಿರದೆ ಪರಿಪೂರ್ಣ ಬ್ರಹ್ಮವೇ ಮೂರ್ತವಾದ ಆಕಾರವನ್ನು ಧಾರಣಮಾಡಬೇಕೆಂದು ತನ್ನನ್ನು ತಾನೇ ಕೆಲಸಕ್ಕೆ ಹಚ್ಚುವಿಕೆಯಾಗಲಿ ತನ್ನ ನಿಜಸ್ವರೂಪವನ್ನು ಮರೆತು ಅದನ್ನು ಹುಡುಕುವ ಉದ್ದೇಶವಾಗಲಿ ಅಥವಾ ತನ್ನ ನಿಜ ಸ್ವರೂಪದ ಆನಂದ ವನ್ನು ಪ್ರಕಟಗೊಳಿಸುವದಕ್ಕೋಸ್ಕರ ಒಂದು ವಿಶಿಷ್ಟ ರಚನೆಯನ್ನು ಮಾಡಬೇಕೆಂಬದಾಗಲಿ ಈ ವಿಶ್ವರಚನೆಗೆ ಕಾರಣವಾಗಿರಬಹುದೆಂದು ಕಲ್ಪಿಸ ಬಹುದು. ಸದ್ವಸ್ತುವಿನ ಕೇವಲ ಆನಂದದ ಪ್ರಕಟನೆಗಾಗಿ ಈ ಜಗತ್ತು ನಿರ್ಮಿತವಾಗಿರದೆ, ಜೀವನ ಕ್ಷಣಕ್ಷಣಕ್ಕೆ ಬದಲುತ್ತಿರುವ ಅಜ್ಞಾನೀ ವ್ಯಕ್ತಿ-ತ್ವದ ತೃಪ್ತಿಗೋಸ್ಕರ ಆಗಿದ್ದರೆ, ವಿಶ್ವೇಶ್ವರನಾಗಲಿ, ಅಥವಾ ಪರಮಾತ್ಮ

ನಾಗಲಿ, ಈ ಜಗತ್ತಿನ ನಿರ್ಮಿತಿಗೆ ಮತ್ತು ಅದನ್ನು ಸಾಕ್ಷಿತ್ವದಿಂದ ನೋಡಲಿಕ್ಕೆ ಕಾರಣನಾಗಲಾರನು. ಜಗನ್ನಿರ್ಮಿತಿಯ ಕೃತ್ಯದಲ್ಲಿ ಈ ಅಜ್ಞಾನೀ ವ್ಯಕ್ತಿಯ ಭಾಗವೇ ಬಹಳ ಹೆಚ್ಚಿನದೆಂಬು ಹಿಂದಿನವರ ವಿಚಾರ ಸರಣಿ ಇದೆ. ಈ ಮಾತು ಕೆಲವಂಶದಿಂದ ಯಥಾರ್ಥವೂ ಇರುವದು. ಯಾಕಂದರೆ ಕೇವಲ ಆತ್ಮನು ಅಪಕ್ರಾಂತಿಯ ಗತಿಗೆ ಒಳಗಾಗಿ ಈ ಸ್ಥೂಲ ಜಗತ್ತಿನ ರೂಪವನ್ನು ಧರಿಸಿದನು. ಈ ಸ್ಥೂಲ ಅಜ್ಞಾನಮಯ ಸ್ಥಿತಿಯಿಂದ ಪರಿವರ್ತನ ಹೊಂದುತ್ತ ತನ್ನ ನಿಜ ಸ್ವರೂಪವನ್ನು ತಿಳಿಯುಲಿಕ್ಕೆ ಯೋಗ್ಯವಾದ ವೈಯಕ್ತಿಯ ಜೀವನವನ್ನು ತಾಳುವ ಪುರುಷನ ಇಚ್ಛೆಯೇ ಜಗದುತ್ಪತ್ತಿಯ ಒಂದು ಮಹತ್ವದ ಕಾರಣವಾಗಿದೆ. ಆದರೆ ಇಷ್ಟರಮೇಲಿಂದ ಈ ವಿಶ್ವವು ವ್ಯಕ್ತಿಯ ಮನಸ್ಸಿನ ರಚನೆಯಾಗಲಾರದು. ಅಥವಾ ಅದು ತನ್ನ ತಿಳುವಳಿಕೆಯ ಪ್ರಕಾರ ರಚಿಸಿದ ಜೀವನಯಾತ್ರೆಯ ನಾಟ್ಯಶಾಲೆಯಾಗಲಾರದು. ಅಥವಾ ಅದು ಜೀವನ ಕೇವಲ ಅಹಂಕಾರದ ತೃಪ್ತಿಗೋಸ್ಕರ ರಚಿತವಾದದ್ದೂ ಇರಲಾರದು ಈ ವಿಶ್ವರಚನೆಯ ಮಹತ್ವಪೂರ್ಣವಾದ ಉದ್ದೇಶವನ್ನೂ ಮತ್ತು ಈ ಉದ್ದೇಶ ಸಾಧನೆಯ ಮೇಲೆ ಇರುವ ವ್ಯಕ್ತಿಯ ಪರಾವಲಂಬಿತ್ವವನ್ನೂ, ನಾವು ತಿಳಿದಂತೆ ಕೇವಲ ಜೀವಸೃಷ್ಟ ಜಗತ್ತಿನ ಉಪಪಾದನೆಯು ನಮ್ಮ ಬುದ್ಧಿಗೆ ಸರಿಯೆಂದು ತೋಚಲಾರದು ಈ ವಿಶ್ವರಚನೆಯು ಬಹು ಅಗಾಧವಾದದ್ದೂ ಮತ್ತು ವ್ಯಾಪಕವಾದದ್ದೂ ಇದ್ದು ಇದನ್ನು ರಚಿಸುವ ಶಕ್ತಿಯು ಈ ಕ್ಷುದ್ರ ಜೀವನಿಗೆ ಇರುವದೆಂದು ತಿಳಿಯುವದು ಶಕ್ಯವಿಲ್ಲ. ಇದರ ರಚನೆ, ಸ್ಥಿತಿ, ಸಂಹಾರಕ್ಕೆ ಅಗಾಧ ಶಕ್ತಿಯುಳ್ಳ ವಿಶ್ವಾತ್ಮನೇ ಸಮರ್ಥನಿದ್ದು ಅವನ ಇರುವು ಅಷ್ಟೇ ವ್ಯಾಪಕ ಸತ್ಯಸ್ವರೂಪದ್ದೂ, ಉದ್ದೇಶವುಳ್ಳದ್ದೂ ಇರಬೇಕಾಗುವದು.

ಇದಲ್ಲದೆ, ಈ ಜಗದುತ್ಪತ್ತಿಗೆ ಕಾರಣವಾದ ಮತ್ತು ಈ ಜಗತ್ತಿನ ಸುಖ ದುಃಖಗಳಿಗೆ ಭಾಗಿಯಾದ ವ್ಯಕ್ತಿತ್ವಯುಕ್ತ ಜೀವಾತ್ಮನೂ ಅವನ ಅಜ್ಞಾನಕ್ಕಿಳಿಯುವ ಇಚ್ಛೆಯೂ ಈ ಜಗತ್ತು ಉತ್ಪನ್ನವಾಗುವ ಮೊದಲೇ ಇರುವದು ಅವಶ್ಯವಿದೆ. ಈ ಜೀವನು ತತ್ವತಃ ವಿಶ್ವಾತೀತ ಜ್ಞಾನಮಯ ಸ್ವರೂಪದವನಿದ್ದು ಆ ಸ್ವರೂಪದಿಂದಲೇ ಅವನು ಈ ಅಜ್ಞಾನ ಸ್ಥಿತಿಗೆ

ಬಂದಿರಬೇಕು. ಹಾಗೂ ಈ ಅಹಂಕಾರಯುಕ್ತ ವ್ಯಕ್ತಿತ್ವದಿಂದ ಅವನು ಪುನಃ ತನ್ನ ಆದ್ಯ ತಾತ್ವಿಕ ಸ್ಥಿತಿಗೇ ಹೋಗುವವನಿರಬೇಕು ಎಂದು ನಾವು ಸಹಜವಾಗಿ ತರ್ಕಿಸಬಹುದು. ಅನಿರ್ಮೇಷವಾದ ಆದ್ಯ ವಸ್ತುವಿನ ಈ ತಾತ್ವಿಕ ಸ್ಥಿತಿಯಲ್ಲಿಯ ಕೆಲವಂಶದಲ್ಲಿ ಯಾವದಾದರೊಂದು ಅಲೌಕಿಕ ಸ್ಫೂರ್ತಿಯಿಂದಾಗಲಿ ಅಥವಾ ಜೀವಾತ್ಮನ ಉದ್ಧಾರವಾಗಬೇಕೆಂದಾಗಲಿ ಚಲನವಲನವು ಉತ್ಪನ್ನವಾಗಿರಬೇಕು. ಅಂದರೆ ಆ ಅಸಂಖ್ಯ ಜೀವ ಜಾತಗಳಲ್ಲಿಯ ಕೆಲವು ಜೀವಗಳಲ್ಲಿ ಉತ್ಪತ್ತಿಯು ಇಚ್ಛೆಯು ಉಂಟಾಗಿರಬೇಕು. ಮತ್ತು ಅವು ಈ ಇಚ್ಛೆಯ ಒತ್ತರದಿಂದ ತಮ್ಮ ಆದ್ಯಸ್ಥಿತಿಯನ್ನು ಬಿಟ್ಟು ಕೆಳಗಿಳಿದದ್ದರಿಂದ ಈ ಅಜ್ಞಾನಮಯ ಜಗತ್ತಿನ ಉತ್ಪತ್ತಿಯಾಗಿರಬೇಕೆಂದು ನಾವು ಊಹಿಸಬಹುದು. ಆದರೆ ಒಂದೇ ವಸ್ತುವಿನ ಅಸ್ತಿತ್ವವು ಇರುವಿಕೆಯ ತಾತ್ವಿಕ ಸ್ಥಿತಿ ಇರುವದರಿಂದ ಅನೇಕ ವಸ್ತುಗಳ ಅಸ್ತಿತ್ವವು ಒಂದೇ ವಸ್ತುವಿನ ಮೇಲೆ ಅವಲಂಬಿಸಿರುವದು. ಆದ್ದರಿಂದ ಅನೇಕ ಜೀವಾತ್ಮಗಳಿಗೆ ಏಕಮೇವಾದ್ವಿತೀಯ ವಸ್ತುವೇ ಆಧಾರವಾಗುತ್ತದೆ. ಅಥವಾ ಒಂದೇ ಸದ್ವಸ್ತುವಿನ ಅನೇಕ ಸ್ತರಗಳುಂಟಾಗುತ್ತವೆ. ಈ ವಿಶ್ವದ ಅಸ್ತಿತ್ವವೂ ಈ ತಾತ್ವಿಕ ತಳಹದಿಯ ಮೇಲೆಯೇ ಉಂಟಾಗಿದೆ. ಜೀವಗಳ ಉತ್ಪತ್ತಿಯ ಪೂರ್ವದಲ್ಲಿಯೇ ಈ ವಿಶ್ವವು ಇತ್ತು. ಅವುಗಳಿಗೆ ಈಗ ಈ ವಿಶ್ವವೇ ಕಾರ್ಯಕ್ಷೇತ್ರವಾಗಿದೆ. ಜೀವಗಳ ಉಗಮಸ್ಥಾನವು ವಿಶ್ವಾತೀತ ಸ್ಥಿತಿ ಇದ್ದಾಗ್ಯೂ ಈ ವಿಶ್ವದಲ್ಲಿಯೇ ಅವುಗಳ ಇರುವಿಕೆಯು ಸಾಧ್ಯ. ವಿಶ್ವಾತ್ಮನ ಇರುವಿಕೆಯಿಂದಲೇ ಜೀವನಿಗೆ ಈ ವಿಶ್ವದಲ್ಲಿಯ ಅಸ್ತಿತ್ವವು ಪ್ರಾಪ್ತವಾಗಿದೆ. ವಿಶ್ವಾತ್ಮನ ಮೇಲೆಯೇ ಜೀವಾತ್ಮನು ಅವಲಂಬಿಸಿರುವನು. ಆದರೆ ವಿಶ್ವಾತ್ಮನು ಮಾತ್ರ ಜೀವಾತ್ಮನ ಮೇಲೆ ಅವಲಂಬಿಸಿರುವದಿಲ್ಲ. ಅಸಂಖ್ಯ ಜೀವಗಳ ಒಟ್ಟುಗೂಡುವಿಕೆಯೆಂದರೆ ವಿಶ್ವಾತ್ಮನಲ್ಲ. ಅನೇಕ ಚೇತನ ವ್ಯಕ್ತಿಗಳ ಜೀವನದ ಒಟ್ಟುಗೂಡುವಿಕೆಯಿಂದ ವಿಶ್ವಾತ್ಮನು ರಚಿತನಾಗಿಲ್ಲ. ವಿಶ್ವಾತ್ಮನು ಇರುತ್ತಿದ್ದರೆ ಈ ವಿಶ್ವದ ಏಕಸೂತ್ರೀ ಕ್ರಿಯಾಶಕ್ತಿಗೆ ಆಧಾರಭೂತವಾಗಿದ್ದ ಕೇವಲ ಸ್ವತಂತ್ರ ಒಂದೇ ಒಂದಾದ ವಸ್ತುವಿನ ಅಸ್ತಿತ್ವವನ್ನು ಊಹಿಸಬೇಕಾಗುವದು. ಮತ್ತು ಅದು ಈ ವಿಶ್ವದಲ್ಲಿಯ ಅನೇಕತ್ವದ ಆಧಾರವಾಗಿಯೂ ಇರುವದೆಂದು ತಿಳಿಯ

ಬೇಕಾಗುವದು. ಈ ವಿಶ್ವದ ಉತ್ಪತ್ತಿಯು ಪರಮೇಶ್ವರನ ಇಚ್ಛೆಗೆ ಸಂಬಂಧವಿಲ್ಲದ ನಾನಾ ಜೀವಗಳ ಇಚ್ಛೆಯಿಂದ ಉಂಟಾಗಿ ಈ ಇಚ್ಛೆಯ ತೀವ್ರತೆಗೆ ಒಳಗಾಗಿ ಸಚ್ಚಿದಾನಂದ ಸ್ವರೂಪ ಬ್ರಹ್ಮವು ನಿರುಪಾಯವಾಗಿ ಅಥವಾ ಜೀವಗಳ ಇಚ್ಛೆಗೆ ಸಹಾನುಭೂತಿಯನ್ನಾಗಲಿ ಅಥವಾ ಅದರ ಬಗ್ಗೆ ಸಹನಶೀಲತೆಯನ್ನಾಗಲಿ ತೋರಿಸಬೇಕೆಂದು ಈ ವಿಶ್ವದ ಅಜ್ಞಾನಕ್ಕೆ ಇಳಿಯಿತೆಂದು ಹೇಳುವದು ಶಕ್ಯವಿಲ್ಲ ಇದು ವಸ್ತುಸ್ಥಿತಿಯ ವಿಪರೀತ ಕಲ್ಪನೆ ಮಾಡಿದಂತಾಗುವದು. ಅನೇಕ ಜೀವಗಳ ಇಚ್ಛೆ ಅಥವಾ ಆಧ್ಯಾತ್ಮಿಕ ಅವಶ್ಯಕತೆಯಿಂದ ಈ ಜಗತ್ತು ಆಗಿದ್ದರೂ ಇದು ಕೆಲವಂಶದಿಂದ ಮಾತ್ರ ಸತ್ಯವಿದೆ. ಆದರೆ ಜಗದುತ್ಪತ್ತಿಯಾಗಬೇಕಾದರೆ ಸಚ್ಚಿದಾನಂದ ಬ್ರಹ್ಮನಲ್ಲಿಯೂ ಇದೇ ಪ್ರಕಾರದ ಜಾಗ್ರತೆಯುಂಟಾಗುವದು ಅವಶ್ಯವಿರುತ್ತದೆ. ಈ ಪ್ರಕಾರದ ಪರಬ್ರಹ್ಮನಾದ 'ಜಾಗ್ರತಿ' ಅಥವಾ 'ಈಕ್ಷಣ'ವೇ (स ईक्षत लोकान्नु सृजा इति —ऐ. उ.) ಜೀವಗಳ ಇಚ್ಛೆಯಿಂದ ಪರಿಣಮಿಸುವ ಜಗನ್ನಿರ್ಮಿತಿಯ ನಾನಾತ್ವದ ಲಕ್ಷಣವಾಗಿರಬೇಕು. ಇಲ್ಲದಿದ್ದರೆ ಅನ್ಯತ್ರ ಈ ವಿಶ್ವರಚನೆಗೆ ಮೂಲಕಾರಣವಾದ ಶಕ್ತಿಯು ಇರಲಾರದು. ಎಲ್ಲ ಜೀವಗಳಿಗೆ ಜ್ಞಾನಶಕ್ತಿಯನ್ನು ಪೂರೈಸುವ ಈ ನಿರ್ವಿಕಲ್ಪ ಪರಬ್ರಹ್ಮವೇ ಮೊದಲು ಮಾಯೆಯ ಬುರುಕೆಯನ್ನು ಹಾಕಿದ ಹೊರತು ಇತರ ಜೀವ ವ್ಯಕ್ತಿಗಳು ಈ ಭೌತಿಕ ಜಗತ್ತಿನಲ್ಲಿ ಅಜ್ಞಾನದ ಆಚ್ಛಾದನವನ್ನು ಧರಿಸುವದು ಶಕ್ಯವಿಲ್ಲ

ಈ ಪ್ರಕಾರ ಪರಬ್ರಹ್ಮ ವಸ್ತುವಿನ ಈಕ್ಷಣವೇ (ಆಲೋಚನೆಯೇ) ಈ ವಿಶ್ವದ ಉತ್ಪತ್ತಿಯ ಮಹತ್ತ್ವದ ಕಾರಣವೆಂದು ನಾವು ನಿಶ್ಚಿತ ಮಾಡಿದ ನಂತರ ಜೀವ–ವ್ಯಕ್ತಿಗಳ ಇಚ್ಛೆಯು ಈ ಉತ್ಪತ್ತಿಗೆ ಕಾರಣವೆಂದು ಹೇಳುವದು ಶಕ್ಯವಿಲ್ಲ. ಯಾಕಂದರೆ ಈ ಪರಬ್ರಹ್ಮ ವಸ್ತುವಿನಲ್ಲಿ ಇಚ್ಛೆಗೆ ಆಸ್ಪದವಿಲ್ಲ. ಈ ಪರಿಪೂರ್ಣ ವಸ್ತುವಿಗೆ ಇಚ್ಛೆ ಇರುವದು ಶಕ್ಯವಿಲ್ಲ. ಇಚ್ಛೆಯು ಅಪೂರ್ಣತೆಯ ಲಕ್ಷಣವಿದ್ದು ಯಾವನಿಗೆ ಇನ್ನೂ ಪ್ರಾಪ್ತವ್ಯವಿರುವದೋ ಅಥವಾ ಸಂಪಾದಿಸತಕ್ಕ— ಉಪಭೋಗಿಸತಕ್ಕ ಅನ್ಯ ವಸ್ತುವು ಇರುವದೋ ಅವನೇ ಇಂಥ ವಸ್ತುವನ್ನು ಸಂಪಾದಿಸಲಿಕ್ಕೆ ಮತ್ತು ಅವುಗಳ ಉಪಭೋಗವನ್ನು ಪಡೆಯಲಿಕ್ಕೆ ಇಚ್ಛೆಮಾಡುತ್ತಾನೆ. ಪರಬ್ರಹ್ಮವಸ್ತುವಿ

ನಲ್ಲಿ ಪರಿಪೂರ್ಣತೆಯ ಆನಂದವಿರುತ್ತದೆ. ಈ ಆನಂದಕ್ಕೆ ಇಚ್ಛೆಯ ಸ್ಪರ್ಶವೂ ಆಗಲಾರದು. ಜಗತ್ತಿನಲ್ಲಿ ಜನ್ಮತಾಳಿದ ನ್ಯೂನತೆಯುಳ್ಳ ಮತ್ತು ಉನ್ನತಿಯನ್ನು ಬಯಸುವ ಜೀವನ ಅಹಂಕಾರದಲ್ಲಿಯೇ ಇಚ್ಛೆಯ ಉತ್ಪತ್ತಿಯಾಗುವದು. ಸರ್ವಜ್ಞ ಪರಬ್ರಹ್ಮವೂ ಅಚೇತನ ಪಂಚ ಭೂತಗಳ ರೂಪಕ್ಕೆ ಇಳಿಯುವ ಸ್ಫೂರ್ತಿಯನ್ನು ತಾಳುವದು ಶಕ್ಯವಿದೆ. ಯಾಕಂದರೆ ಈ ಪೂರ್ಣ ವಸ್ತುವಿಗೆ ತನ್ನನ್ನು ತಾನೇ ಪ್ರಕಟಗೊಳಿಸುವದಕ್ಕೆ ಅದೊಂದು ಶಕ್ಯತೆಯಾಗಿರುತ್ತದೆ. ಆದರೆ, ಭೌತಿಕ ಜಗತ್ತಿನಿಂದ ಉತ್ಕ್ರಾಂತಿಯ ಮೆಟ್ಟಲನ್ನು ಏರುತ್ತ ಅಚೇತನ ವಸ್ತುವೇ ಸಚೇತನವಾಗುವ ಒಂದೇ ಮಾರ್ಗವಿರುವದೆಂದು ಹೇಳಲಿಕ್ಕೆ ಬರುವದಿಲ್ಲ. ಭೌತಿಕ ಪದಾರ್ಥಗಳೇ ಸ್ವಯಂಭೂ ಇದ್ದು ಆತ್ಮನಿಗೆ ಈ ಅಚೇತನ ವಸ್ತುಗಳ ಹೊರತು ಅನ್ಯತ್ರ ಪ್ರಕಟವಾಗುವದಕ್ಕೆ ಸಾಧನವೇ ಇಲ್ಲವೆಂದು ಇದರ ಮೇಲಿಂದ ಸಿದ್ಧವಾಗುವದಿಲ್ಲ. ಹೀಗಿದ್ದರೆ ಇದೊಂದೇ ಉತ್ಕ್ರಾಂತಿಯ ಮಾರ್ಗವು ಸಂಭವನೀಯವಿರುತ್ತಿತ್ತು. ಇದು ಪಾಶ್ಚಾತ್ಯ ತತ್ವಜ್ಞಾನದಲ್ಲಿಯ ಪೆಂಥೀಝಮ್ (**Panthiesm**) ಎಂಬ ಪಕ್ಷದ ಕಲ್ಪನೆ ಇರುತ್ತದೆ ಈ ಮತದ ಪ್ರಕಾರ ಈ ಜಗತ್ತಿನಲ್ಲಿ ವಾಸಿಸುವ ಜೀವಜಂತುಗಳು ಅದ್ವಿತೀಯ— ವಸ್ತುವಿನ ಆತ್ಮಗಳೇ ಆಗಿದ್ದು ಅವು ಈ ಜಗತ್ತಿನಲ್ಲಿ ಹುಟ್ಟಿ ಇಲ್ಲಿಯೇ ಅವು ಅಚೇತನತೆ ಮತ್ತು ಚೇತನತೆಯ ಮಾರ್ಗವಾಗಿ ಮನೋವಿಕಾಸವನ್ನು ಹೊಂದಿ ತಮ್ಮ ಅಭೇದ್ಯವಾದ ಪರಿಪೂರ್ಣ ಸ್ವರೂಪಕ್ಕೆ ಉತ್ಕ್ರಮಿಸುವವೆಂದೂ ಮತ್ತು ಅವುಗಳ ಕೊನೆಯ ಸ್ಥಿತಿಯಲ್ಲಿಯೇ ವಿಶ್ವಾತ್ಮತೆಯು ಪ್ರಾಪ್ತವಾಗುವದೆಂದೂ ಅವರ ತಿಳುವಳಿಕೆ ಇದೆ. ಈ ಪಕ್ಷದ ಪ್ರಕಾರ ಪ್ರಾಣ, ಮನಸ್ಸು ಮತ್ತು ಜೀವ ಇವೆಲ್ಲವೂ ಅಚೇತನ ಭೌತಿಕ ಪದಾರ್ಥಗಳಲ್ಲಿಯೇ, ಅವುಗಳಲ್ಲಿರುವ ಗುಪ್ತವಾದ ಏಕತ್ವದ ಶಕ್ತಿಯಿಂದ ಬೆಳೆದು, ಇಲ್ಲಿಯೇ ಅವು ಪರಿಪೂರ್ಣತೆಯನ್ನು ಕಾಣುತ್ತವೆ. ಹೀಗಾದ ಪಕ್ಷಕ್ಕೆ ಈ ಜಗತ್ತಿನ ಹೊರತು ಅನ್ಯತ್ರ ಈ ತತ್ವಗಳ ಬೆಳವಣಿಗೆಗೆ ಸಾಧನವಿರುವದಿಲ್ಲ ಚೇತನಾತೀತ ಸ್ಥಿತಿಯು ಜೀವಗಳಿಗೆ ಇಲ್ಲಿಯೇ ಇರುವ ಕಾರಣ ಅವು ಈ ಸ್ಥೂಲ ಭೌತಿಕ ವಸ್ತುಗಳ ಹೊರಗೆ ಇದ್ದ ಹೆಚ್ಚಿನ ಸೂಕ್ಷ್ಮಲೋಕಗಳಿಗೆ ಹೋಗುವದು ಅವಶ್ಯವಿಲ್ಲ. ಮತ್ತು ಆ ಲೋಕಗಳಲ್ಲಿಯ ಸೂಕ್ಷ್ಮತರ ತತ್ವಗಳ

ಪರಿಣಾಮದಿಂದ ಜೀವನ ವಿಕಾಸವೂ ಆಗುವದಿಲ್ಲ. ಈ ಲೋಕವ ಹೊರಗಿನ ಪ್ರಾಣ ಮತ್ತು ಬುದ್ಧಿ ತತ್ವಗಳ ಪರಿಣಾಮವೂ ಈ ಜಗತ್ತಿನ ಮೇಲೆ ಆಗುವದಿಲ್ಲ. ಆದ್ದರಿಂದ ಈ ವಿಚಾರದ ಪ್ರಕಾರ ಈ ಜಗತ್ತಿನ ಹೊರತು ಬೇರೆ ಲೋಕಗಳ ಅವಶ್ಯಕತೆಯನ್ನು ಪ್ರತಿಪಾದಿಸುವದು ಶಕ್ಯವಿಲ್ಲ.

ಅವರ ಈ ತಿಳುವಳಿಕೆಗೆ ನಾವು ಹೀಗೆ ಪ್ರಶ್ನೆಮಾಡಬೇಕಾಗುತ್ತದೆ. ನೀವು ಪ್ರತಿಪಾದಿಸುತ್ತಿದ್ದ ಪ್ರಾಣ ಮತ್ತು ಬುದ್ಧಿ ತತ್ವಗಳ ಸ್ವರೂಪವು ನಿಮ್ಮ ಪ್ರಕಾರ ಯಾವದು? ಇದಕ್ಕೆ ಅವರ ಉತ್ತರವೇನಂದರೆ "ಇವು ಭೌತಿಕ ಪದಾರ್ಥಗಳ ಅಥವಾ ಅವುಗಳ ಶಕ್ತಿಗಳ ಮಿಶ್ರಣದಿಂದ ತಯಾರಾದ ಒಂದು ವಿಶಿಷ್ಟ ಪರಿಣಾಮವು. ಅಥವಾ ಈ ಪ್ರಾಣ-ಬುದ್ಧಿ ತತ್ವಗಳು ಜಗತ್ತಿನ ಉತ್ಕ್ರಾಂತಿಯಲ್ಲಿ ಅಜ್ಞಾನದಿಂದ ಅತೀಂದ್ರಿಯ ಜ್ಞಾನದ ಕಡೆಗೆ ಪ್ರಯಾಣ ಮಾಡುತ್ತಿರುವ ಜೀವಗಳ ಜ್ಞಾನದ ಪ್ರಕಾರಗಳು ಈ ಇಂದ್ರಿಯಜನ್ಯ ಜ್ಞಾನವು ಅಜ್ಞಾನದಿಂದ ಅತೀಂದ್ರಿಯ ಜ್ಞಾನದ ಕಡೆಗಿನ ಮಾರ್ಗದಲ್ಲಿಯ ಒಂದು ಸಂಕದಂತೆ ಇರುತ್ತದೆ. ಜೀವನು ತನ್ನ ಅಜ್ಞಾನಮಯ ಸ್ಥಿತಿಯಿಂದ ಹೊರಟು ಪ್ರಕಾಶಮಯವಾದ ಅತೀಂದ್ರಿಯ ಜ್ಞಾನದಲ್ಲಿ ಸಮರಸನಾಗುವ ಮೊದಲು ಕಂಡುಬರುವ ಸ್ಥಿತಿಯೇ ಈ ಇಂದ್ರಿಯಜನ್ಯ ಜ್ಞಾನವು. ಇದು ಜೀವದ ಅರ್ಧ ಜ್ಞಾನಸ್ಥಿತಿಯು ಈ ಜ್ಞಾನದ ಪ್ರಕಾರಗಳೆಂದರೆ ಪ್ರಾಣ-ಬುದ್ಧಿಗಳು. ಹೆಚ್ಚು ವ್ಯಾಪಕ ಶಕ್ತಿಯುಳ್ಳ ಪ್ರಾಣ-ಬುದ್ಧಿಗಳ ಬೇರೊಂದು ಲೋಕವು ಇರಬಹುದೆಂದು ತರ್ಕ ಮಾಡಬಹುದಾದರೂ ಅದು ಈ ಜೀವಗಳ ಮುಂದಿನ ಪ್ರಯಾಣದಲ್ಲಿ ಈ ಪ್ರಾಣ-ಬುದ್ಧಿಗಳೇ ತಾಳಿದ ಒಂದು ನಮೂನೆಯಾಗಿದೆ" ಎಂದು ಅವರು ಹೇಳುವರು. ಆದರೆ ಈ ವಿಚಾರದಲ್ಲಿಯ ದೋಷವೇನೆಂದರೆ ಪಂಚಭೂತಗಳಿಂದಲೇ ಉತ್ಪನ್ನವಾಗುವವೆಂದು ಅವರು ತಿಳಿದ ಪ್ರಾಣ ಮತ್ತು ಬುದ್ಧಿ ತತ್ವಗಳು ಈ ಪಂಚಮಹಾಭೂತಗಳಿಂದ ಅತಿ ವಿಲಕ್ಷಣವಾಗಿವೆ. ಪಂಚಭೂತಗಳಿಂದ ಅವುಗಳ ಉತ್ಪತ್ತಿ ಇರದೆ ಪಂಚಭೂತಗಳೇ ಪ್ರಾಣ ಮತ್ತು ಬುದ್ಧಿಗಳ ಉತ್ಪತ್ತಿಗೆ ಕಾರಣವಾದ ಒಂದು ಸಮಾನ ಶಕ್ತಿಯಿಂದ ಉತ್ಪನ್ನವಾಗಿರುವವು. ಪ್ರಾಣ ಮತ್ತು ಬುದ್ಧಿಗಳು ಇದೇ ಶಕ್ತಿಯಿಂದ ಹುಟ್ಟಿದ

ಪಂಚಭೂತಗಳಿಗಿಂತ ಮೇಲ್ತರಗತಿಯ ಉತ್ಪತ್ತಿಯೆಂದು ಹೇಳಬೇಕಾಗು ವದು. ಈ ಶಕ್ತಿಯು ವಿಶ್ವಾತ್ಮನ ಶಕ್ತಿಯೆಂದೂ ಪ್ರಾಣ-ಬುದ್ಧಿಗಳು ಈ ಶಕ್ತಿಯಿಂದ ಪಂಚಭೂತಗಳ ಸಂಬಂಧವಿಲ್ಲದೆ ಸ್ವತಂತ್ರವಾಗಿ ಉಂಟಾದವು ಗಳೆಂದೂ ಮತ್ತು ಅವುಗಳಲ್ಲಿ ಈ ಆತ್ಮನು ಸ್ವತಂತ್ರವಾಗಿ ಪ್ರಕಟನಾಗುವ ನೆಂದೂ ಕಂಡುಬರುತ್ತದೆ. ಆದ್ದರಿಂದ ಈ ವಿಶ್ವದಲ್ಲಿ ಆತ್ಮ ಮತ್ತು ಸ್ಥೂಲ ಭೂತಗಳು ಇವೆರಡೇ ಆದ್ಯ ತತ್ವಗಳಾಗಿದ್ದು ಆತ್ಮನ ಪ್ರಕಟನೆಗೆ ಪಂಚ ಭೂತಗಳ ಹೊರತು ಬೇರೆ ಯಾವ ಸಾಧನವೂ ಇರಲಾರದೆಂದು ತರ್ಕಿಸು ವದು ತಪ್ಪಾಗುತ್ತದೆ. ಮತ್ತು ಸ್ಥೂಲ ಭೂತಾತ್ಮಕ ಜಗತ್ತಿನ ಹೊರತು ಬೇರೇ ಲೋಕಗಳ ಅಸ್ತಿತ್ವವು ಇರುವದಿಲ್ಲವೆನ್ನುವವರ ತರ್ಕಜಾಲವು ಕೂಡಲೇ ಕುಸಿದು ಬೀಳುತ್ತದೆ. ಜೀವಾತ್ಮನಿಗೆ ಪಂಚಭೂತಗಳಲ್ಲಿ ಹೇಗೆ ಪ್ರಕಟವಾಗುವದು ಶಕ್ಯವಿದೆಯೋ ಹಾಗೆಯೇ ಕೇವಲ ಬುದ್ಧಿ ಅಥವಾ ಪ್ರಾಣ ತತ್ವಗಳ ಸಹಾಯದಿಂದಲೂ ಪ್ರಕಟವಾಗುವ ಶಕ್ತಿಯಿರುತ್ತದೆ. ಅಂದಮೇಲೆ ಈ ಜಗತ್ತು ಹೇಗೆ ಪಂಚಭೂತ ಪ್ರಧಾನವಾಗಿರುವದೋ ಹಾಗೆಯೇ ಬುದ್ಧಿ ತತ್ವಪ್ರಧಾನ ಅಥವಾ ಪ್ರಾಣ ತತ್ವಪ್ರಧಾನ ಜಗತ್ತುಗಳು ಇರಲೇಬೇಕೆಂದೂ ಈ ಸ್ಥೂಲ ಪಂಚಭೂತಗಳಿಗಿಂತ ಸೂಕ್ಷ್ಮವಾದ— ಹೆಚ್ಚು ಸ್ವತಂತ್ರವಾದ, ಹೆಚ್ಚು ಜ್ಞಾನ ಮತ್ತು ಶಕ್ತಿ ಸಂಪನ್ನವಾದ, ಬೇರೆ ಬೇರೆ ತರಗತಿಯ ಜಗತ್ತುಗಳು ಇರಬೇಕೆಂದೂ ನಾವು ಸಾಧಾರವಾಗಿ ಹೇಳಬಹುದು.

ಈ ಸಿದ್ಧಾಂತದ ಮೇಲಿಂದ, ಮುಂದೆ ಪುನಃ ಇದರ ಮೇಲೆ ಅವಲಂ ಬಿಸಿದ ಮೂರು ಪ್ರಶ್ನೆಗಳು ಉದ್ಭವಿಸುವವು. (೧) ಈ ಲೋಕಗಳು ಇದ್ದ ಬಗ್ಗೆ ಏನಾದರೂ ಪ್ರತ್ಯಕ್ಷ ಪ್ರಮಾಣಗಳು ಇರುವವೊ? ಇದ್ದರೆ ಅವುಗಳ ಅಸ್ತಿತ್ವದ ಸುದ್ದಿಯು ನಮಗೆ ಹೇಗೆ ತಿಳಿಯಬೇಕು. (೨) ಅವು ಇದ್ದ ಪಕ್ಷಕ್ಕೆ ನಾವು ಹಿಂದೆ ಪ್ರತಿಪಾದಿಸಿದಂತೆ ಸ್ಥೂಲಭೂತಗಳಿಂದ ಏರುತ್ತ ಹೋಗಿ ಆತ್ಮ ತತ್ವದ ಕಡೆಗಿನ ಬೇರೆ ಬೇರೆ ತರಗತಿಯ ಸಾಮುಗ್ರಿಗಳಿಂದ ಕೂಡಿದ ಸೋಪಾನ ಪಂಕ್ತಿಗಳಾಗಿದ್ದರೆ, ಅವು ಒಂದಕ್ಕೊಂದು ಸ್ವತಂತ್ರ ವಾಗಿರುವವೋ ಅಥವಾ ಒಂದರ ಮೇಲೊಂದು ಅವಲಂಬಿಸಿರುವವೊ?

(೩) ಈ ಜಗತ್ತಿಗೂ, ಅನ್ಯಲೋಕಗಳಿಗೂ ಏನಾದರೂ ಸಂಬಂಧವಿರುವದೋ? ಮೇಲಿನ ಲೋಕಗಳ ಪರಿಣಾಮವು ಈ ಜಗತ್ತಿನ ಮೇಲೆ ಏನಾದರೂ ಆಗುವದೋ? ಇವೇ ಮುಂತಾದ ಪ್ರಶ್ನೆಗಳು.

ಮನುಷ್ಯ ಜಾತಿಯು ಆರಂಭದಿಂದ, ಅಥವಾ ನಮಗೆ ಉಪಲಬ್ಧವಿರುವ ಇತಿಹಾಸದ ಸಹಾಯದಿಂದ ಎಷ್ಟು ಹಿಂದೆ ನಾವು ನೋಡಬಲ್ಲೆವೋ ಅಲ್ಲಿಯ ವರೆಗೆ ದೃಷ್ಟಿಕ್ಷೇಪ ಮಾಡಲಾಗಿ ಅನ್ಯ ಲೋಕಗಳ ಅಸ್ತಿತ್ವದ ಬಗ್ಗೆ ಮನುಷ್ಯನಿಗೆ ವಿಶ್ವಾಸವಿದ್ದು, ಮಾನವ ಜಾತಿಗೂ ಪಾರಲೌಕಿಕ ವ್ಯಕ್ತಿಗಳಿಗೂ ಪರಸ್ಪರ ಬಳಿಕೆ ಇತ್ತೆಂದು ಕಂಡುಬರುತ್ತದೆ ಆದರೆ ಈಗಿನ ಭೌತಿಕ ವಿಚಾರ ಪ್ರಧಾನ ಕಾಲದಲ್ಲಿ ನಾವು ಈ ವಿಶ್ವಾಸವನ್ನು ಒಂದು ಹಳೆತಾದ ಅಂಧಶ್ರದ್ಧೆಯೆಂದು ಬಿಟ್ಟುಕೊಟ್ಟಿದ್ದೇವೆ. ಪರಲೋಕಗಳ ಅಸ್ತಿತ್ವದ ಬಗ್ಗೆ ಇದ್ದ ಎಲ್ಲ ಪ್ರಮಾಣಗಳೂ, ಅವುಗಳ ಸತ್ಯತೆಯನ್ನು ಸೂಚಿಸುವ ಸಂಗತಿಗಳೂ ವಿಚಾರಕ್ಕೆ ಅನರ್ಹವೆಂದೂ, ಅವೆಲ್ಲವೂ ಸುಳ್ಳೆಂದೂ ನಾವು ಮುಂಚಿತವಾಗಿಯೇ ಕಲ್ಪಿಸಿ ಬಿಟ್ಟಿದ್ದೇವೆ. ನಮಗೆ ಈ ಪಂಚಭೂತಾತ್ಮಕ ಜಗತ್ತು ಮತ್ತು ಅದರಲ್ಲಿಯ ಅನುಭವ, ಇಷ್ಟೇ ಸತ್ಯವೆನಿಸುತ್ತವೆ. ಸತ್ಯವೆಂದು ಕಾಣುವ ಇತರ ಎಲ್ಲ ಅನುಭವವು ಮೃಗಜಲದಂತೆ ಭ್ರಮೆಯಾಗಲಿ, ಅಂಧಶ್ರದ್ಧೆಯಿಂದುಂಟಾದ ಮನೋವಿಕಾರವಾಗಲಿ ಇರಲೇಬೇಕೆಂದು ನಾವು ದೃಢವಾಗಿ ನಂಬಿದ್ದೇವೆ. ಅಥವಾ, ಪರಲೋಕಗಳ ಅನುಭವವು ಇಂದ್ರಿಯಜನ್ಯಜ್ಞಾನದ ಸ್ವರೂಪವನ್ನು ತಾಳಿ ಪ್ರಮಾಣಕೋಟಿಯನ್ನು ಏರುತ್ತಿದ್ದರೆ, ಅದರ ಅರ್ಥವು ಬೇರೆ ಹೊರಗಿನ ಯಾವ ಪದಾರ್ಥವನ್ನೂ ಸೂಚಿಸದೆ, ಅದು ಪೂರ್ಣ ಐಹಿಕಕ್ಕೇ ಸಂಬಂಧಿಸಿರಬೇಕು; ಭೌತಿಕ ವಸ್ತುವಿಗೆ ಸಂಬಂಧಿಸಿದ ಹೊರತು ಯಾವ ಸಂಗತಿಯನ್ನೂ ಪ್ರಮಾಣವೆಂದು ಸ್ವೀಕರಿಸಲಿಕ್ಕೆ ಬರುವದಿಲ್ಲ. ಕೆಲವು ಸಂಗತಿಗಳು ಐಹಿಕ ಜಗತ್ತಿಗೆ ಸಂಬಂಧಿಸಿಲ್ಲವೆಂದು ಸ್ಪಷ್ಟ ಕಂಡಾಗ್ಯೂ, ಅವಕ್ಕೆ ಐಹಿಕ ಅರ್ಥವನ್ನೇ ಹಚ್ಚಿಯಾಗಲಿ ಅಥವಾ ಯಾವದಾದರೊಂದು ಬಾದರಾಯಣ ಸಂಬಂಧವನ್ನು ಹಚ್ಚಿ ಅರ್ಥಕ್ಕೆ ಅನರ್ಥವನ್ನು ಮಾಡಿಯಾಗಲಿ ಇಂಥ ಸಂಗತಿಗಳನ್ನು ಸ್ವೀಕರಿಸಬೇಕೇ ಹೊರತು ಇಲ್ಲದ ಪಾರಲೌಕಿಕ ಅರ್ಥವನ್ನು ಅವಕ್ಕೆ ಹಚ್ಚುವದು ಅಯೋಗ್ಯವೆಂದು

ಅಧುನಿಕರ ದುರಾಗ್ರಹವಿರುತ್ತದೆ. ಇಂಥ ಪಾರಲೌಕಿಕ ಸಂಗತಿಗಳನ್ನು ಐಹಿಕ ಇಂದ್ರಿಯಜನ್ಯ ಜ್ಞಾನದಿಂದಲೇ ಅಂದರೆ, ಪ್ರತ್ಯಕ್ಷ ಪ್ರಮಾಣ ಒಂದರಿಂದಲೇ ಅಳೆಯುವದೆಂದರೆ ತರ್ಕಕ್ಕೆ ಹೊಂದದ ಅವಿಚಾರಿಗಳ ಮಾತೆಂಬದು ಸ್ಪಷ್ಟವಿದೆ. ಇಂದ್ರಿಯ ಜನ್ಯ ಜ್ಞಾನಕ್ಕೆ ತಿಳಿಯುವ ವಿಷಯ ಗಳಷ್ಟೇ ಪಾರಮಾರ್ಥಿಕ ಸತ್ಯವೆಂದು ತಿಳಿದುಕೊಂಡ ಸ್ಥೂಲ ಮನಸ್ಸಿನ ದೊಂದು ಇದು ಹಟಮಾರಿತನವಾಗಿದೆ ಪಾರಲೌಕಿಕ ಕಾರ್ಯವು ಈ ಸ್ಥೂಲ ಜಗತ್ತಿಗೆ ತಗಲಿ ಸ್ಥೂಲ ಪರಿಣಾಮವನ್ನುಂಟು ಮಾಡಬಹುದು. ಅಥವಾ ಅದು ನಮ್ಮ ಸ್ಥೂಲ ಇಂದ್ರಿಯಗಳ ಮೇಲೂ ಪರಿಣಾಮ ಮಾಡಿ ಅವುಗಳಿಗೆ ಗೋಚರವಾಗಬಹುದು. ಆದರೆ ಈ ಪ್ರತ್ಯಕ್ಷ ಪರಿಣಾಮಗಳಿಂದಷ್ಟೇ ಪರಲೋಕಗಳ ಕ್ರಿಯೆಯ ಪರಿಸಮಾಪ್ತಿಯಾಗಲಾರದು.

ನಮ್ಮ ಈ ಮಾನುಷ ಜೀವನದಲ್ಲಿ ಪರಲೋಕ ರಚನೆಗೆ ಅವಶ್ಯವಿದ್ದ ಜೀನಸಗಳಿಗೆ ಸಮಗುಣಗಳುಳ್ಳ ಜೀನಸುಗಳು ಅಂದರೆ ಬುದ್ಧಿ ಪ್ರಾಣಾದಿ ಗಳು ಇರುತ್ತವೆ. ಇವುಗಳ ಮೇಲೆ ಸಜಾತೀಯ ಸೂಕ್ಷ್ಮ ಲೋಕಗಳ ಕ್ರಿಯೆಯು ಪ್ರತ್ಯಕ್ಷ ಪರಿಣಾಮವಾಗುತ್ತದೆ. ಮತ್ತು ಇವುಗಳ ಮುಖಾಂತರ ಈ ನಮ್ಮ ಸ್ಥೂಲ ಜಗತ್ತಿನ ಮೇಲೂ, ನಮ್ಮ ಐಹಿಕ ವ್ಯವಹಾರಗಳ ಮೇಲೂ ಅವು ಪರಿಣಾಮವನ್ನುಂಟು ಮಾಡಬಹುದು. ಈ ಸೂಕ್ಷ್ಮ ಜಗತ್ತಿನ ಕ್ರಿಯೆಯ ಪರಿಣಾಮವು ನಮ್ಮ ಸ್ಥೂಲ ಇಂದ್ರಿಯಗಳಿಗೆ ಹೇಗೆ ವಿಷಯವಾಗುತ್ತದೆಂಬದನ್ನು ನೋಡುವಾ. ಸೂಕ್ಷ್ಮ ಜಗತ್ತುಗಳ ಕ್ರಿಯೆಯು ಅದಕ್ಕೆ ಸಮಗುಣವಾದ ನಮ್ಮ ಪ್ರಾಣ ಬುದ್ಧಿಗಳ ಮೇಲೆ ಆಗುತ್ತದೆಂದು ಹೇಳಿದ್ದೇವಷ್ಟೇ. ಈ ಕ್ರಿಯೆಯ ಪರಿಣಾಮವನ್ನು ನಮ್ಮ ಸ್ಥೂಲ ಇಂದ್ರಿಯಗಳು ಅಪ್ರತ್ಯಕ್ಷವಾಗಿ ಅನುಮಾನದಿಂದ ತಿಳಿದುಕೊಳ್ಳು ತ್ತವೆ ಈ ಪ್ರಕಾರದ ತಿಳುವಳಿಕೆ ಉಂಟಾಗಬೇಕಾದರೆ, ನಮ್ಮ ಸೂಕ್ಷ್ಮ ಶರೀರ ಮತ್ತು ಸೂಕ್ಷ್ಮ ಇಂದ್ರಿಯ ಇವುಗಳ ಕಾರ್ಯಕ್ಕೂ ನಮ್ಮ ಸ್ಥೂಲ ಶರೀರ ಮತ್ತು ಸ್ಥೂಲ ಇಂದ್ರಿಯ ಇವುಗಳ ಕಾರ್ಯಕ್ಕೂ ಸಂಬಂಧವಿರ ಬೇಕು. ಅಂದರೇ ಅತೀಂದ್ರಿಯ ಕ್ರಿಯೆಯ ಜ್ಞಾನವು ಈ ಸ್ಥೂಲ ಇಂದ್ರಿಯಗಳಿಗೆ ಆಗುತ್ತದೆ. ಉದಾಹರಣಾರ್ಥವಾಗಿ, ನಾವು ಯಾವದಕ್ಕೆ

"ಅಂತರ್ದೃಷ್ಟಿ" (Inner Sight) ಅನ್ನುವೆವೋ ಅದೊಂದು ಈ ಪ್ರಕಾರದ ಮಾನಸಕ್ರಿಯೆಯೇ ಆಗಿದೆ. ಅದೊಂದು ಬಾಹ್ಯ ಇಂದ್ರಿಯು ಗಳಿಗೆ ದೃಶ್ಯವಾಗುವ ಅಥವಾ ಕೇಳಬರುವ ಮಾನಸಿಕ ಪರಿಣಾಮದ ದೃಶ್ಯ ವಿದ್ದು, ಕೆಲವು ಪ್ರಾತಿನಿಧಿಕ ಅರ್ಥವನ್ನು ಸೂಚಿಸುವ ಅಥವಾ ಪ್ರತ್ಯಕ್ಷ ಜ್ಞಾನಕ್ಕೆ ಲಿಂಗವಾದ ಪ್ರತಿವೇಗಳಂತೆ ಅಂತರಿಂದ್ರಿಯಕ್ಕೆ ಭಾಸವಾಗಿ, ಒಳಗಿನ ಅನುಭವದಂತೆ ಅವು ಹೊರಚಿಮ್ಮುತ್ತವೆ. ಈ ಸ್ಥಿತಿಯಲ್ಲಿ ಪರ. ಲೋಕದ ಮತ್ತು ಅಲ್ಲಿಯ ಜೀವಗಳ ಅಸ್ತಿತ್ವದ ನಾನಾವಿಧ ಪ್ರಮಾಣಗಳ ಅರಿವೂ, ಈ ಲೋಕದ ಸಂಗಡ ಇದ್ದ ಅವುಗಳ ವ್ಯವಹಾರದ ಜ್ಞಾನವೂ ನಮಗೆ ಉಂಟಾಗುತ್ತದೆ. ಇದು ನಮಗೆ ನಮ್ಮ ಬಾಹ್ಯ ಇಂದ್ರಿಯಗಳ ವಿಷಯುವಾಗಿಯಾಗಲಿ ಅಥವಾ ನಮ್ಮ ಸಾಮಾನ್ಯ ವ್ಯಾವಹಾರಿಕ ಅರಿವಿ ಗಿಂತ ಮೇಲ್ತರದ ಜ್ಞಾನಸ್ಥಿತಿಯು ಉಂಟಾದಾಗ ಸೂಕ್ಷ್ಮ ಮನಸ್ಸು ಅಥವಾ ಪ್ರಾಣಗಳ ಸನ್ನಿಕರ್ಷದಿಂದಾಗಲಿ ಆಗಬಹುದು. ನಮ್ಮ ಈ ಸ್ಥೂಲ ಮನಸ್ಸು ಅಥವಾ ನಮ್ಮ ಇಂದ್ರಿಯ ಜನ್ಯ ಜ್ಞಾನವಷ್ಟೇ ನಮ್ಮ ಅಸ್ತಿತ್ವಕ್ಕೆ ಪೂರ್ಣತೆಯನ್ನುಂಟು ಮಾಡಲಾರವು. ಇವು ನಮ್ಮ ಐಹಿಕ ಜೀವನದಲ್ಲಿಯ ಮೇಲ್ಭಾಗದ ಜ್ಞಾನಕವಚವಾಗಿ ಮಾತ್ರ. ಹೆಚ್ಚು ಉತ್ಕೃಷ್ಟ ಮತ್ತು ವ್ಯಾಪಕವಾದ ಜ್ಞಾನವನ್ನು ಬಾಹ್ಯೇಂದ್ರಿಯಗಳಿಂದುಂ ಟಾದ ಈ ಸಂಕುಚಿತ ಜ್ಞಾನದ ನಾಲ್ಕು ಗಡಿಯಲ್ಲಿ ಕೂಡ್ರಿಸುವ ಈ ನಮ್ಮ ಪ್ರಯತ್ನವು ಬಾಲಿಶತನದ್ದು.

ಆದರೆ, ಈ ಸೂಕ್ಷ್ಮ ಇಂದ್ರಿಯಗಳಿಂದಾದ ಜ್ಞಾನದ ಸತ್ಯತೆಯನ್ನು ಒರೆಗೆ ಹಚ್ಚಿ ನೋಡಲಿಕ್ಕೆ ಒಂದು ಸರ್ವಮಾನ್ಯವಾದ ಸಾಧನವಿರದ್ದ ರಿಂದ ಅದು ನಮ್ಮನ್ನು ಸುಲಭವಾಗಿ ವಂಚಿಸಬಹುದೆಂದೂ ಮತ್ತು ಈ ಅಲೌಕಿಕ ಜ್ಞಾನವನ್ನು ಅಥವಾ ಅದ್ಭುತ ಕೃತ್ಯಗಳನ್ನು ನಾವು ಒರೆಗೆ ಹಚ್ಚದೆ, ಅಂಧಶ್ರದ್ಧೆಯಿಂದ ಅವುಗಳ ಮೇಲೆ ವಿಶ್ವಾಸವಿಟ್ಟರೆ, ಈ ಮನೋ ವೃತ್ತಿಯಿಂದ ನಾವು ಮೋಸಹೋಗಬಹುದೆಂದೂ ನಮ್ಮ ಆಕ್ಷೇಪಕರು ಹೇಳಿದರೆ, ನಾವು ಅದನ್ನು ಒಪ್ಪಬಹುದು. ಆದರೆ ಈ ಅಂಧಶ್ರದ್ಧೆಯ ಮನೋವೃತ್ತಿಯಿಂದ ನಾವು ಮೋಸಕ್ಕೊಳಗಾಗುವ ದೋಷವು ಅಂತ-

ಜ್ಞಾನಕ್ಕಷ್ಟೇ ಸಂಬಂಧಿಸಿರದೆ, ಈ ನಮ್ಮ ಬಾಹ್ಯ ವಿಷಯಜ್ಞಾನಕ್ಕೂ ಅಷ್ಟೇ ಸಂಬಂಧಿಸಿರುತ್ತದೆ. ಬಾಹ್ಯ ವಿಷಯಜ್ಞಾನದ ಸತ್ಯತೆಯನ್ನು ನೋಡುವ ಸಾಧನಗಳೂ ಇಷ್ಟೇ ದೂಷಿತವಾಗಿವೆ. ಅಂದಮೇಲೆ ಈ ಕಾರಣವು ನಮ್ಮ ಹೆಚ್ಚು ವ್ಯಾಪಕವಾದ ಮತ್ತು ಹೆಚ್ಚು ಮಹತ್ವದ ಜ್ಞಾನದ ವಿಷಯವನ್ನು ಮುಚ್ಚಿಡಲಿಕ್ಕೆ ಸಾಕಷ್ಟು ಬಲವತ್ತರವಾದದ್ದಿರುವದಿಲ್ಲ ಆದರೆ ದೋಷಗಳ ಅಸ್ತಿತ್ವವೇ ಈ ವಿಷಯವನ್ನು ಚನ್ನಾಗಿ ಪರೀಕ್ಷಿಸಿ ಅದರಲ್ಲಿಯ ಸತ್ಯವನ್ನು ಒರೆಗೆ ಹಚ್ಚಿ ನೋಡುವ ನಿಜವಾದ ಸಾಧನಗಳನ್ನೂ ಮತ್ತು ಈ ವಿಷಯಕ್ಕೆ ಯೋಗ್ಯವಾದ ಪ್ರಮಾಣಗಳನ್ನೂ ಸಂಶೋಧಿಸಿ ನೋಡಲಿಕ್ಕೆ ಬಲವತ್ತರವಾದ ಕಾರಣವಾಗುತ್ತದೆ ನಮ್ಮ ಬಾಹ್ಯ ವಿಷಯಗಳ ಜ್ಞಾನಕ್ಕೆ ಈ ವಿಷಯಗಳನ್ನು ನೋಡುವ ( ವಿಷಯ-ದ್ರಷ್ಟಾ ) ವಿಷಯಿಯೇ ಮೂಲ-ಭೂತನಾದವನು. ಆದ್ದರಿಂದ ಈ ವಿಷಯ ವಿಷಯಿಗಳಲ್ಲಿ ವಿಷಯವಷ್ಟೇ ಸತ್ಯವಿದ್ದು, ವಿಷಯಿಯೂ ಅವನ ಅಲೌಕಿಕ ಅನುಭವಗಳೂ ಅಸತ್ಯವೆಂದು ಹೇಳುವ ಧೈರ್ಯವು ಯಾರಿಗೂ ಆಗಲಾರದು. ನಮ್ಮ ಗೂಢ ಸಾಕ್ಷಿಜ್ಞಾನದ ಯೋಗ್ಯ ಉಪಯೋಗ ಮಾಡಿಕೊಂಡಲ್ಲಿ, ಅದೇ ಸತ್ಯಾಸತ್ಯತೆಯ ನಿರ್ಣಯವನ್ನು ಮಾಡಬಲ್ಲದೆಂದು ನಾವು ಈ ಭೌತಿಕ ವಿಷಯಗಳ ಸಂಶೋಧನದಲ್ಲಿಯೂ ನತತ ಕಾಣುತ್ತಿದ್ದೇವೆ. ಅಂದಮೇಲೆ ಇದೇ ಜ್ಞಾನವೇ ನಮ್ಮ ಆಂತರಿಕ ವಿಷಯಗಳ ಅಥವಾ ಪಾರಲೌಕಿಕ ಅನುಭವದ ಸತ್ಯತೆಯನ್ನು ಸಿದ್ಧಮಾಡಲಾರದೆಂಬುವದು ಕಠಿಣವಾಗುತ್ತವೆ ವಿಶ್ವಾಸವಷ್ಟೇ ಸತ್ಯತೆಯ ಪ್ರಮಾಣವಾಗಲಾರದೆಂಬದೇನೊ ನಿಜ ಸತ್ಯಕೋಟಿಯಲ್ಲಿ ಬರಬೇಕಾದರೆ, ಯಾವದೊಂದು ವಸ್ತುವಾಗಲಿ ಅಥವಾ ಸಂಗತಿಯಾಗಲಿ ಪ್ರಮಾಣಗಳಿಂದ ಸಿದ್ಧವಾಗಿರಬೇಕು. ಆದ್ದರಿಂದ ಹಿಂದಿನ ಜನರ ವಿಶ್ವಾಸವಷ್ಟೇ ಜ್ಞಾನಕ್ಕೆ ಸಾಧನವಾಗದಿದ್ದರೂ ಅದನ್ನು ನಾವು ಕೇವಲ ತಿರಸ್ಕರಿಸಲಾರೆವು. ವಿಶ್ವಾಸವು ಮನಸ್ಸಿನ ಒಂದು ದೃಢವಾದ ತಿಳುವಳಿಕೆಯಾಗಿದ್ದು ಅದು ಅಸತ್ಯವೂ ಇರಬಹುದು. ಆದರೆ ಅದು ಆಂತರಿಕ ಸತ್ಯತೆಯ ಸಂದೇಶವಾಗಿದ್ದಲ್ಲಿ ಅದಕ್ಕೆ ಮಹತ್ವವು ಉಂಟಾಗುತ್ತದೆ. ಆದರೆ, ಸ್ಥೂಲ ವಿಷಯಗಳನ್ನೇ ಗ್ರಹಣಮಾಡಲು ಸಮರ್ಥವಾದ ಈ ಸ್ಥೂಲ ಮನಸ್ಸು ಈ ಸಂದೇಶಗಳನ್ನು

ಯಥಾಯೋಗ್ಯ ಚಿತ್ರಿಸಬಹುದೆಂದು ಹೇಳಲಿಕ್ಕೆ ಬರುವದಿಲ್ಲ ಇಂಥ ಸಂದೇಶಗಳನ್ನು ಅದು ಯಥಾರ್ಥವಾಗಿ ಮಂಡಿಸದೆ ಬಹುಶಃ ಅದಕ್ಕೆ ನಮ್ಮ ಐಹಿಕ ಅನುಭವದ ಬಣ್ಣ ಬಳಿಯಬುತ್ತದೆ. ದೇವತೆಗಳ ವಸತಿಗೆ ಯೋಗ್ಯವಾದ ಸೂಕ್ಷ್ಮ ದೇವಲೋಕವನ್ನು ಎತ್ತರವಾದ ಪರ್ವತಗಳ ಶಿಖರಗಳ ಮೇಲೆ ಕಲ್ಪಿಸಿ ಅಲ್ಲಿ ದೇವತೆಗಳ ವಸತಿ ಇರುವದೆಂದು ಹೇಳು ವದು ಈ ಮಾತಿನ ಒಂದು ಉತ್ತಮ ಉದಾಹರಣವಾಗಿದೆ. ಸೂಕ್ಷ್ಮ ಅಥವಾ ಸ್ಥೂಲ ಸೃಷ್ಟಿಯೊಳಗಿನ ಎಲ್ಲ ಸತ್ಯವು ಕೇವಲ ವಿಶ್ವಾಸದ ಮೇಲೆಯೇ ಅವಲಂಬಿಸಿರುವದಿಲ್ಲ ಆದರೆ ಅದು ಅನುಭವಸಿದ್ಧವಾದದ್ದು ಇರಬೇಕು. ಮಾತ್ರ ಈ ಅನುಭವವು ಆ ಆ ಕ್ಷೇತ್ರಕ್ಕೆ ಸ್ಥೂಲ, ಸೂಕ್ಷ್ಮ ಅಥವಾ ಆತ್ಮ ಸೃಷ್ಟಿಗಳಿಗೆ ತಕ್ಕಂತೆ ಇರಬೇಕು ಈ ಅನುಭವಗಳ ಸತ್ಯವನ್ನು ನಾವು ಆ ಆ ಸೃಷ್ಟಿಗಳಿಗೆ ತಕ್ಕ ನಿಯಮಗಳಿಂದ ಮತ್ತು ಅವನ್ನು ತಿಳಿದುಕೊಳ್ಳಲಿಕ್ಕೆ ಯೋಗ್ಯವಾದ ಜ್ಞಾನಸಾಧನಗಳಿಂದ ಪರೀಕ್ಷಿಸಿ ನೋಡಬೇಕು. ಈಸಾಧನ ಗಳ ವ್ಯತ್ಯಾಸವಾದಲ್ಲಿ ನಮಗೆ ನಿಜವಾದ ಜ್ಞಾನವಾಗಲಾರದು. ಮತ್ತು ನಮ್ಮ ಜ್ಞಾನದ ಕ್ಷೇತ್ರವೂ ಬೆಳೆಯಲಾರದು.

ಮನುಷ್ಯಪ್ರಾಣಿಯ ಜ್ಞಾನಾರಂಭ ಕಾಲದಿಂದ ಹಿಡಿದು ಈ ವರೆಗೆ ಸತತವಾಗಿ ನಮ್ಮ ಆಂತರಿಕ ಸೂಕ್ಷ್ಮ ಜ್ಞಾನೇಂದ್ರಿಯಗಳ ಮೇಲೆ ಆಗು ತ್ತಿದ್ದ ಪರಲೋಕಗಳ ಆಘಾತವನ್ನು ನಾವು ಸಂಶೋಧಿಸಿ, ಅವುಗಳ ಯೋಗ್ಯವಾದ ಅರ್ಥವನ್ನು ಮಾಡಿ ನಮ್ಮ ಮನಶ್ಚಕ್ಷುವಿನೆದುರಿಗೆ ವ್ಯವಸ್ಥಿತ ವಾಗಿಟ್ಟುಕೊಂಡರೆ, ಈ ಸೂಕ್ಷ್ಮ ಅನುಭವವು ಏನನ್ನು ಹೇಳುತ್ತದೆ? ಬಾಹ್ಯ ಜ್ಞಾನೇಂದ್ರಿಯಗಳಿಂದ ನಾವು ತಿಳಿದುಕೊಂಡ ಈ ಸಂಕುಚಿತವಾದ ಭೂವಲಯ ಮತ್ತು ಅದರ ನಿರ್ದಿಷ್ಟ ಪರಿಣಾಮ ಇವುಗಳಿಂದ ಕೂಡಿದ ಈ ಸ್ಥೂಲ ಜಗತ್ತಿಗಿಂತಲೂ, ಹೆಚ್ಚು ವ್ಯಾಪಕವಾದ, ಹೆಚ್ಚು ಜ್ಞಾನ ಮತ್ತು ಕ್ರಿಯಾ ಶಕ್ತಿಯುಳ್ಳ ಲೋಕಗಳ ಅಸ್ತಿತ್ವವನ್ನೂ ಅವುಗಳಿಂದ ನಮ್ಮ ಮೇಲಾಗುವ ಪರಿಣಾಮವನ್ನೂ ಅದು ಸ್ಪಷ್ಟವಾಗಿ ಸೂಚಿಸುತ್ತದೆ. ಈ ವ್ಯಾಪಕ ಲೋಕಗಳ ಸಾಮ್ರಾಜ್ಯವು ನಮ್ಮ ಈ ಸ್ಥೂಲ ಜಗತ್ತು ಮತ್ತು ಅದರ ಭಾನ ಇವುಗಳಿಗೆ ತೀರ ದೂರವಾದದ್ದೂ ವಿಂಗಡಿತವಾದದ್ದೂ

ಇರದೆ, ಅದು ಈ ಜಗತ್ತನ್ನು ಸೂಕ್ಷ್ಮ ರೀತಿಯಿಂದ ವ್ಯಾಪಿಸಿ ತಮ್ಮ ಅಸ್ತಿತ್ವ ಮತ್ತು ಕ್ರಿಯೆಯಿಂದ, ಈ ಜಗತ್ತಿನ ಎಲ್ಲ ವಸ್ತುಜಾತ ಮತ್ತು ಅವುಗಳ ಕ್ರಿಯೆಗಳ ಮೇಲೆ ಅದೃಶ್ಯವಾಗಿ ಪರಿಣಾಮವನ್ನುಂಟುಮಾಡುತ್ತದೆ. ಆದಾಗ್ಯೂ ಈ ಸೂಕ್ಷ್ಮ ಲೋಕಗಳಿಗೆ ಬೇರೆಯಾದ ಸ್ವತಂತ್ರ ಅಸ್ತಿತ್ವವಿದ್ದು ಅವುಗಳ ರಚನೆ, ಕ್ರಿಯಾಪದ್ಧತಿ ಮತ್ತು ಚಲನವಲನದ ನಿಯಮಗಳೂ ಸ್ವತಂತ್ರವಾಗಿಯೇ ಇವೆ. ಈ ಪರಲೋಕಗಳ ಸಂಯೋಗದಿಂದ ನಮಗೆ ಎರಡು ಪ್ರಕಾರದ ಅನುಭವವು ಬರುತ್ತದೆ. ಮೊದಲನೆಯದು ನಮ್ಮ ವ್ಯಕ್ತಿಯ ಮೇಲೆ ಆಗುತ್ತಿರುವ ಪರಿಣಾಮ ಮತ್ತು ಎರಡನೆಯದು ಈ ಜಗತ್ತಿನ ಮೇಲೆ ಆಗುತ್ತಿರುವ ಪರಿಣಾಮ. ನಾವು ಇಲ್ಲಿ ಕಲ್ಪಿಸಿದ ಜೀವಿತದ ಧ್ಯೇಯ, ಆಕಾಂಕ್ಷೆ ಅಥವಾ ಒಟ್ಟುಗೂಡಿಸಿದ ಜೀವನ-ಸಾಮಗ್ರಿ ಇವೆಲ್ಲವೂ ಹೆಚ್ಚು ವ್ಯಾಪಕವಾದ, ಸೂಕ್ಷ್ಮವಾದ ಮತ್ತು ಅಸ್ಥಿರವಾದ ಸ್ಥಿತಿಯಲ್ಲಿ ಮುಂಚಿತವಾಗಿಯೇ ಇದ್ದು, ಅವು ಈ ಜಗತ್ತಿನಲ್ಲಿ ಮೂರ್ತಸ್ವರೂಪವನ್ನು ಹೊಂದಬೇಕೆಂದು ನಮ್ಮನ್ನು ಮುಂದೂಡುತ್ತಿರುತ್ತವೆ. ಆದರೆ ಇವುಗಳ ಕೆಲವಂಶವು ಮಾತ್ರ ಫಲದ್ರೂಪವಾಗುತ್ತಿದ್ದು, ಈ ಫಲಕ್ಕೆ ಬಂದ ಜೀವನಾಂಶವೂ ಕೂಡ ಈ ಸ್ಥೂಲ ಜಗತ್ತಿನ ಕಾರ್ಯ-ಕಾರಣ ನಿಯಮಗಳಿಗೊಳಗಾಗಿ ಇಲ್ಲಿಯ ಪರಿಸ್ಥಿತಿಗೆ ಅನುಗುಣವಾಗುವಂತೆಯೇ ಪರಿಣಮಿಸುವದು. ಈ ಅಂತಃಸ್ಫೂರ್ತಿಯ ಒತ್ತರ ಅಥವಾ ಪರಿಣಾಮಗಳು ನಮ್ಮ ಸ್ಥೂಲ ವಿಚಾರಕ್ಕೆ ತಿಳಿಯುವದೇ ಇಲ್ಲ. ಇವೆಲ್ಲವೂ ನಮ್ಮ ಮೇಲ್ಭಾಗದ ವಿಚಾರ ಅಥವಾ ಇಚ್ಛೆ ಇರಲಾರದೆಂದು ಸೂಕ್ಷ್ಮ ವಿಚಾರಕ್ಕೆ ತಿಳಿಯುತ್ತಿದ್ದಾಗ್ಯೂ ನಾವು ಅವು ನಮ್ಮ ಜೀವಿತದ ಅಥವಾ ಮನಸ್ಸಿನ ಭಾಗವೆಂದೇ ತಿಳಿದುಕೊಳ್ಳುತ್ತೇವೆ. ಆದರೆ ನಾವು ನಮ್ಮ ಈ ಕೇವಲ ಮೇಲ್ಭಾಗದ ಅಲ್ಪ ಅರಿವನ್ನು ಬಿಟ್ಟು ಒಳಗಿನ ವಿಶಾಲವಾದ ಅರಿವನ್ನು ಸಂಪಾದಿಸಲಿಕ್ಕೆ ಪ್ರಯತ್ನ ಮಾಡಿ ಸೂಕ್ಷ್ಮ ಮತ್ತು ಗಂಭೀರವಾದ ಜ್ಞಾನದಿಂದ ನಮ್ಮ ಆಂತರಿಕ ರಚನೆಯನ್ನು ತಿಳಿದುಕೊಂಡಂತೆ, ಈ ಅಂತಃಸ್ಫೂರ್ತಿಯ ಉಗಮವು ನಮಗೆ ತಿಳಿಯಹತ್ತುತ್ತದೆ. ಆಗ ನಮಗೆ ಆ ಸ್ಫೂರ್ತಿಯ ಕೆಲಸ ಮತ್ತು ಪರಿಣಾಮಗಳನ್ನು ತಿಳಿದುಕೊಂಡು ಅವುಗಳಲ್ಲಿ ಯೋಗ್ಯ ಕಂಡದ್ದನ್ನು ಸ್ವೀಕರಿಸಲಿಕ್ಕೂ ಅಯೋಗ್ಯವನ್ನು ತ್ಯಜಿಸಲಿಕ್ಕೂ

ಬರುತ್ತದೆ. ಅದೇ ಪ್ರಕಾರ ನಮ್ಮ ಮನಸ್ಸಿನ ಸೂಕ್ಷ್ಮ ಮತ್ತು ವ್ಯಾಪಕ ಕಾರ್ಯಕ್ಷೇತ್ರವು ನಮಗೆ ದೃಗ್ಗೋಚರವಾಗಿ ಅದರ ಹೆಚ್ಚಿನ ವಿಶಾಲವಾದ ಕಾರ್ಯವೂ, ಅನುಭವವೂ, ಈಗಿನಂತೆ ಇಕ್ಕಟ್ಟಾದ ನಿಯಮಗಳಿಗೆ ಒಳಗಾಗಿರದ ಹೆಚ್ಚು ಸ್ವತಂತ್ರವಾದ ಮನೋರಚನೆಯೂ, ಈ ರಚನೆಗಳಲ್ಲಿಯ ನಾನಾವಿಧಪ್ರಕಾರಗಳೂ ನಮ್ಮ ದೃಷ್ಟಿಗೆ ಬೀಳಹತ್ತುತ್ತವೆ ಇದಲ್ಲದೆ ನಮ್ಮ ಸ್ಥೂಲ ಮನಸ್ಸಿನ ಸಂಗಡ ಇದ್ದ ಈ ಸೂಕ್ಷ್ಮ ಮನಸ್ಸಿನ ಸಂಬಂಧವೂ, ನಮ್ಮ ಮೇಲೆ ಆಗುತ್ತಿರುವ ಅದರ ಶಕ್ತಿಯ ವರ್ಚಸ್ಸೂ, ನಮ್ಮ ಜೀವಿತದಲ್ಲಿಯ ಸೂಕ್ಷ್ಮ ಶರೀರಗಳಿಂದ ನಮ್ಮ ಈ ಸ್ಥೂಲ ಶರೀರದ ಮೇಲೆ ಆಗುವ ಪರಿಣಾಮಗಳೂ ಕಂಡುಬರುತ್ತವೆ. ಇವೆಲ್ಲ ಅನುಭವಕ್ಕೆ ಬೇರೊಂದು ಸ್ವತಂತ್ರ ವಿಷಯವಿರದೆ, ಇದರ ವಿಷಯವು ನಾವೇ ಆಗಿದ್ದೇವೆ. ನಮ್ಮ ವಿಚಾರದಲ್ಲಿ ಆಕಸ್ಮಿಕ ಕ್ರಾಂತಿಯಾದಂತೆ ಅಥವಾ ನಮ್ಮ ಪ್ರಯತ್ನದ ಹೊರತು ಅಜ್ಞಾತ ಸ್ಥಳದಿಂದ ಅಲೌಕಿಕ ವಿಚಾರ ತರಂಗಗಳು ನಮ್ಮಲ್ಲಿ ಧುಮುಕುತ್ತಿರುವಂತೆ ಕಾಣುತ್ತದೆ; ಸೂಚನೆ ಅಥವಾ ಭಾವನಾಮಯ ಮನೋವಿಕಾರಗಳನ್ನು ನಾವು ಪ್ರತ್ಯಕ್ಷ ಅನುಭವಿಸುತ್ತೇವೆ. ಈ ಪ್ರಕಾರ ನಮ್ಮೊಳಗೆ ನುಗ್ಗುತ್ತಿದ್ದ ವಿಚಾರ, ಅನುಭವ, ಅಥವಾ ಭಾವನೆಗಳ ಹೆಚ್ಚಿನ ಭಾಗದ ಉಗಮಸ್ಥಾನವು ಇದೇ ಜಗತ್ತನ್ನು ವ್ಯಾಪಿಸಿದ ಮನಃಶಕ್ತಿಯಲ್ಲಾಗಲಿ, ಜೀವನ ಶಕ್ತಿಯಲ್ಲಾಗಲಿ ಅಥವಾ ನಮ್ಮದೇ ಆದ ಅಜ್ಞಾತ ಸೂಕ್ಷ್ಮ ದೇಹದಲ್ಲಾಗಲಿ ಇರುವದೆಂದು ನಮಗೆ ಕಂಡರೂ ಇವೆಲ್ಲ ಘಟನೆಯ ಮೇಲೆ ಬೇರೊಂದು ಲೋಕದ ವರ್ಚಸ್ಸು ಇದ್ದೇ ಇರುತ್ತದೆ.

ಮೇಲೆ ವರ್ಣಿಸಿದ ವಿಚಾರಕ್ರಾಂತಿಯಲ್ಲಷ್ಟೇ ಪರಲೋಕಗಳ ಸಂಬಂಧವು ಇಹಲೋಕದಲ್ಲಿ ಇರುವದೆಂದು ತಿಳಿಯಕೂಡದು ಇಷ್ಟರಿಂದಲೇ ಆ ಲೋಕಗಳ ಪರಿಣಾಮವು ಮುಗಿಯದೆ, ಇದಕ್ಕೂ ಮುಂದೆ, ನಮ್ಮ ಮನಸ್ಸು ಅಥವಾ ಪ್ರಾಣಗಳ ದ್ವಾರವು ಬೇರೊಂದು ಅಲೌಕಿಕ ಅನುಭವಕ್ಕೆ ತೆರೆಯಲ್ಪಡುತ್ತದೆ. ಈ ಅನುಭವವು ಕೇವಲ ನಮ್ಮ ಮನಸ್ಸಿನ ಮೇಲೆ ಆಗುತ್ತಿದ್ದ ಪರಲೋಕಗಳ ಪರಿಣಾಮದ ಸ್ವರೂಪದ್ದಿರದೆ, ಅದೊಂದು ಸ್ವತಂತ್ರವಾಗಿ ದೃಗ್ಗೋಚರವಾಗುವ ಭುವನದಂತೆ ಇರುತ್ತದೆ. ಯಾಕಂ

ದರೆ, ಈ ಅನುಭವದಲ್ಲಿ ಕಾಣುವ ವಿಷಯಗಳಿಗೆ, ಈ ನಮ್ಮ ಸ್ಥೂಲ ಜಗತ್ತಿನಲ್ಲಿದ್ದಂತೆ ಸ್ವತಂತ್ರವಾದ ಘಟನೆಯೂ, ಬೇರೊಂದು ಪ್ರಕಾರದ ಕ್ರಿಯಾಪದ್ಧತಿ ಮತ್ತು ನಿಯಮಗಳೂ, ನಾವು ಈ ಲೋಕದಲ್ಲಿ ಕಾಣದ ಅಲೌಕಿಕ ಸಾಮಗ್ರಿಗಳಿಂದ ರಚಿತವಾದ ವಸ್ತುಗಳೂ ಕಂಡುಬರುತ್ತವೆ. ಈ ಪರಲೋಕ ರಚನೆಯಲ್ಲಿ, ಈ ಜಗತ್ತಿನಲ್ಲಿದ್ದಂತೆ, ಹುಟ್ಟಿ ಬೆಳೆಯುತ್ತಿರುವ, ದೇಹಧಾರಣ ಮಾಡಿದ ಪ್ರಾಣಿಗಳನ್ನೂ ಕಾಣಬಹುದು. ಆದರೆ ಈ ದೇಹದ ದ್ರವ್ಯಗಳು ಸೂಕ್ಷ್ಮತರವಾಗಿದ್ದು, ಅವು ಕೇವಲ ಸೂಕ್ಷ್ಮ ಇಂದ್ರಿಯ ಗಳಿಗೆ ದೃಶ್ಯವಾಗುವಂಥವು ಇರುತ್ತವೆ. ಅದೊಂದು ಅಲೌಕಿಕ ರೂಪದ ದೃಶ್ಯ. ನಮ್ಮ ಶರೀರ ಅಥವಾ ಜೀವಿತಗಳಿಗೆ ಈ ಸೂಕ್ಷ್ಮ ಲೋಕಗಳ ಅಥವಾ ಅಲ್ಲಿಯ ಪ್ರಾಣಿಗಳ ಯಾವ ಪ್ರಕಾರದ ಪ್ರತ್ಯಕ್ಷ ಸಂಬಂಧವು ಇರಲಿಕ್ಕಿಲ್ಲ ಹಾಗೂ ನಮ್ಮ ಮೇಲೆ ಅವುಗಳ ಯಾವ ಪರಿಣಾಮವೂ ಸಾಮಾನ್ಯತಃ ಆಗಲಿಕ್ಕಿಲ್ಲ. ಆದರೆ ಹಲವು ಸಾರೆ ಐಹಿಕ ವ್ಯವಹಾರದಲ್ಲಿ ಅವುಗಳ ಗುಪ್ತ ಸಂಬಂಧವಿದ್ದದ್ದು ಕಂಡುಬರಬಹುದು. ಅವು ಈ ವಿಶ್ವ ಶಕ್ತಿಯ ಪ್ರೇರಣೆಗೆ ಸಾಧನವಾಗಿ ನಮ್ಮ ಶರೀರದಲ್ಲಿ ಕೆಲಸಮಾಡಬಹುದು. ಅಥವಾ ಸ್ವತಂತ್ರವಾಗಿ ಈ ಜಗತ್ತಿನ ಜೀವನದಲ್ಲಿ ಅಥವಾ ಕೃತ್ಯದಲ್ಲಿ ಅಥವಾ ಅದರ ಓಘವನ್ನು ಬದಲಿಸುವದರಲ್ಲಿ ಅವು ಭಾಗವಹಿಸಬಹುದು. ಕೆಲವು ಸಾರೆ ಈ ಪಾರಲೌಕಿಕ ಪ್ರಾಣಿಗಳಿಂದ ನಾವು ಮಾರ್ಗದರ್ಶನ ವನ್ನು ಹೊಂದಬಹುದು. ಅಥವಾ ಅಡ್ಡಮಾರ್ಗಕ್ಕೂ ಹತ್ತಬಹುದು. ಅವುಗಳಿಂದ ಉಪಾಯ ಅಪಾಯಗಳೆರಡೂ ಸಂಭವಿಸಬಹುದು. ಅಥವಾ ಅವು ನಮ್ಮ ದೇಹವನ್ನು ಪ್ರವೇಶಿಸಿ ತಮ್ಮ ಹಿತಾಹಿತ ಉದ್ದೇಶಗಳನ್ನು ಸಾಧಿಸಲಿಕ್ಕೆ ಸಾಧನವನ್ನಾಗಿ ನಮ್ಮನ್ನು ಉಪಯೋಗಿಸಬಹುದು. ಕೆಲವು ಸಾರೆ ಈ ನಮ್ಮ ಜಗತ್ತು ಪಾರಲೌಕಿಕ ದುಷ್ಟ ಅಥವಾ ಸುಷ್ಟ ಶಕ್ತಿಗಳ ರಣಕ್ಷೇತ್ರವಾಗಿ ಪರಿಣಮಿಸಬಹುದು. ಈ ಜಗತ್ತನ್ನು ಉದ್ಧರಿಸುವ ಸತ್ಕೃತ್ಯ ಗಳಿಗೆ ಉತ್ತೇಜನ ಕೊಡುವ, ಜ್ಞಾನ ಜ್ಯೋತಿಯಿಂದ ಬೆಳಗುವ ಅಥವಾ ಇದನ್ನು ನಾಶಮಾಡಲಿಕ್ಕೆ ಉದ್ಯುಕ್ತವಾದ ಶಕ್ತಿಗಳ ಅನುಭವವೂ ಬರ ಬಹುದು. ಇವುಗಳಲ್ಲಿ ಕೆಲವು ಜೀವಗಳು, ಶಕ್ತಿಗಳು ಅಥವಾ ಓಘಗಳು ಪ್ರಕಾಶಮಯವಾಗಿದ್ದು ಈ ಜಗತ್ತನ್ನು ಕರುಣಿಸುವ ಅಥವಾ ಸಹಾಯಕರ

ವಾಗಿರುವ ದೇವಯೋನಿಯುವಿರುತ್ತವೆ ಮತ್ತೂ ಕೆಲವು ಜೀವ ಅಥವಾ ಶಕ್ತಿಗಳು ಆಸುರೀ ಸಂಪತ್ತಿಯಿಂದ ಕೂಡಿದವಿದ್ದು ಅವು ನಮ್ಮ ಮಾನವೀ ಬುದ್ಧಿಯಲ್ಲಿ ಅಚಿಂತ್ಯವಾದ ಭಯಂಕರ ಕ್ಷೋಭವನೆಬ್ಬಿಸಿ ಈ ಜಗತ್ತಿನ ನಾಶಕ್ಕೆ ಮತ್ತು ಅಧೋಗತಿಗೆ ಕಾರಣವಾಗುವವು. ಇದಲ್ಲದೆ ಇದೇ ಜಗತ್ತಿನಲ್ಲಿಯು ಸೂಕ್ಷ್ಮ ರೀತಿಯಿಂದ ಇರುವ ಪರಲೋಕಗಳಿಗೆ ಸಂಬಂಧಿಸಿರದ ಕೆಲವು ಜೀವಗಳ ಅಸ್ತಿತ್ವ ಮತ್ತು ಅವುಗಳ ಪ್ರಭಾವವು ನಮ್ಮ ಜ್ಞಾನಕ್ಕೆ ಬರಬಹುದು. ಅದೇ ಪ್ರಕಾರ ಈ ಲೋಕದಲ್ಲಿ ಮೊದಲು ಇದ್ದು ಈಗ ಪರಲೋಕಗಳಲ್ಲಿ ವಾಸಿಸುತ್ತಿರುವ ಜೀವಗಳ ದೃಶ್ಯವೂ ಅವುಗಳ ಪರಿಣಾಮವೂ ಕಂಡುಬರಬಹುದು. ಸಮಾಧಿಯ ಸ್ಥಿತಿಯಲ್ಲಿ ಈ ಸೂಕ್ಷ್ಮ ಲೋಕಗಳ ಅಥವಾ ಅದರ ನಿವಾಸಿಗಳ ಸಂಬಂಧವನ್ನು ಅನುಭವಿಸಬಹುದಲ್ಲದೆ ಪ್ರತ್ಯಕ್ಷವಾಗಿ ಈ ಲೋಕಗಳಿಗೆ ಹೋಗಿ ಅಲ್ಲಿಯ ಗುಪಿತಗಳನ್ನು ಅರಿಯಬಹುದು ಈ ಪ್ರತ್ಯಕ್ಷ ಪರಲೋಕ ಗಮನದ ವಿದ್ಯೆಯು ನಮ್ಮ ಪೂರ್ವಜರಿಗೆ ಗೊತ್ತಿತ್ತೆಂದು ಇತಿಹಾಸದಿಂದ ತಿಳಿಯುತ್ತದೆ. ಆದರೆ ಅಜ್ಞ ಜನರು ಈ ದೃಶ್ಯಗಳಿಗೆ ನಮಗೆ ಚಿರಪರಿಚಿತವಾದ ಈ ಸ್ಥೂಲ ಜಗತ್ತಿನ ಸ್ವರೂಪವನ್ನು ಕೊಟ್ಟು ಅನುಚಿತವಾದ ಈ ಜಗತ್ತಿನ ದೃಶ್ಯಗಳ ಬಣ್ಣವನ್ನು ಈ ಪಾರಲೌಕಿಕ ಅನುಭವಗಳಿಗೆ ಬಳಿದಿರುತ್ತಾರೆ. ನಮ್ಮ ಪ್ರತ್ಯಕ್ಷ ಅನುಭವ ಕ್ಷೇತ್ರದಲ್ಲಿಳಿದು ಇವುಗಳಿಗೆ ಲೌಕಿಕ ಆಕಾರಗಳನ್ನು ಕೊಡುವದು ಮನುಷ್ಯ ಸ್ವಭಾವವೇ ಆಗಿದೆ.

ಎಲ್ಲ ಮನುಷ್ಯ ಜನಾಂಗದ ಪುರಾಣಕಾಲದ ಪರಲೋಕದ ಬಗ್ಗೆ ಇದ್ದ ಅನುಭವ ಮತ್ತು ವಿಶ್ವಾಸ ಇವುಗಳನ್ನು ಸಾಮಾನ್ಯತಃ ಮೇಲೆ ಇಡಲಾಗಿದೆ. ಬೇರೆ ಬೇರೆ ಜನಾಂಗಗಳ ಪ್ರಕಾರ ಈ ಲೋಕಗಳ ಹೆಸರು ಮತ್ತು ವರ್ಣನೆಯು ಬೇರೆ ಬೇರೆಯಾಗಿರಬಹುದು. ಆದರೆ ಎಲ್ಲ ದೇಶ ಮತ್ತು ಕಾಲಗಳಲ್ಲಿಯೂ ಇದ್ದ ಈ ವಿಶ್ವಾಸ ಮತ್ತು ಅನುಭವಗಳಲ್ಲಿಯು ಸಾಮ್ಯವು ಎದ್ದು ಕಾಣುವಂತೆ ಇದೆ. ಅವ್ಯಾಹತವಾಗಿ ಗೋಚರವಾಗುವ ಈ ವಿಶ್ವಾಸ ಅಥವಾ ಅಲೌಕಿಕ ಅನುಭವ, ಇವುಗಳಿಗೆ ನಾವು ಎಷ್ಟರಮಟ್ಟಿಗೆ ಬೆಲೆಯನ್ನು ಕೊಡಬೇಕು ಎಂಬದು ವಿಚಾರಾರ್ಹವಾಗಿದೆ. ಈ ಪ್ರಕಾರದ ಅನುಭವವು ಯಾವನಿಗೆ ಅತಿ ಪರಿಚಿತವಾಗಿರುವದೋ ಅಂದರೆ ಯಾವನ

ಅನುಭವವು ಕೇವಲ ಆಕಸ್ಮಿಕವಿರದೆ ಸತ್ಯತೆಯನ್ನು ನಿಶ್ಚಯಿಸುವಷ್ಟು, ಕಾರ್ಯಕಾರಣಭಾವವನ್ನು ಸೂಚಿಸುವಷ್ಟು, ಅವುಗಳ ಶಕ್ತಿಯ ಪರಿಣಾಮವನ್ನು ತಿಳಿಯುವಷ್ಟು ಸಾರೆ ಎಡಬಿಡದೆ ಉಂಟಾಗಿರುವದೋ ಅಂಥವನಾದರೂ ಈ ವಿಶ್ವಾಸವು ಕೇವಲ ಅಂಧಶ್ರದ್ಧೆಯೆಂದೂ ಭ್ರಮೆಯೆಂದೂ ಆಗನ್ನು ಬದಿಗೊತ್ತಲಾರನು. ಆದ್ದರಿಂದ ಇಂಥ ಅನುಭವದ ಸಂಭಾವ್ಯತೆಯ ಮಹತ್ವವನ್ನು ತಿಳಿದುಕೊಂಡು ಅದಕ್ಕೊಂದು ನಿಶ್ಚಿತವಾದ ಅರ್ಥವನ್ನು ಹಚ್ಚಿದ ಹೊರತು ಗತ್ಯಂತರವಿಲ್ಲ.

ಆಧುನಿಕರು ಈ ಬಗ್ಗೆ ಅನ್ನುವದೇನೆಂದರೆ ಮನುಷ್ಯನು ಸತ್ತಮೇಲೆ ವಾಸಮಾಡುವ ಅಥವಾ ವಾಸಮಾಡುವನೆಂದು ಕಲ್ಪಿಸಿದ ಲೋಕಗಳ ಹಳೇ ತಿಳುವಳಿಕೆಯು ಕೇವಲ ಕಟ್ಟುಕಥೆಯಿದ್ದು ಅವನು ಕಲ್ಪಿಸಿದ ದೇವರ ಅಥವಾ ದೇವತೆಗಳ ಕಲ್ಪನೆಯೂ ಭ್ರಮವೇ ಆಗಿದೆ. ಆದ್ದರಿಂದ ಈ ಭಾವನೆಯನ್ನು ಆಧುನಿಕ ಬುದ್ಧಿ ಪ್ರಾಮಾಣ್ಯವಾದಿಯು ಮನ್ನಿಸುವದಿಲ್ಲ. ಅಥವಾ ಇದೊಂದು ಬೆಳೆಯುತ್ತಿರುವ ಜ್ಞಾನದ ವಿಶಿಷ್ಟ ಪ್ರಾಥಮಿಕ ಕಾಲದಲ್ಲಿ ಮನುಷ್ಯನು ತನ್ನಲ್ಲಿಯೇ ರಚಿಸಿದ ಕಲ್ಪನಾ ರಾಜ್ಯವಿದ್ದು ಮನಸ್ಸಿನ ವಸ್ತುರಚನಾ ಶಕ್ತಿಯಿಂದ ಈ ಲೋಕಗಳು ಅವನ ಕಲ್ಪನೆಯಲ್ಲಿಯೇ ಉತ್ಪನ್ನವಾಗುವವು. ಇದಕ್ಕೆ ಸ್ವತಂತ್ರ ಅಸ್ತಿತ್ವವಿರದ್ದರಿಂದ ಅವು ಕೇವಲ ಕಲ್ಪನಾಮಯವೇ ಆಗಿವೆಯೆಂದು ಅವರ ಅಭಿಪ್ರಾಯವಿದೆ ಆದರೆ ಈ ವಿಚಾರಗಳು ಕೇವಲ ಕಲ್ಪನೆಗಳಾಗಿರಲಾರವು. ಯಾಕಂದರೆ ಇವು ನಮ್ಮ ಅನುಭವದ ಒಂದು ಭಾಗವೂ ಆಗಿರುತ್ತವೆ. ಹೀಗಿರದಿದ್ದರೆ ಮಾತ್ರ ಅದೊಂದು ಕಲ್ಪನಾಸೃಷ್ಟಿಯೆಂದು ಅನ್ನಬಹುದಾಗಿತ್ತು. ಇದಕ್ಕೆ ಅವರು ಪುನಃ ವಾದಿಸಬಹುದೇನಂದರೆ ಪರಲೋಕಗಳು ಅನುಭವಕ್ಕೆ ಬಂದಾಗ್ಯೂ ಆ ಅನುಭವವು ಕೇವಲ ಕಲ್ಪನಾಮಯ ಸೃಷ್ಟಿಯಾಗಬಹುದು. ಯಾಕಂದರೆ, ಮನುಷ್ಯನ ವಿಚಾರದ ರಚನಾಶಕ್ತಿಯಿಂದ ಕಲ್ಪಿಸಿದ ಮನೋಮಯ ಮೂರ್ತಿಗಳು ಸೂಕ್ಷ್ಮರೂಪವನ್ನು ಧರಿಸಿ, ಅವನೇ ತನ್ನ ಮನಸ್ಸಿನಲ್ಲಿ ಕಲ್ಪಿಸಿದ ಸೂಕ್ಷ್ಮಲೋಕಗಳಲ್ಲಿ ವಾಸಮಾಡುವಂತೆ ಅವನ ಅನುಭವದ ಮೇಲೆ ಪ್ರತಿಕ್ರಿಯೆಯನ್ನು ಉಂಟುಮಾಡಬಹುದು. ಆದ್ದರಿಂದ ಪರಲೋಕಗಳು ಮನುಷ್ಯನ ಕಲ್ಪನೆಯಿಂದ ರಚಿಸಲ್ಪಟ್ಟವುಗಳೆಂದು ಹೇಳಲಿಕ್ಕೆ

ಪ್ರತ್ಯವಾಯವಿಲ್ಲ ಇದಕ್ಕೆ ನಮ್ಮ ಪ್ರತ್ಯುತ್ತರವೇನಂದರೆ, ಈ ಪ್ರಕಾರ ಕೇವಲ ವಿಚಾರಶಕ್ತಿಯಿಂದ ಪ್ರತ್ಯಕ್ಷ ಅನುಭವಕ್ಕೆ ಬರುವ ಜಗತ್ತಿನ ವಸ್ತು ಜೀವಗಳ ರಚನೆಯಾಗುವದು ಶಕ್ಯವಿದ್ದರೆ, ಈ ನಮ್ಮ ಪ್ರತ್ಯಕ್ಷ ಜಾಗ್ರತ ಅನುಭವದಲ್ಲಿದ್ದ ದಶ್ಯಮಾನವಾದ ಜಗತ್ತೂ ಕಲ್ಪನಾಮಯವಾಗಿ ಕಟ್ಟುಕಥೆಯುಲ್ಲಿಯೇ ಬರಬೇಕಾದೀತು. ಮತ್ತು ನಮ್ಮ ಅನುಭವ ಜನ್ಯ ಜ್ಞಾನವೂ ಕೂಡ ಆದ್ಯ ಅಜ್ಞಾನದ ಒಂದು ಕಟ್ಟು ಕಥೆಯೇ ಆಗುವದು. ಈ ಪ್ರಕಾರದ ವಿಚಾರ ಸರಣಿಯುಲ್ಲಿ ಈ ಎಲ್ಲ ಜಗತ್ತೂ ಅದರಲ್ಲಿಯ ಎಲ್ಲ ವಸ್ತು ಜಾತಗಳೂ ಇವಕ್ಕೆ ಕಾರಣವಾದ ಕೇವಲ ಮಾಯೆಯ ಅಜ್ಞಾನದ ಹೊರತಾಗಿ, ಕಲ್ಪನೆಗಳೇ ಆಗಬಹುದು ಮತ್ತು ಈ ಅಸದ್ರೂಪ ಆದ್ಯ ವಸ್ತುವಿನಲ್ಲಿ ಎಲ್ಲವೂ ಲೀನವಾಗಬಹುದು.

ಆದರೆ ಈ ಪ್ರಕಾರ ಮೊದಲು ಏನೂ ಇಲ್ಲದ ಶೂನ್ಯದಲ್ಲಿ ಯಾವದೂ ವಸ್ತುವಿನ ಸಹಾಯವಿಲ್ಲದೆ, ಮನುಷ್ಯನ ಮನಸ್ಸು ಸ್ವತಂತ್ರ ಜಗತ್ತನ್ನು ನಿರ್ಮಿಸಿದ ಬಗ್ಗೆ ಎಲ್ಲಿಯೂ ಪ್ರಮಾಣವಿಲ್ಲ ಮತ್ತು ಹೀಗೆ ನಿರ್ಮಿಸುವ ಶಕ್ಯತೆಯೂ ಇರುವದಿಲ್ಲ. ಆದರೆ ಅದು ಮೊದಲೇ ಉತ್ಪನ್ನವಾದ ಜಗತ್ತಿಗೆ ತನ್ನ ರಚನಾಶಕ್ತಿಯಿಂದ ತುಸು ಉನ್ನತ ಸ್ವರೂಪವನ್ನು ಕೊಡಬಹುದು. ಮನುಷ್ಯನ ಮನಸ್ಸು ನಾವು ತಿಳಿದುಕೊಂಡದ್ದಕ್ಕಿಂತ ಹೆಚ್ಚು ಬಲವುಳ್ಳದ್ದೇನೋ ನಿಜ ಎರಡನೆಯವರ ಜ್ಞಾನಶಕ್ತಿಯ ಮೇಲಾಗಲಿ, ಜೀವಿತದಲ್ಲಾಗಲಿ ಅಥವಾ ಅಚೇತನ ಪದಾರ್ಥಗಳ ಮೇಲಾಗಲಿ ಪರಿಣಾಮಕಾರಕವಾದ ಬದಲಾವಣೆಯನ್ನು ಈ ಮನಸ್ಸಿನ ಶಕ್ತಿಯಿಂದ ಉಂಟುಮಾಡಬಹುದು ಆದರೆ ಏನೂ ಇಲ್ಲದ ಶೂನ್ಯದಲ್ಲಿ ಪೂರ್ಣ ಸ್ವತಂತ್ರ ಸೃಷ್ಟಿಯನ್ನು ನಿರ್ಮಾಣಮಾಡುವದು ಅದರ ಶಕ್ತಿಯ ಹೊರಗಿನ ಕೆಲಸವಾಗಿದೆ. ನಾವು ಈ ಬಗ್ಗೆ ಹೆಚ್ಚು ಧೈರ್ಯಮಾಡಿ ಹೇಳುವದೇ ಆದರೆ ಮನುಷ್ಯನ ಮನಸ್ಸಿನ ಸಾಮರ್ಥ್ಯವು ಬೆಳೆದಂತೆ, ಅವನು ಈಗ ತನ್ನ ಜ್ಞಾನದೃಷ್ಟಿಯ ಅಥವಾ ತಿಳುವಳಿಕೆಯ ಕಕ್ಷೆಯಲ್ಲಿ ಇದ್ದ ವಸ್ತುಗಳಿಗಿಂತ ಹೆಚ್ಚು ಸೂಕ್ಷ್ಮವಾದ ವಸ್ತುಗಳನ್ನು ಅರಿತು ಅವುಗಳ ಸಂಗಡ ಸಂಬಂಧವನ್ನು ಬೆಳೆಸಬಹುದು. ಆದರೆ ಈ ಸೂಕ್ಷ್ಮ ವಸ್ತುಗಳು ಮುಂಚಿತವಾಗಿ ಈ ವಿಶ್ವದಲ್ಲಿ ಇರಲಿಕ್ಕೆ ಬೇಕು.

ಅವುಗಳನ್ನು ಅವನು ನಿರ್ಮಾಣ ಮಾತ್ರ ಮಾಡಲಾರನು ಮನುಷ್ಯನ ಆಂತರಿಕ ಅನುಭವವು ಬೆಳೆಯುತ್ತ ಹೋದಂತೆ, ಅವನಿಗೆ ಸೂಕ್ಷ್ಮತರವಾದ ಹೊಸ ಲೋಕಗಳ ದ್ವಾರಗಳು ತೆರೆಯಲ್ಪಡುತ್ತವೆ—ಅವನ ಜ್ಞಾನವು ಆ ಲೋಕಗಳನ್ನು ವಿಷಯೀಕರಿಸುತ್ತದೆ ಅವನ ಜ್ಞಾನ—ಚಕ್ಷುವಿನ ಕೇಂದ್ರ ದಲ್ಲಿದ್ದ ಅಜ್ಞಾನಮಯ ಗಂಟುಗಳು ಕರಗುತ್ತಹೋಗಿ ಹೆಚ್ಚು ವಿಶಾಲವಾದ ಭುವನಗಳ ಜ್ಞಾನವು ಅವನಿಗೆ ಆಗಹತ್ತುವದು. ಮತ್ತು ಅವುಗಳ ಸಂದೇಶ ಗಳನ್ನು ಸ್ವತಂತ್ರವಾಗಿ ಸ್ವೀಕರಿಸಲಿಕ್ಕೂ, ಈ ಲೋಕಗಳನ್ನು ಪ್ರವೇಶಿಸ ಲಿಕ್ಕೂ, ಈ ಸ್ಥೂಲ ಮನಸ್ಸಿನ ಅಂತಜ್ಞಾನದಿಂದಲೇ ಅವುಗಳ ಯಥಾರ್ಥ ಕಲ್ಪನೆ ಮಾಡಲಿಕ್ಕೂ ಅವನು ಸಮರ್ಥನಾಗುತ್ತಾನೆ ಮನುಷ್ಯನು ಅನ್ಯ ಲೋಕಗಳ ಬಗ್ಗೆ ಅಥವಾ ದೇವತೆಗಳ ಬಗ್ಗೆ ಮನೋರಾಜ್ಯವನ್ನು ಮಾಡು ವದೂ, ಅವುಗಳ ಸಂಕೇತಗಳನ್ನೂ, ಸೂಚಕವಾದ ಪ್ರತಿಬಿಂಬಗಳನ್ನೂ ರಚಿಸಿ ಈ ಲೋಕದಲ್ಲಿ ವ್ಯವಹರಿಸುವದೂ ನಿಜ. ಇಷ್ಟರ ಮಟ್ಟಿಗೇ ಅದು ಅವನ ಪ್ರೀತಿಯು ಅಥವಾ ಪೂಜಾರ್ಹ ಕಲ್ಪನೆಯಾಗಬಹುದು. ಈ ಕಲ್ಪನೆ ಗಳಿಂದಲೇ ಅವನು ಮೊದಲು ದೇವತೆಗಳ ಮೂರ್ತಿಗಳನ್ನೂ ಪರಲೋಕ ಗಳನ್ನೂ ತನ್ನ ಮನಸ್ಸಿನಲ್ಲಿ ರಚಿಸುತ್ತಾನೆ. ಆದರೆ ಸತ್ಯಸೃಷ್ಟಿಯ ದೇವತೆ ಗಳೂ ಲೋಕಗಳೂ ಈ ಅವನ ಕಲ್ಪನಾ ಸೃಷ್ಟಿಯ ಮುಖಾಂತರ ಈ ಲೋಕದಲ್ಲಿ ತಮ್ಮ ವರ್ಚಸ್ಸನ್ನು ಬೀರಿ, ತಮ್ಮ ಶಕ್ತಿಯನ್ನೂ ಜ್ಯೋತಿರ್ಮಯ ದಿವ್ಯರೂಪಗಳನ್ನೂ ಅವನ ಜ್ಞಾನಪಥಕ್ಕೆ ತಂದುಕೊಡುತ್ತವೆ. ಈ ಎಲ್ಲ ಅನುಭವವನ್ನು ಈ ಸೂಕ್ಷ್ಮ ಲೋಕಗಳು ನಿರ್ಮಾಣ ಮಾಡುವದಿಲ್ಲ. ಜೀವನು ಅಜ್ಞಾನದಿಂದ ಮೇಲಕ್ಕೇರುತ್ತ ಹೋದಹಾಗೆ ಇದೇ ಲೋಕ ದಲ್ಲಿಯೇ ಆ ಲೋಕಗಳು ಅವನ ಜ್ಞಾನಪಥಕ್ಕೆ ಬಂದು ಸಾಕ್ಷಾತ್ತಾಗಿ ಕಾಣಹತ್ತುತ್ತವೆ. ಪರಲೋಕಗಳ ಶಕ್ತಿಯನ್ನು ಅವನ ಬುದ್ಧಿಯು ಈಗ ಗ್ರಹಣಮಾಡುವದರಿಂದ ಅವುಗಳ ಆಕಾರವು ಅವನ ಬುದ್ಧಿಯಲ್ಲಿ ಬಿಂಬಿಸ ಹತ್ತುತ್ತದೆ. ಮೇಲ್ತರಗತಿಯ ಭುವನಗಳ ಯಥಾರ್ಥವಾದ ಸಂಬಂಧವನ್ನು ಈಗ ಅವನು ತಿಳಿದುಕೊಂಡ ಕಾರಣ ಇಲ್ಲಿಯ ವರೆಗೆ ಅವನ ಮೇಲಿದ್ದ ಭೌತಿಕ ಅಜ್ಞಾನದ ಆವರಣವು ದೂರವಾಗುತ್ತದೆ. ಇದೇ ಜಗತ್ತಿನಲ್ಲಿಯೇ ಆದ ಅವನ ಆತ್ಮವಿಕಾಸದ ಪರಿಣಾಮವಿದು. ಈ ದೇಹದಲ್ಲಿ ವಾಸಿಸು

ತ್ತಿದ್ದ ಜೀವಾತ್ಮನ ಹಿಂದೆ ಇದ್ದ ಅಜ್ಞಾನದ ಪಟಲಗಳನ್ನು ತನ್ನದೇ ಆದ ಆತ್ಮಶಕ್ತಿಯಿಂದ—ಆತ್ಮಜ್ಞಾನದ ಕೇಂದ್ರೀಕರಣ ರೂಪದ ಏಕಾಗ್ರತೆಯ ಅಸ್ತ್ರದಿಂದ—ಹರಿದು ಹಾಕುವದೇ ಮಾನವನ ಜೀವಿತದಲ್ಲಿಯ ಆದ್ಯ ಕರ್ತವ್ಯವಾಗಿರುತ್ತದೆ. ಮೇಲೆ ಹೇಳಿದ ಜೀವಾತ್ಮನ ಪಟಲಗಳು ಅಂಶತಃ ಅಥವಾ ಪೂರ್ಣವಾಗಿ ಹರಿದುಹೋಗಿ ಅವನ ಬುದ್ಧಿ, ಪ್ರಾಣ ಮತ್ತು ಆತ್ಮಗಳ ಹೆಚ್ಚು ವಿಶಾಲವಾದ ಪ್ರದೇಶಗಳನ್ನು ಈ ದೇಹದಲ್ಲಿ ನೋಡು ವದೇ ಮನುಷ್ಯನ ಕರ್ತವ್ಯದ ಕೊನೆಯು

ಈ ಜಗತ್ತಿನ ಉತ್ಕ್ರಾಂತಿಗೆ ಸಹಾಯವಾಗಬೇಕೆಂದು ಇತರ ಸೂಕ್ಷ್ಮ ಭುವನಗಳು ಈ ಜಗತ್ತು ಉತ್ಪನ್ನವಾದ ಮೇಲೆ ರಚಿಸಲ್ಪಟ್ಟವೆಂದು ಕೆಲವರು ತಿಳಿಯಬಹುದು ಆದರೆ ಈ ಸ್ಥೂಲ ಜಗತ್ತೊಂದನ್ನೇ ಮೊದಲು ನೋಡಿ, ಅದನ್ನೇ ಅರಿತು, ಎಲ್ಲ ವಿಚಾರಗಳಿಗೂ ಇಲ್ಲಿಂದಲೇ ಆರಂಭ ಮಾಡಿ, ಇಲ್ಲಿಯೇ ಪ್ರಭುತ್ವವನ್ನು ನಡೆಸುತ್ತ ಇದ್ದ ಈ ಸ್ಥೂಲ ಮನಸ್ಸು, ಅನ್ಯ ಸೂಕ್ಷ್ಮ ಜಗತ್ತುಗಳ ಅಸ್ತಿತ್ವವನ್ನು ಒಪ್ಪುವ ಪ್ರಸಂಗವೇ ಅದರ ಮೇಲೆ ಅಪರಿಹಾರ್ಯವಾಗಿ ಬಂದಲ್ಲಿ, ಈ ಪ್ರಕಾರದ ವಿಚಾರಕ್ಕೆ ಪ್ರವೃತ್ತವಾಗುವದು ಸಹಜವಾಗಿದೆ. ಆಗ ಅದು ಈ ಪಂಚಭೂತಾತ್ಮಕ ಜಗತ್ತನ್ನೆ — ಅಚೇತನ ವಸ್ತುಗಳನ್ನೇ — ಆರಂಭಸ್ಥಾನವಾಗಿ, ಎಲ್ಲ ಅಸ್ತಿತ್ವಕ್ಕೂ ಆಧಾರವಾಗಿ ಕಲ್ಪಿಸುತ್ತದೆ ಯಾಕಂದರೆ, ಈ ಮನಸ್ಸಿಗೆ ಉತ್ಕ್ರಾಂತಿಯ ಆರಂಭ ಸ್ಥಾನವು ಈ ಜಗತ್ತಿನಲ್ಲಿಯೇ ಕಂಡುಬರುತ್ತದೆ. ಅಜ್ಞಾನ ಸ್ಥಿತಿಯಲ್ಲಿ, ಜನ್ಮದಾರಭ್ಯ ಈ ಸ್ಥೂಲ ಜಗತ್ತೇ ಎಲ್ಲವೂ ಎಂದು ವಿಚಾರಮಾಡುವ ನಮ್ಮ ಮನಸ್ಸಿಗೆ ಪ್ರೀತಿಯಿಂದ ಸಂರಕ್ಷಿಸಿದ ಈ ವಿಚಾರ ವನ್ನು ಬದಲಿಸುವದು ಕಠಿಣವಾಗುತ್ತದೆ ತನ್ನ ವಿಚಾರ ಶಕ್ತಿಯು ಬೆಳೆದ ನಂತರವೂ ಈ ಮನಸ್ಸು ಅನ್ಯಲೋಕಗಳು ಈ ಭೌತಿಕ ಜಗತ್ತನ್ನೇ ಆಶ್ರಯಿಸಿರಬೇಕೆಂಬ ಕಲ್ಪನೆಯನ್ನು ಬಿಡುವದಿಲ್ಲ ಇದೇ ಈ ತಪ್ಪು ತಿಳುವಳಿಕೆಗೆ ಕಾರಣವಾಗಿರಬೇಕು. ಈ ಜಗತ್ತು ಅನ್ಯ ಲೋಕಗಳಿಗೆ ಆಧಾರವಿರದಿದ್ದರೆ ಅವುಗಳ ರಚನೆಗೆ ಕಾರಣವಾದ ಸ್ವತಂತ್ರ ಶಕ್ತಿಯಾವದು? ಯಾವ ಸಾಧನಗಳಿಂದ ಅವು ರಚಿತವಾಗಿರಬಹುದು ? ಎಂದು ವಿಚಾರ

ಮಾಡುವದು ಕ್ರಮಪ್ರಾಪ್ತವಾಗಿದೆ. ಯಾವ ಉತ್ಕೃಷ್ಟವಾದ ವ್ಯಾಪಕ ಜ್ಞಾನದಿಂದ ನಮ್ಮ ಈ ಸಂಕುಚಿತವಾದ ಬುದ್ಧಿಯು ಜ್ಞಾನವು ಉತ್ಪನ್ನ ವಾಗಿರುವದೋ ಅದೇ ಸಚ್ಚಿದಾನಂದ ವಸ್ತುವಿನಲ್ಲಿ ಪ್ರಕೃತಿ ಸಂಜ್ಞಿತ ಅಜ್ಞಾನದಿಂದ ಬೆಳೆಯುತ್ತಿರುವ ಪ್ರಾಣ ಮತ್ತು ಮನಸ್ಸಿನ ತತ್ವಗಳಿಂದಲೇ ಈ ಲೋಕಗಳು ನಿರ್ಮಿತವಾಗಿರಬೇಕು ಈ ನಮ್ಮ ಸ್ಥೂಲ ದೇಹವು ನಷ್ಟವಾದ ನಂತರ ನಮ್ಮ ಸೂಕ್ಷ್ಮ ದೇಹವು ಉಳಿಯುತ್ತದೆ. ಈ ಸೂಕ್ಷ್ಮ ದೇಹದ ಸಾಮುಗ್ರಿಯು ಇದೇ ಪ್ರಾಣ ಮತ್ತು ಮನಸ್ಸಿನ ತತ್ವಗಳಿಂದ ಉಂಟಾದ ಕಾರಣ ಈ ಸೂಕ್ಷ್ಮ ಪರಲೋಕಗಳು ಅವುಗಳ ವ್ಯಾಪಕವಾದ ಜ್ಞಾನಶಕ್ತಿಗೆ ಅಷ್ಟೇ ಸತ್ಯವಾಗಿ ಕಾಣುತ್ತಿರಬೇಕು. ಪ್ರಾಣ ಮತ್ತು ಮನಸ್ತತ್ವಗಳು ಈ ನಮ್ಮ ಜೀವಿತದಲ್ಲಿಯೂ ನಮ್ಮ ಇರವಿಕೆಯ ಭಾಗವೇ ಆದುದರಿಂದ, ಅವು ಈ ಸೂಕ್ಷ್ಮ ಲೋಕಗಳಲ್ಲಿ ಸಂಚರಿಸಿ ನಮ್ಮ ಸ್ಥೂಲ ಮನಸ್ಸಿನ ಮೇಲೆ ಅಘಾತವನ್ನುಂಟುಮಾಡುತ್ತಿರುವದರಿಂದ ನಮ್ಮ ಸ್ಥೂಲ ಮನಸ್ಸಿನ ಒಂದು ಪ್ರಕಾರದ ವಿಕಾರಗಳಾದ ವಿಶ್ವಾಸ ಅಥವಾ ಮನೋ ರಾಜ್ಯರೂಪದ ತೆರೆಗಳನ್ನುಂಟುಮಾಡುತ್ತಿರಬೇಕು. ಸಚ್ಚಿದಾನಂದ ಪರಮಾತ್ಮವಸ್ತುವೇ ಈ ವಿಶ್ವದ ನಿಮಿತ್ತ ಮತ್ತು ಉಪಾದಾನ ಕಾರಣ ಗಳೆಂದು ನಾವು ಅಂಗೀಕರಿಸಿದರೆ, ನಾವು ಮೇಲೆ ವಿವೇಚಿಸಿದ ಪರಲೋಕ ಗಳ ಅಸ್ತಿತ್ವದ ಉಪಪತ್ತಿಯೊಂದೇ ಶಕ್ಯವಿರುವದು. ಮತ್ತು ಈ ವಿವೇಚ ನೆಯ ಪ್ರಕಾರ ಪರಲೋಕಗಳಿಗೆ ನಾವು ಶಂಕಿಸಬಹುದಾದ ಅಸತ್ಯದ ಅಥವಾ ಕಾಲ್ಪನಿಕತೆಯ ದೋಷವೂ ತಟ್ಟುವದಿಲ್ಲ. ಈ ನಮ್ಮ ಸ್ಥೂಲ ಜಗತ್ತು ನಮ್ಮ ಸ್ಥೂಲ ಮನಸ್ಸಿಗೆ ಎಷ್ಟು ಸತ್ಯವಾಗಿ ಕಾಣುವದೋ ಅಷ್ಟೇ ಸತ್ಯವಾಗಿ ಪರಲೋಕಗಳೂ ನಮ್ಮ ಸೂಕ್ಷ್ಮ ದೇಹಗಳಿಗೆ ಕಾಣುವದೆಂದು ಸಿದ್ಧವಾಗುತ್ತದೆ.

ಈ ಸ್ಥೂಲ ಜಗತ್ತೇ ಜಗನ್ನಿರ್ಮಾತನ ಕೃತಿಯ ಪ್ರಥಮ ಕಾರ್ಯ ವೆಂದೂ, ಮತ್ತು ಈ ಸ್ಥೂಲ ಸೃಷ್ಟಿಯ ನಿರ್ಮಾಣದ ನಂತರವೇ ಉತ್ಕ್ರಾಂತಿಯ ಓಘದಲ್ಲಿ ಇತರ ಲೋಕಗಳು ನಿರ್ಮಾಣವಾದವೆಂದೂ ನಾವು ಕಲ್ಪಿಸಿದರೂ, ಈ ಮೇಲ್ತರಗತಿಯ ಮತ್ತು ಈ ಜಗತ್ತಿಗಿಂತ ಹೆಚ್ಚು

ಸ್ವಾತಂತ್ರ್ಯವನ್ನು ಪ್ರಕಟಮಾಡುವ ಲೋಕಗಳು, ಸರ್ವವ್ಯಾಪೀ ವಿಶ್ವಾತ್ಮನಿಂದಲೇ ಹೆಚ್ಚು ಉತ್ಕ್ರಾಂತ ಸ್ಥಿತಿಗೆ ಮುಟ್ಟಿದ ಜೀವಗಳ ವಾಸಸ್ಥಳವಾಗಬೇಕೆಂದು ಬಂದು ಅಚಿಂತ್ಯಪ್ರಕಾರದಿಂದ ಈ ಜಗತ್ತಿಗೆ ಹೊಂದಿಯೇ ರಚಿಸಲ್ಪಟ್ಟಿರಬೇಕು. ಮತ್ತು ಈ ಸ್ಥೂಲ ಜಗತ್ತಿನ ಮೇಲೆ ಅವುಗಳ ಶಕ್ತಿ ಮತ್ತು ಅನುಭವಗಳ ಆಘಾತವಾಗುವದರಿಂದ, ಪ್ರಾಣ, ಬುದ್ಧಿ, ಆತ್ಮಗಳು ಈ ಜಗತ್ತನ್ನು ಪ್ರವೇಶಿಸಿರಬೇಕೆಂದು ತರ್ಕಮಾಡಬಹುದು. ಆದರೆ ಈ ಪ್ರವೇಶವು ನಮ್ಮ ಅನುಭವಕ್ಕೆ ಸಯುಕ್ತಿಕವಾಗಿ ಕಾಣುವದಿಲ್ಲ. ಯಾಕಂದರೆ ಊರ್ಧ್ವ ಲೋಕಗಳು ನಮ್ಮ ಅವಲೋಕನ ಅಥವಾ ಅನುಭವದ ಪ್ರಕಾರ ಈ ಸ್ಥೂಲ ಸೃಷ್ಟಿಯು ಮೇಲೆ ಯಾವ ಪ್ರಕಾರದಿಂದಲೂ ಅವಲಂಬಿಸಿ ಇದ್ದಂತೆ ತೋರುವದಿಲ್ಲ. ಅಥವಾ ಈ ಸೂಕ್ಷ್ಮ ಸೃಷ್ಟಿಯು ಈ ಸ್ಥೂಲ ಸೃಷ್ಟಿಯು ಪರಿಣಾಮವಿದ್ದ ಬಗ್ಗೆ ಪ್ರಮಾಣಗಳೂ ಇಲ್ಲ. ಆದರೆ ಇದರ ವಿರುದ್ಧವಾಗಿ ಸೂಕ್ಷ್ಮ ಸೃಷ್ಟಿಗಳು ಹೆಚ್ಚು ಉನ್ನತ ಮತ್ತು ವ್ಯಾಪಕವಾದವುಗಳಿದ್ದು ಅವುಗಳ ಜ್ಞಾನದ ಮೇರೆಯೂ ಹೆಚ್ಚು ವ್ಯಾಪಕವಾದದ್ದು ಇರುತ್ತದೆ. ಈ ಸ್ಥೂಲ ಸೃಷ್ಟಿಯಲ್ಲಿಯ ಪ್ರತಿಯೊಂದು ಕ್ರಿಯೆಯು ಸೂಕ್ಷ್ಮ ಸೃಷ್ಟಿಯ ಕ್ರಿಯೆಗಳ ಪರಿಣಾಮವಾಗಿರುವದು. ಆದ್ದರಿಂದ ಸ್ಥೂಲ ಸೃಷ್ಟಿಯು ಸೂಕ್ಷ್ಮಸೃಷ್ಟಿಯ ಉಗಮಸ್ಥಾನವಿದ್ದಂತೆ ತೋರುವದಿಲ್ಲ. ಇದಲ್ಲದೇ, ಈ ಲೋಕದ ಎಲ್ಲ ವಸ್ತುಗಳೂ ಸೂಕ್ಷ್ಮದಿಂದಲೇ ಉಗಮ ಹೊಂದಿರುತ್ತವೆ. ಮತ್ತು ಇಲ್ಲಿಯ ಉತ್ಕ್ರಾಂತಿಯು ಪ್ರಯತ್ನದ ಹೆಚ್ಚಿನ ಅಂಶವು ಅವುಗಳ ಮೇಲೆಯೇ ಅವಲಂಬಿಸಿದ್ದಂತೆ ತೋರುತ್ತದೆ ಸೂಕ್ಷ್ಮ ಬುದ್ಧಿ ಮತ್ತು ಪ್ರಾಣ ಶಕ್ತಿಗಳ ಸೀಮೆಯಿಂದ ಅಜ್ಞಾತವಾಗಿ, ಗುಪ್ತರೀತಿಯಿಂದ ನಮ್ಮ ಮೇಲೆ ಅಗಾಧ ಶಕ್ತಿಯು ಪರಿಣಾಮಗಳು ಕೆಳಗಿಳಿಯುವಂತೆ ದೃಶ್ಯಗಳು ಕಂಡ ಬರುತ್ತವೆ. ಆದರೆ ಇವುಗಳಲ್ಲಿಯ ಬಹುಸ್ವಲ್ಪ, ಆರಿಸಿದ ಕೊಂಚ ಭಾಗವು ಮಾತ್ರ ಈ ಸೃಷ್ಟಿಯಲ್ಲಿ ಮೂರ್ತಸ್ವರೂಪವನ್ನು ಹೊಂದುತ್ತದೆ ಉಳಿದ ವಿಪುಲ ಭಾಗವು ಮೂರ್ತ ನಾಮರೂಪಗಳನ್ನು ಧರಿಸುವದಕ್ಕೇ ಯೋಗ್ಯವಾದ ಕಾಲ ಮತ್ತು ಪರಿಸ್ಥಿತಿಗಳ ನಿರೀಕ್ಷಣವನ್ನು ಮಾಡುತ್ತ ಇರುತ್ತವೆ. ಈ ಶಕ್ತಿಗಳ ಅವತರಣದಿಂದಲೇ ಜೀವನ ಎಲ್ಲ ಶಕ್ತಿಗಳ ಉತ್ಕ್ರಾಂತಿಯು ಆಗುತ್ತಿರುತ್ತದೆ.

ಪರಲೋಕಗಳ ಈ ಕ್ರಿಯೆಯ ಸ್ವರೂಪವು. ಈ ನಮ್ಮ ಜಗತ್ತಿಗೇ ಮತ್ತು ಅದರಲ್ಲಿಯ ನಮ್ಮ ಜೀವನಕ್ಕೇ ಎಲ್ಲ ಮಹತ್ವವನ್ನು ಕೊಡುವ ಬಗ್ಗೆ ಮಾಡುತ್ತಿದ್ದ ಕೆಲವು ವಿಚಾರವಂತರ ಪ್ರಯತ್ನಗಳನ್ನು ನಿಷ್ಫಲ ಮಾಡ್ಡುತ್ತದೆ. ನಮ್ಮ ತಿಳುವಳಿಕೆಯಲ್ಲಿಯ ಈಶ್ವರನ ಕಲ್ಪನೆಯು ಕೇವಲ ಕಟ್ಟುಕಥೆಯಂತೆ ರಚಿಸಿದ್ದಿರದೆ ಈ ನಮ್ಮ ಸ್ಥೂಲ ಜೀವನದಲ್ಲಿ ಈಶ್ವರನನ್ನು ಕ್ರಮವಾಗಿ ಸಾಕ್ಷಾತ್ಕರಿಸುವ ಅಗೊಂಡು ಸಾಧನೆಯಾಗಿರುತ್ತದೆ. ನಾವು ಈಶ್ವರನನ್ನೂ ಅವನ ಶಕ್ತಿಯನ್ನೂ ನಿರ್ಮಿಸುವದಿಲ್ಲ ಆದರೆ ನಮ್ಮಲ್ಲಿ ಕಂಡುಬರುವ ಈಶ್ವರತ್ವವು ಸನಾತನ ಬ್ರಹ್ಮ ಸ್ವರೂಪದ ಅಥವಾ ಪರಮಾತ್ಮನ ಅಂಶತಃ ಪ್ರತಿಬಿಂಬವಾಗಿರುತ್ತದೆ. ನಾವು ಪರಲೋಕಗಳನ್ನೂ ನಿರ್ಮಿಸುವದಿಲ್ಲ. ಆದರೆ ಅವು ನಮ್ಮ ಈ ಜಗತ್ತಿನ ಪ್ರಕೃತಿಯ ನಿಯಮಗಳಿಗನುಸರಿಸಿ ತಮ್ಮ ಉಜ್ವಲವಾದ ಜ್ಞಾನಜ್ಯೋತಿ, ಸೌಂದರ್ಯ ಮತ್ತು ಅಲೌಕಿಕ ಶಕ್ತಿಗಳನ್ನು ನಮ್ಮ ಮೇಲೆ ಬೀರುವ ಸಾಧನಗಳಾಗಿರುತ್ತವೆ. ಪ್ರಾಣಮಯ ಲೋಕಗಳ ಒತ್ತರದಿಂದ ಇಲ್ಲಿಯ ನಮ್ಮ ಪ್ರಾಣಶಕ್ತಿಯು ಬೆಳವಣಿಗೆಯನ್ನು ಹೊಂದುತ್ತದೆ. ನಮ್ಮ ಆತ್ಮನು ಹೆಚ್ಚು ಪ್ರಭಾವಶಾಲಿಯಾಗಬೇಕೆಂಬ ನಮ್ಮ ಇಚ್ಛೆಯು ಇದೇ ಪ್ರಾಣಶಕ್ತಿಯ ಹೆಚ್ಚಿನ ಒತ್ತರದ ಪ್ರಭಾವವು. ಮತ್ತು ಅದನ್ನು ಮೇಲಕ್ಕೆತ್ತುವ ಅಥವಾ ವೃದ್ಧಿಗೊಳಿಸುವ ನಮ್ಮ ಪ್ರಯತ್ನದಲ್ಲಿ ಒಂದು ಮೀಟಿಯಂತೆ ಈ ಒತ್ತರವು ನಮಗೆ ಸಹಾಯಕರವಾಗುತ್ತದೆ. ಇದರಿಂದಲೇ ನಮ್ಮ ಬುದ್ಧಿಯು ಎಡೆಬಿಡದೆ ಬೆಳೆಯುತ್ತ ಹೋಗಿ ನಮ್ಮ ಸ್ಥೂಲ ಮನಸ್ಸಿನ ಸೆರೆಮನೆಯ ಗೋಡೆಗಳನ್ನು ಒಡೆದು ಹಾಕಿ, ಅದು ನಮ್ಮನ್ನು ಮುಕ್ತಮಾಡುತ್ತದೆ. ಈ ಮನೋಮಯ ಮತ್ತು ಪ್ರಾಣಮಯ ಲೋಕಗಳ ಒತ್ತಾಯದಿಂದ ಜೀವದ ಶಕ್ತಿಯು ವಿಕಾಸಗೊಳ್ಳುತ್ತ ಹೋಗಿ ಈ ಲೋಕದಲ್ಲಿಯ ನಮ್ಮ ಜೀವನದಲ್ಲಿ ಅತೀಂದ್ರಿಯ ಜ್ಞಾನದ ಅಪಾರ ಲಾಭವು ಕ್ರಮವಾಗಿ ನಮ್ಮ ಕೈಸೇರುತ್ತದೆ ಈ ಒತ್ತಾಯದಿಂದಲೇ ನಮ್ಮ ಪ್ರಗತಿಗೆ ಆರಂಭಸ್ಥಾನವಾದ ಪ್ರಕೃತಿಯ ಅಜ್ಞಾನವೆಂಬ ಕತ್ತಲೆಯು ಹರಿದುಹೋಗಿ, ಅದರಲ್ಲಿ ಅಡಗಿದ್ದ ನಮ್ಮ ನಿಜಸ್ವರೂಪವಾದ ಸರ್ವಜ್ಞತ್ವವು, ಉದಯವಾಗುತ್ತದೆ. ಈ ಪ್ರಕಾರದ ಈಶನಿರ್ಮಿತ ಲೋಕರಚನೆಯಲ್ಲಿ ನಮ್ಮ ಈ ಸ್ಥೂಲ ಜಗತ್ತೂ ಇಂದ್ರಿಯ

ಜನ್ಯ ಜ್ಞಾನವೂ ಮಾಧ್ಯದಲ್ಲಿ ಕಂಡುಬರುತ್ತಿದ್ದು, ಅದು ಅಜ್ಞಾನದಿಂದ ಜ್ಞಾನಶಕ್ತಿಯು ಬೆಳಕಿನಲ್ಲಿ ಬರಲಿಕ್ಕೆ ಅವಶ್ಯವಾದ ಸಾಧನವಾಗಿದೆ. ಇದಕ್ಕಿಂತ ಇಂದ್ರಿಯ ಜ್ಞಾನಕ್ಕೆ ಹೆಚ್ಚು ಮಹತ್ವವನ್ನು ನಾವು ಕೊಡಲಾರೆವು. ಆದರೂ ಇದರ ಮಹತ್ವವು ಕಡಿಮೆಯಾದದ್ದಲ್ಲ ಯಾಕಂದರೆ ಈ ಜ್ಞಾನಸಂಪನ್ನನಾದ ಮನುಷ್ಯನಿಗೇ ಈ ನಿಸರ್ಗದ ಉತ್ಕ್ರಾಂತಿಯಲ್ಲಿ ಅತಿಶಯ ಮಹತ್ವವಾದ ಸ್ಥಾನವು ಪ್ರಾಪ್ತವಾಗಿರುತ್ತದೆ.

ನಮ್ಮ ಸೂಕ್ಷ್ಮೇಂದ್ರಿಯಗಳ ಅನುಭವದಲ್ಲಿಯ ಕೆಲವು ಸಂಗತಿಗಳಿಂದ ಒಂದು ಸಂಶಯವು ಉದ್ಭವಿಸುತ್ತದೆ. ಅದೇನಂದರೆ, ಈ ನಮ್ಮ ಭೂಲೋಕಕ್ಕಿಂತ ಊರ್ಧ್ವ ಲೋಕಗಳು ನಿಶ್ಚಿತವಾಗಿ ಮೊದಲೇ ರಚಿಸಲ್ಪಟ್ಟಿರಬೇಕೆಂದು ಹೇಳಲಿಕ್ಕೆ ಬರುವದಿಲ್ಲ ಈ ಅನುಮಾನಕ್ಕೆ ಆಧಾರವಾದ ಒಂದು ಸಂಗತಿ ಯಾವದೆಂದರೆ, ಮರಣೋತ್ತರ ಸ್ಥಿತಿಯ ಅನುಭವದ ದೃಶ್ಯಗಳಲ್ಲಿ ಜೀವಗಳು ಈ ಭೂ-ಲೋಕದಲ್ಲಿ ಕಂಡು ಬರುವ ಪರಿಸ್ಥಿತಿ, ಸ್ವಭಾವ ಮತ್ತು ಅನುಭವಗಳನ್ನೇ ಅನುಭವಿಸುತ್ತಿರುವವೆಂದೂ ಇವೆಲ್ಲವೂ ಕೇವಲ ಈ ಲೋಕದ ಹೆಚ್ಚು ಬೆಳೆದ ವ್ಯಾಪಕ ಮತ್ತು ಸೂಕ್ಷ್ಮನಾದ ಸ್ಥಿತಿಯೇ ಇರುವದೆಂದೂ ಅನುಭವಿಕರ ಸಾಂಪ್ರದಾಯದಿಂದ ತಿಳಿದುಬರುತ್ತದೆ. ಎರಡನೇ ಸಂಗತಿಯೇನಂದರೆ ಮುಖ್ಯವಾಗಿ 'ಪ್ರಾಣಮಯ ಲೋಕಗಳಲ್ಲಿಯೂ ಕೂಡ ಈ ಲೋಕದಲ್ಲಿ ಕಂಡುಬರುವ ದುಷ್ಟ ಪ್ರವೃತ್ತಿ ಮತ್ತು ಆಚಾರಗಳು ಹೆಚ್ಚು ಬಲವತ್ತರವಾಗಿ ಇದ್ದದ್ದು ಕಂಡುಬರುತ್ತದೆ. ಈ ಜಗತ್ತಿನಲ್ಲಿ, ಅಜ್ಞಾನ, ಅಸತ್ಯ, ಅಶಕ್ತತೆ, ನೀಚ ಮನೋವೃತ್ತಿ ಮುಂತಾದ ಹೀನತೆಯು ಇದ್ದು ಅವು ಅಚೇತನ ಅಜ್ಞಾನದಿಂದ ಏರುತ್ತಿರುವ ಉತ್ಕ್ರಾಂತಿಯ ಓಘದ ಸಂಗಡ ಜೀವನದಲ್ಲಿ ಉಳಿದುಕೊಂಡ ಅವಶೇಷಗಳೆಂದು ನಾವು ತಿಳಿಯುತ್ತೇವೆ. ಊರ್ಧ್ವ ಲೋಕಗಳು ಈ ಉತ್ಕ್ರಾಂತಿಯ ಮೇಲಿನ ಮೆಟ್ಟಲುಗಳಾಗಿದ್ದರೆ, ಅಲ್ಲಿ ಈ ಗುಣಗಳು ಇಲ್ಲಿಗಿಂತ ಅಲ್ಪ ಪ್ರಮಾಣದಲ್ಲಿ ಗೋಚರವಾಗತಕ್ಕದ್ದಿತ್ತು. ಆದರೆ ಈ ಪ್ರಾಣಮಯ ಲೋಕಗಳೇ ಮಾನವನ ಜೀವಿತದಲ್ಲಿ ದುಃಖಕಾರಕ ಸ್ಥಿತಿಯನ್ನುಂಟುಮಾಡುವ ಹೆಚ್ಚು ಬಲವತ್ತರವಾದ ಶಕ್ತಿಗಳ ಉಗಮಸ್ಥಾನವಿದ್ದಂತೆ ತೋರು

ತ್ತದೆ. ಆದ್ದರಿಂದ ಈ ಲೋಕಗಳ ರಚನೆಯು ಜ್ಞಾನಮಯ ಸ್ಥಿತಿಯಿಂದ ಅಜ್ಞಾನಕ್ಕಿಳಿಯುವ ನಿಶ್ಚಿತವಾದ ಒಂದು ಅವಕ್ರಾಂತ ಶ್ರೇಣಿಯಿದ್ದಂತೆ ಕಾಣುವದಿಲ್ಲ. ಇದಕ್ಕೆ ಉತ್ತರವನ್ನು ಹೀಗೆ ಕೊಡಬಹುದು : ಈ ಪ್ರಾಣಮಯ ಲೋಕಗಳ ಹೆಚ್ಚು ಬಲವತ್ತರವಾದ ಶಕ್ತಿಯು ನಾವು ಇಲ್ಲಿಯ ವರೆಗೆ ಪ್ರತಿಪಾದಿಸಿದ ತತ್ವಗಳಿಗೆ ಅನುಗುಣವಾಗಿಯೇ ಇರುತ್ತದೆ. ಇದರಲ್ಲಿ ತತ್ವ ವಿರೋಧವಿದ್ದಂತೆ ಕಾಣುವದಿಲ್ಲ ಯಾಕಂದರೆ, ಈ ಲೋಕಗಳು ನಮ್ಮ ಸ್ಥೂಲ ಪ್ರಾಣಗಳ ಮುಖಾಂತರವೇ ನಮ್ಮ ಮೇಲೆ ಸತ್ತೆಯನ್ನು ನಡೆಸುತ್ತವೆ. ಅಂದಮೇಲ ಇವುಗಳ ಶಕ್ತಿಯು ಯಾವಾಗಲೂ ಹೆಚ್ಚು ಬಲವತ್ತರವಾದದ್ದೇ ಇರಬೇಕಾಯಿತು. ಮನಸ್ಸು ಮತ್ತು ಪ್ರಾಣಗಳು ಉತ್ಕ್ರಾಂತಿಯ ಶ್ರೇಣಿಯಲ್ಲಿ ಕೆಳಗಿಳಿದು ಸ್ಥೂಲತ್ವವನ್ನು ಧಾರಣಮಾಡುವದರಿಂದ ಅವುಗಳ ಆಕಾರ ಮತ್ತು ಜ್ಞಾನಶಕ್ತಿಗಳ ಸಂಕೋಚವಾಗುತ್ತದೆ. ಆದರೆ ಅದರಲ್ಲಿ ದುಷ್ಟತನದ ಕಲ್ಪನೆಇರುವದಿಲ್ಲ. ಅಖಂಡ ಸತ್ಯಸ್ವರೂಪದ ಸಚ್ಚಿದಾನಂದತ್ವವು ಸಂಕುಚಿತ "ಸತ್ಯಂ, ಶಿವಂ, ಮಂಗಲಂ" ದಲ್ಲಿ ಅಡಗಿ ಅದರ ಕೆಳಗಿನ ತರಗತಿಯು ಜ್ಞಾನ ಸಾಮ್ರಾಜ್ಯದ ತಾಲಬದ್ಧ ನಿಯಮಗಳಿಗನುಸರಿಸಿ ನಡೆಯುತ್ತದೆ. ಈ ಸಚ್ಚಿದಾನಂದ ರೂಪದ ಅವನತಿಯಲ್ಲಿ, ಕತ್ತಲೆ, ಅಜ್ಞಾನ, ದುಃಖ ಅಥವಾ ದುಷ್ಟತನಕ್ಕೆ ಆಸ್ಪದವಿರುವದಿಲ್ಲ. ಮನೋಮಯ ಮತ್ತು ಪ್ರಾಣಮಯ ಅನ್ಯಲೋಕಗಳಲ್ಲಿಯೂ ದೂಷಿತವಾದ ಸ್ಥಿತಿಯನ್ನು ನಾವು ಕಾಣುತ್ತಿದ್ದರೆ ಅದು ಅಲ್ಲಿ ಎರಡು ಪ್ರಕಾರದಿಂದ ಪ್ರವೇಶಿಸಬಹುದು. ಉತ್ಕ್ರಾಂತಿಯ ಓಘದ ಒತ್ತಿನಲ್ಲಿ ಸಿಲುಕಿ ಕೆಳಗಿನಿಂದ ಮೇಲಕ್ಕೇರಿದ ಜೀವಗಳು ಇಲ್ಲಿ ಮಾಡಿದ ದುಷ್ಕೃತ್ಯಗಳ ಸೂಕ್ಷ್ಮ ಶರೀರಗಳಲ್ಲುಳಿದ ಸಂಸ್ಕಾರಗಳ ಘಟ್ಟಿ ಅದು ಆಗಿರಬಹುದು. ಅಥವಾ ಪ್ರಾಣ ಮತ್ತು ಮನಸ್ಸುಗಳ ಅವಕ್ರಾಂತಿಯ ಮಾರ್ಗದಲ್ಲಿ ಸತ್ಯಾನೃತಗಳೆರಡೂ ಮೊದಲೇ ರಚಿತವಾದ-ಸಮಾಂತರ ರೇಷೆಗಳಿರಬಹುದು. ಇವು ಜೀವಾತ್ಮನು ಕೆಳಗಿಳಿಯುವ ಅಥವಾ ಮೇಲಕ್ಕೇರುವ ಮೆಟ್ಟಲುಗಳಾಗಿರಬಹುದು ಮೇಲ್ತರದ ಲೋಕಗಳ ಉದ್ದೇಶವು ಎರಡು ಪ್ರಕಾರಗಳಿಂದ ಸಾಧ್ಯವಾಗುತ್ತಿರಬೇಕು. ಯಾಕಂದರೆ ಸತ್ಯಾನೃತಗಳೆರಡೂ ಅಥವಾ ದೈವೀ ಮತ್ತು ಆಸುರೀ ಸಂಪತ್ತುಗಳೆರಡೂ ಈ ಲೋಕಗಳಲ್ಲಿ ಸ್ವತಂತ್ರ

ವಾಗಿದ್ದು ಅವು ಉತ್ಕ್ರಾಂತಿಯ ಹೋರಾಟದಲ್ಲಿ ಜೀವಾತ್ಮನ ಬೆಳವಣಿಗೆಗೆ ಸಹಾಯಕರವಾಗಿರುತ್ತವೆ. ಇವೆರಡೂ ತಮ್ಮ ತಮ್ಮ ಸ್ವಭಾವಕ್ಕನುಗುಣ ವಾಗಿ ತಮ್ಮ ಉದ್ದೇಶವನ್ನು ಸ್ವತಂತ್ರ ರೀತಿಯಿಂದ ಸಾಧಿಸುತ್ತಿದ್ದು ಅವುಗಳ ಪರಿಣಾಮದ ವರ್ಚಸ್ಸಿನಿಂದ ಜೀವಗಳ ಬೆಳವಣಿಗೆಗೆ ಸಹಾಯ ವಾಗುತ್ತದೆ.

ಇಹಲೋಕದಲ್ಲಿ ಕಂಡುಬರುತ್ತಿದ್ದ ದೈವೀ ಮತ್ತು ಆಸುರೀ ಸಂಪತ್ತಿ ಗಳೆರಡೂ ಊರ್ಧ್ವ ಲೋಕಗಳಲ್ಲಿ ಸ್ವತಂತ್ರವಾಗಿ ತಮ್ಮ ಬೆಳವಣಿಗೆಯನ್ನು ಸಾಧಿಸಿ ತಮ್ಮ ತಮ್ಮ ಪ್ರಕೃತಿಗೆ ಹೋಲುವ ಪೂರ್ಣತ್ವವನ್ನು ಅವು ಅಲ್ಲಿ ಸಂಪಾದನೆ ಮಾಡುತ್ತವೆ. ಮತ್ತು ಅವುಗಳ ಹಿತಕರವಾದ ಅಥವಾ ಅಹಿತಕರವಾದ ಅರ್ಥವನ್ನು ಸ್ವತಂತ್ರವಾಗಿಯೇ ಅವು ಪ್ರಕಟಗೊಳಿಸು ತ್ತವೆ ಆದರೆ ಹಿತಾಹಿತ ಪರಿಣಾಮಗಳು ಕೇವಲ ಭೂ-ಲೋಕದ ಮೇಲೆಯೇ ಆಗುತ್ತಿರುವ ಕಾರಣ, ಅಲ್ಲಿ ಈ ವಿರುದ್ಧಾರ್ಥವನ್ನು ಸೂಚಿಸುವ ಶಬ್ದಗಳಿಗೆ ಆಸ್ಪದವಿರುವದಿಲ್ಲ. ಭೂಲೋಕದಲ್ಲಿ ಈ ಪ್ರಕಾರದ ಸ್ವಾತಂತ್ರ್ಯ ಮತ್ತು ಪೂರ್ಣತೆಯನ್ನು ಕಾಣುವದು ಶಕ್ಯವಿಲ್ಲ ಯಾಕಂದರೆ, ಇಲ್ಲಿಯ ಉತ್ಕ್ರಾಂ ತಿಯ ಓಘಗಳು ಹಲವು ವಿಧದವಿದ್ದು, ಅವು ಒಂದರಲ್ಲೊಂದು ತೊಡಕಾಗಿ ಕೂಡಿ ವಿಸಂವಾದವನ್ನುಂಟು ಮಾಡುತ್ತವೆ. ಆದರೆ ಊರ್ಧ್ವ ಲೋಕ ಗಳಲ್ಲಿ ಇವು ತಾಲಬದ್ಧವಾದ ಸ್ಥಿತಿಗೆ ಏರುತ್ತವೆ. ನಾವು ಇಲ್ಲಿ ಕರೆಯು ತ್ತಿರುವ ಅಸತ್ಯ, ಅಜ್ಞಾನ, ದುಷ್ಟತನ ಮುಂತಾದ ಪ್ರವೃತ್ತಿಗಳು ಮೇಲಿನ ಲೋಕಗಳಲ್ಲಿ ಒಂದು ಸುಸಂಬದ್ಧವಾದ ಸ್ವತಂತ್ರ ಸತ್ಯವನ್ನೇ ಪ್ರಕಟ ಗೊಳಿಸುತ್ತಿದ್ದು ಅವು ತಮ್ಮಷ್ಟಕ್ಕೇ ಒಂದು ವಿಪುಲವಾದ ಸ್ವಯಂಪೂರ್ಣ ಶಕ್ತಿಯುಳ್ಳ ಸಮಾಧಾನವನ್ನು ವ್ಯಕ್ತಗೊಳಿಸುತ್ತವೆ. ಈ ಲೋಕದ ದೃಷ್ಟಿ ಯಿಂದ ಅವು ಎಷ್ಟೇ ದುಷ್ಟವಾಗಿ ಕಂಡರೂ, ಅಲ್ಲಿ ಅವೆಲ್ಲವುಗಳಿಗೂ ಸ್ವಯಂಪೂರ್ಣ ಜ್ಞಾನ, ಶಕ್ತಿ, ಆನಂದಗಳಿದ್ದು ಅವು ತಮ್ಮಷ್ಟಕ್ಕೆ ತಾವೇ ತೃಪ್ತಿಯನ್ನು ಹೊಂದಿರುತ್ತವೆ. ಈ ಲೋಕದಲ್ಲಿ ನಾವು ನೋಡುತ್ತಿದ್ದ ಕೆಲವು ಅಸಾಮಾನ್ಯ ಮರ್ಯಾದೆಯನ್ನು ಮೀರಿದ, ಲೋಕವಿರುದ್ಧ ಮತ್ತು ವಿಪರೀತವಾದ ಮನೋವೃತ್ತಿಗಳು ತಮ್ಮ ಉಗಮಸ್ಥಾನದಲ್ಲಿ ಅಪ್ರತಿಬದ್ಧ

ವಾದ ಕ್ರಿಯೆಯಿಂದ ಒಂದು ಸ್ವತಂತ್ರವಾದ ಸ್ವಾಭಾವಿಕ ಅರ್ಥವನ್ನು ಸೂಚಿಸುತ್ತವೆ ನಾವು ಇಲ್ಲಿ ಕಾಣುವ ಅಲೌಕಿಕ ದೈವೀ ಸ್ವಭಾವವಾಗಲಿ ಆಸುರೀ ಸ್ವಭಾವವಾಗಲಿ, ಅದು ತನ್ನ ಪ್ರಾಂತದಲ್ಲಿ ಅಲೌಕಿಕವಿರದೆ ತನ್ನ ತಾತ್ವಿಕ ಪರಿಪೂರ್ಣವಾದ ತಾಲಬದ್ಧತೆಯನ್ನೂ ಅವ್ಯಾಹತ ಸ್ವಭಾವವನ್ನೂ ತೋರಿಸುತ್ತದೆ. ಅಲ್ಲಿಯ ವಿಷಮತೆ, ಹೋರಾಟ, ದುರ್ಬಲತೆ, ಕಷ್ಟಗಳು ಕೂಡ ಅಲ್ಲಿಯ ಜೀವನ ಕ್ರಮದಲ್ಲಿ ಒಂದು ಅವಶ್ಯವಾದ ಭಾಗವಾಗಿ ಸಮಾಧಾನವನ್ನುಂಟು ಮಾಡುತ್ತವೆ. ಅವು ಇರದ ಹೊರತು ಈ ಜೀವನಕ್ಕೆ ಕುಂದು ಉಂಟಾದಂತೆ ತೋರುತ್ತದೆ. ಈ ಶಕ್ತಿಗಳು ತಮ್ಮ ತಮ್ಮ ಲೋಕಗಳಲ್ಲಿ ಸ್ವತಂತ್ರವಾಗಿ ಕೆಲಸಮಾಡಿ ಜೀವನದ ಕಟ್ಟಡಗಳನ್ನು ರಚಿಸುತ್ತಿರುವದನ್ನು ನೋಡಿದರೆ ಅವುಗಳ ಉಗಮಸ್ಥಾನ ಮತ್ತು ಅವುಗಳ ಅಸ್ತಿತ್ವದ ಅವಶ್ಯಕತೆಯು ನಮಗೆ ಚನ್ನಾಗಿ ತಿಳಿಯುತ್ತದೆ. ಇದಲ್ಲದೆ ಅವು ನಮ್ಮ ಇಲ್ಲಿಯ ಮನುಷ್ಯ ಜೀವನದ ಮೇಲೆ ನಡೆಸುತ್ತಿದ್ದ ಅಧಿಕಾರದ ಕಾರಣವೂ ಚನ್ನಾಗಿ ವಿಷದವಾಗುತ್ತದೆ ಮನುಷ್ಯನು ತನ್ನ ಅಪೂರ್ಣತೆಯನ್ನು ಕೂಡ ಯಾಕೆ ಪ್ರೀತಿಸುತ್ತಿರುವನು ? ಈ ಜಗತ್ತಿನ ಜೀವನರೂಪ ನಾಟಕದಲ್ಲಿಯ ಅವನ ಸೋಲು–ಗೆಲವು, ಸುಖ–ದುಃಖ, ಹಾಸ್ಯ–ರೋದನ, ಪಾಪ–ಪುಣ್ಯ, ಮುಂತಾದ ದ್ವಂದ್ವಗಳ ಗೋಳಿನಲ್ಲಿಯೂ ಜೀವನದ ಮೋಹವನ್ನು ಅವನು ಯಾಕೆ ಬಿಡವಲ್ಲನು? ಎಂಬದು ಸ್ಪಷ್ಟವಾಗಿ ತಿಳಿಯುತ್ತದೆ. ಈ ಭೂಮಿಯ ಮೇಲ ಎಲ್ಲ ಭಾವನಾಮಯ ಸೃಷ್ಟಿಯು ಅತೃಪ್ತ ಸ್ಥಿತಿಯಲ್ಲಿದ್ದುದರಿಂದ ಅಸಮಾಧಾನವೇ ಎಲ್ಲಿ ನೋಡಿದರೂ ಇಲ್ಲಿ ಗೋಚರವಾಗುತ್ತದೆ. ಮತ್ತು ಎಲ್ಲ ಜಗತ್ತು ಈ ಹೋರಾಟದಲ್ಲಿ ಪರಿಣಮಿಸಿದ ಒಂದು ಮಿಶ್ರ ಅಜ್ಞಾನದ ಸ್ಥಿತಿಯಲ್ಲಿ ಕಂಡುಬರುತ್ತದೆ ಆದರೆ, ತಮ್ಮ ಉಗಮಸ್ಥಾನದಲ್ಲಿ, ಈ ವೃತ್ತಿಗಳು ತಮ್ಮ ಗುಟ್ಟನ್ನೂ ತಮ್ಮ ಇರುವಿಕೆಯ ಕಾರಣವನ್ನೂ ಹೊರಗೆಡವುತ್ತವೆ. ಯಾಕಂದರೆ ಅವು ತಮ್ಮ ತಮ್ಮ ಲೋಕಗಳಲ್ಲಿ ತಮ್ಮ ತಮ್ಮ ನೈಸರ್ಗಿಕ ಶಕ್ತಿಗಳಿಂದ ಕೂಡಿ ಇರುತ್ತಿದ್ದು, ಇತರ ಶಕ್ತಿಗಳ ಮಿಶ್ರಣವಿಲ್ಲದೆ ಶುದ್ಧವಾದ ಪೂರ್ಣತೆಯನ್ನು ಇವು ಮುಟ್ಟಿರುತ್ತವೆ. ಸ್ವರ್ಗ ನರಕಗಳೂ, ತಮೋಮಯ ಅಥವಾ ಜ್ಯೋತಿರ್ಮಯ ಜಗತ್ತುಗಳೂ, ಮನುಷ್ಯನ ಕಲ್ಪನೆಯ ಪ್ರಕಾರ ವಿವಿಧವಾಗಿ ತಿಳಿಯಲ್ಪ

ಟ್ಟಾಗ್ಯೂ ಅವು ಸ್ವತಂತ್ರವಾದ ಅಸ್ತಿತ್ವವುಳ್ಳವುಗಳಿರುತ್ತವೆ. ಮನುಷ್ಯನ ಈ ಲೋಕಗಳ ಗ್ರಹಿಕೆಯು, ಅವು ತಮ್ಮ ಸ್ಥಾನಗಳಿಂದ ಈ ಜೀವಿತದ ಮೇಲೆ ಕೆಡಹುತ್ತಿರುವ ವರ್ಚಸ್ಸಿನಿಂದಲೂ, ಅವನ ವ್ಯಕ್ತಿ ವಿಶಿಷ್ಟ ಸಂಸ್ಕಾರ ಗಳಿಂದಲೂ ಬೇರೆ ಬೇರೆಯಾಗಿ ಭಾಸಮಾನವಾಗುತ್ತವೆ. ಮತ್ತು ಮನು ಷ್ಯನ ಉತ್ಕ್ರಾಂತಿಯಲ್ಲಿಯ ಮುಂದಿನ ನಡೆಗೆ ಕಾರಣವಾಗುತ್ತವೆ.

ಹೇಗೆ ಪ್ರಾಣ ತತ್ವದ ರಚನೆಯು ಪ್ರಾಣಮಯ ಲೋಕಗಳಲ್ಲಿ ಸ್ವತಂತ್ರ ವ ತ್ತು ಪೂರ್ಣ ಇರುವದೋ, ಹಾಗೆಯೇ ನಮ್ಮ ಜಗತ್ತಿನ ಮೇಲೆ ಪರಿಣಾಮವನ್ನುಂಟುಮಾಡುವ ಮಾನಸಿಕ ತತ್ವವೂ, ಶಕ್ತಿಗಳೂ ಮತ್ತು ವಿಚಾರಗಳೂ ಮನೋಮಯ ಲೋಕಗಳಲ್ಲಿ ತಮ್ಮ ಸ್ವಭಾವದ ಪೂರ್ಣ ವಿಕಾಸವನ್ನು ತೋರಿಸುತ್ತವೆ. ಆದರೆ ಈ ಭೂ-ಲೋಕದಲ್ಲಿ ಅವು ತಮ್ಮ ಅಪೂರ್ಣವಾದ ಕೆಲವು ಭಾಗಗಳಿಂದ ಮಾತ್ರ ಗೋಚರವಾಗುತ್ತವೆ. ಇಲ್ಲಿ ಅವು ಇತರ ಶಕ್ತಿ ಮತ್ತು ತತ್ವಗಳ ಮಿಶ್ರಣದಿಂದ ತಮ್ಮ ಶುದ್ಧ ಪ್ರಭಾವವನ್ನು ಬೀರಲಾರವು ಈ ಮಿಶ್ರಣದಿಂದಲೇ ಅವುಗಳ ಪೂರ್ಣ ತೆಗೆ ಬಾಧೆಯುಂಟಾಗಿ ಅವುಗಳ ಮೂಲ ಶುದ್ಧತೆ ಮತ್ತು ಪರಿಣಾಮಗಳು ಹಿಂದೂಡಲ್ಪಡುತ್ತವೆ. ಈ ಭೂ-ಲೋಕದ ಮೇಲೆ ಆಗುತ್ತಿರುವ ಪರ ಲೋಕಗಳ ಈ ಪ್ರಕಾರದ ಪರಿಣಾಮವು ನಮ್ಮ ಲಕ್ಷ್ಯದಲ್ಲಿ ಬಂದರೆ, ಈ ಊರ್ಧ್ವ ಲೋಕಗಳು ಜೀವಗಳ ಉತ್ಕ್ರಾಂತಿಯುಗುಂಟ ಭೂಲೋಕದ ಉತ್ಪತ್ತಿಯ ನಂತರ ಆಗಿರದೆ ಅವು ಸ್ವತಂತ್ರವಾದ ಸೂಕ್ಷ್ಮ ತರಗತಿಯ ಭುವನಗಳ ಅಚ್ಚೆಂದು ಹೇಳಬಹುದು. ಮತ್ತು ಅವುಗಳ ಅಸ್ತಿತ್ವದ ಹಲವು ಉದ್ದೇಶಗಳಲ್ಲಿ ಒಂದು ಉದ್ದೇಶವೆಂದರೆ, ಈ ಲೋಕದ ಉತ್ಕ್ರಾಂತಿಯ ಗತಿಯಿಂದ ಮೇಲಕ್ಕೆ ಏರುತ್ತಿರುವ ಮತ್ತು ಮೊದಲೇ ಏರಿಹೋದ ಜೀವ ಗಳಿಗೆ ತಮ್ಮ ತಮ್ಮ ಸ್ವಭಾವಕ್ಕನುಗುಣವಾದ ಸ್ವತಂತ್ರ ಜೀವನವನ್ನು ತಮ್ಮ ಪೂರ್ವ ಭಾಧ್ಯತೆಯ ಪ್ರಕಾರ ಅನುಭವಿಸಿ ತೃಪ್ತಿಗೊಳ್ಳಬೇಕೆನ್ನುವ ದಿರುತ್ತದೆ. ಈ ತಮ್ಮ ಸ್ಥಿರವಾದ ಆಸನದಿಂದ ಆ ಲೋಕಗಳು ಈ ಮೃತ್ಯು ಭೂಮಿಯ ಮೇಲೆ ತಮ್ಮ ತಮ್ಮ ಶಕ್ತಿಯ ಮತ್ತು ಕ್ರಿಯೆಯ ಪ್ರಭಾವದಿಂದ ಈ ಲೋಕದಲ್ಲಿಯ ಸಮ್ಮಿಶ್ರವಾದ, ಒಂದಕ್ಕೊಂದು ವಿರುದ್ಧವಾದ

ಹೋರಾಟದ ಪರಿಸ್ಥಿತಿಯನ್ನುಂಟುಮಾಡುತ್ತವೆ. ಮತ್ತು ಇಲ್ಲಿಯ ಜೀವಗಳ ಉತ್ಕ್ರಾಂತಿಯ ವಿಕಾಸಕ್ಕೆ ಸಹಾಯವಾಗುತ್ತವೆ.

ನಾವು ಈ ದೃಷ್ಟಿಯಿಂದ ಪರಲೋಕಗಳ ಪರಂಪರಾಗತ ಕಲ್ಪನೆಗಳ ಕಡೆಗೆ ನೋಡಲಾಗಿ, ಅವು ಈ ಲೋಕಕ್ಕಿಂತ ಹೆಚ್ಚು ವ್ಯಾಪಕವಾದವೂ, ಅಲ್ಲಿಯ ಜೀವಿತವು ಇಲ್ಲಿಯ ಬಂಧನ, ಇಕ್ಕಟ್ಟು, ಅಪೂರ್ಣತೆ ಮುಂತಾದ ದೋಷಗಳಿಂದ ರಹಿತವಾದವೂ ಇರುತ್ತವೆಂದು ಕಂಡುಬರುತ್ತದೆ. ಈ ಲೋಕದಲ್ಲಿ ಪ್ರಚಲಿತವಾದ ಹಲವು ಕಥೆ ಅಥವಾ ಸಿದ್ಧಿಗಳು ಕಾಲ್ಪನಿಕ ವಿದ್ಯಾಗ್ಯೂ ಅವರಲ್ಲಿ ಅಂತರ್ಜ್ಞಾನದ ಮತ್ತು ದೈವೀ ಭಾವನೆಯ ಕೆಲವು ಭಾಗವಿರುತ್ತದೆ. ಈ ಜೀವಿತದ ಹೆಚ್ಚು ವಿಕಾಸ ಹೊಂದಿದ ಸ್ಥಿತಿಯಲ್ಲಿ ಜೀವನು ಯಾವ ಪ್ರಕಾರ ಇರಬಹುದು ಎಂಬದರ ಚಿತ್ರವದು. ಮತ್ತು ಒಂದಿಲ್ಲೊಂದು ಈ ಕಾಲ್ಪನಿಕ ಸ್ಥಿತಿಯಲ್ಲಿ ಜೀವನು ಸತ್ಯವಾಗಿ ಇದ್ದೇ ಇರುತ್ತಾನೆ. ನಮ್ಮ ಸೂಕ್ಷ್ಮ ಇಂದ್ರಿಯಗಳ ಈ ಲೋಕಗಳ ಸಂಗಡ ಇದ್ದ ಸಂಬಂಧ ಮತ್ತು ಅವುಗಳ ಗುಪ್ತ ಅನುಭವ ಇವುಗಳ ಭಾಗವೂ ಈ ಕಲ್ಪನೆಯಲ್ಲಿರುತ್ತದೆ. ಆದರೆ ಈ ಪರಲೋಕದಿಂದ ಕಳಿಸಲ್ಪಟ್ಟ ಸಂದೇಶಗಳ ಅಂತರೇಂದ್ರಿಯಗಳ ಮೇಲುಂಟಾದ ಆಘಾತಗಳ ಅನುಭವಗಳಿಗೂ, ತನ್ನ ಸೂಕ್ಷ್ಮೇಂದ್ರಿಯಗಳು ಪರಲೋಕದ ಸಂಬಂಧದಿಂದ ಪಡೆದ ಅನುಭವಗಳಿಗೂ ಮನುಷ್ಯನ ಮನಸ್ಸು ಇಲ್ಲಿಯ ಸ್ಥೂಲ ಜ್ಞಾನದ ರೂಪವನ್ನು ಕೊಡುತ್ತದೆ ಪಾರಲೌಕಿಕ ಸತ್ಯಕ್ಕೆ ಇಲ್ಲಿಯ ಆಕಾರ ಮತ್ತು ನಾಮಗಳ ಹೊದಿಕೆಯನ್ನು ಹೊದಿಸಿ ಅಲ್ಲಿಯ ಸತ್ಯ ವಸ್ತುವಿನ ಸಂಗಡ ಸಂಬಂಧವನ್ನು ಬೆಳಸುತ್ತದೆ. ಅವುಗಳ ಅಸ್ತಿತ್ವದ ಪ್ರಭಾವ ಮತ್ತು ಪರಿಣಾಮಗಳನ್ನು ಈ ಪ್ರಕಾರ ಈ ಕಲ್ಪನೆಗಳು ಇಲ್ಲಿ ಉಂಟುಮಾಡುತ್ತವೆ.

ಮರಣೋತ್ತರ ಜೀವನು ಈ ಭೂಲೋಕದಲ್ಲಿಯೇ ಸೂಕ್ಷ್ಮ ಶರೀರ ಧಾರಣಮಾಡಿ ಇರುವನೆಂಬದೊಂದು ಕಲ್ಪನೆಯು ಪ್ರಚಲಿತವಿರುತ್ತದೆ. ಜೀವನು ಈ ಲೋಕದ ಅನುಭವವನ್ನು ಬಹುಕಾಲ ತೆಗೆದುಕೊಂಡ ಕಾರಣ ಅವನಿಗೆ ಇಲ್ಲಿ ಉಂಟಾದ ಆಸಕ್ತಿ ಮತ್ತು ಬೆಳೆದ ಸ್ವಭಾವ ಇವುಗಳ ಎಳೆತದಿಂದ ಅವನು ಕೆಲವು ಕಾಲ ಇಲ್ಲಿಯ ಜೀವನದಲ್ಲಿಯೇ ಉಳಿದುಕೊಂಡು

ಪರಲೋಕಗಳಿಗೆ ಹೋಗುತ್ತಿರಬಹುದು. ಅಥವಾ ಅವನು ಈ ಲೋಕದಲ್ಲಿಯ ಜೀವನದಲ್ಲಿ ಪರಲೋಕಗಳ ವಸ್ತುಸ್ಥಿತಿಯ ಕಲ್ಪನೆಯನ್ನು ಇಲ್ಲಿಯ ತನ್ನ ಅನುಭವದ ಮಾದರಿಯಿಂದಲೇ ಮಾಡುತ್ತಿದ್ದು ಈ ಕಲ್ಪನೆಗಳಿಗೆ ಅನುಗುಣವಾದ ಪರಲೋಕದ ಅನುಭವವನ್ನು ಪಡೆಯುವದಿರುವ ಕಾರಣ ಅವನ ಪ್ರಾಣಗಳು ಅವನ ಬಹುಕಾಲದ ಇಲ್ಲಿಯ ಆಸಕ್ತಿಯ ಮೂಲಕ ಇಲ್ಲಿಯೇ ಕೆಲವು ಕಾಲ ಅಲೆದಾಡುತ್ತಿರುವ ಸಂಭವವೂ ಇದೆ ಜೀವನ ಪಾರಲೌಕಿಕ ಸ್ವರೂಪದ ಬಗ್ಗೆ ಇದ್ದ ಪರಂಪರಾಗತ ಕಲ್ಪನೆಯ ಪ್ರಕಾರ—ಕೆಲವು ಕೇವಲ ಗ್ರಾಮ್ಯ ಕಲ್ಪನೆಗಳನ್ನು ಬಿಟ್ಟು—ಜೀವನ ಸ್ಥಿತಿಯು ಸೂಕ್ಷ್ಮ ಮನೋಮಯವಾದದ್ದಾಗಲಿ ಅಥವಾ ಪ್ರಾಣಮಯವಾದದ್ದಾಗಲಿ ಇದ್ದು ಆ ಸ್ಥಿತಿಯು ಇಲ್ಲಿಯ ಜೀವನಕ್ಕಿಂತ ಹೆಚ್ಚು ಸೂಕ್ಷ್ಮ ತತ್ವಗಳಿಂದ ಮಾಡಲ್ಪಟ್ಟಿರುತ್ತವೆ. ಈ ತತ್ವಗಳನ್ನು ನಮ್ಮ ಸೂಕ್ಷ್ಮ ಅನುಭವದಿಂದ ತಿಳಿದುಕೊಳ್ಳಲಿಕ್ಕಾಗಲಿ ಅಥವಾ ನಮ್ಮ ಜೀವನಕ್ಕೆ ಅವುಗಳಲ್ಲಿ ಪ್ರವೇಶ ಮಾಡಲಿಕ್ಕಾಗಲಿ ಶಕ್ಯವಿರುತ್ತದೆ ನಾವು ಪ್ರತಿಪಾದಿಸಿದ ಲೋಕಗಳ ತಾತ್ವಿಕ ವರ್ಗೀಕರಣವು ನಮ್ಮ ಅನುಭವವನ್ನು ಕ್ರಮವಾಗಿ ಹೇಳುವ ಒಂದು ಪದ್ಧತಿ ಇದ್ದು ಬೇರೆ ಬೇರೆ ದೃಷ್ಟಿಕೋನಗಳಿಂದ ಇವುಗಳ ರಚನಾ ಪದ್ಧತಿಯು ಬೇರೆ ಬೇರೆ ಆಗುವ ಸಂಭವವಿದೆ ಯಾಕಂದರೆ ಒಂದು ತಾತ್ವಿಕ ವಿಚಾರ ಸರಣಿ ಅಥವಾ ವಿವೇಚನ ಪದ್ಧತಿಯಿಂದ ಒಂದು ಪ್ರಕಾರದ ವರ್ಗೀಕರಣವು ಯೋಗ್ಯಕಂಡರೆ ಇನ್ನೊಂದು ಪದ್ಧತಿಯಿಂದ ಬೇರೊಂದು ವರ್ಗೀಕರಣವು ಯೋಗ್ಯಕಾಣಬಹುದು. ಆದರೆ ನಮ್ಮ ಅಂತಿಮ ಉದ್ದೇಶಕ್ಕೆ ಈ ವರ್ಗೀಕರಣವು ಬಹಳ ಮಹತ್ವದ್ದಿರುತ್ತದೆ. ಇದು ವಿಕಾಸವಾದದ ಸತ್ಯವನ್ನು ವ್ಯಾವಹಾರಿಕ ದೃಷ್ಟಿಯಿಂದ ಚನ್ನಾಗಿ ವಿವೇಚಿಸಲಿಕ್ಕೆ ಸುಲಭವಾಗಿದೆ. ಇದು ಮನುಷ್ಯ ಜೀವನದ ಘಟನೆಯನ್ನೂ ಸೃಷ್ಟಿಯ ಉತ್ಕ್ರಾಂತಿ ಅವಕ್ರಾಂತಿಗಳ ಗತಿಯನ್ನೂ ನಿರ್ಣಯಿಸಲಿಕ್ಕೆ ಸಹಾಯವಾಗುತ್ತದೆ. ಹಾಗೂ ಪರಲೋಕಗಳು ಈ ಲೋಕದಿಂದ ಮತ್ತು ಇದರ ರಚನಾ ಪದ್ಧತಿಯಿಂದ ತೀರ ಭಿನ್ನವಾಗಿರದೆ, ಈ ಜಗತ್ತನ್ನು ಅವು ತಮ್ಮ ಶಕ್ತಿಯಿಂದ ಅಂತರ್ಬಾಹ್ಯ ವ್ಯಾಪಿಸಿರುವದರ ಪರಿಣಾಮವಾಗಿ ಈ ಲೋಕದಲ್ಲಿ ಆಗುತ್ತಿರುವ ಕೋಲಾಹಲಕ್ಕೆ ಕಾರಣವಾಗುತ್ತವೆಂದು ತಿಳಿ

ಯಲು ಸುಲಭವಾಗುತ್ತದೆ. ಆದರೂ, ಈ ಲೋಕದ ಮೇಲೆ ಆಗುತ್ತಿರುವ ಅನ್ಯ ಲೋಕಗಳ ಕ್ರಿಯೆಯನ್ನು ಸುಲಭವಾಗಿ ಗಣನೆ ಮಾಡುವದು ಶಕ್ಯವಿಲ್ಲ ಅನ್ಯ ಲೋಕಗಳ ಬಗ್ಗೆ ನಮಗೆ ಇದ್ದ ಪ್ರತ್ಯಕ್ಷ ಅನುಭವ ಮತ್ತು ಪರಂಪರಾಗತ ಜ್ಞಾನ ಇವುಗಳ ಸಂಗ್ರಹದಿಂದ ಪರಲೋಕಗಳ ಕೆಲಸದ ಪದ್ಧತಿ ಮತ್ತು ಅವು ಉಂಟುಮಾಡುತ್ತಿರುವ ಇಲ್ಲಿಯ ಪರಿಣಾಮ ಇವುಗಳ ಜ್ಞಾನಕ್ಕೆ ಮಾರ್ಗ-ದರ್ಶನವಾಗುತ್ತದಷ್ಟೇ.

ಪರಲೋಕಗಳ ಅಸ್ತಿತ್ವ ಮತ್ತು ಅವುಗಳ ಶಕ್ತಿ ಇವು ಈ ನಮ್ಮ ಭೌತಿಕ ಜಗತ್ತಿನ ಮೇಲೆ ಉಂಟುಮಾಗುತ್ತಿರುವ ಪರಿಣಾಮಕ್ಕೆ ಉತ್ಕ್ರಾಂತಿಯ ವ್ಯಾಪಕತೆಯ ದೃಷ್ಟಿಯಿಂದ ಮಹತ್ವವಾದ ಸ್ಥಾನವಿದೆ ಯಾಕಂದರೆ ಈ ನಮ್ಮ ಜಗತ್ತು ಅಂತಿಮ ಸತ್ಯದ ವಿಕಾಸಕ್ಕೆ ಒಂದೇ ಕ್ಷೇತ್ರವಾಗಿದ್ದರೆ ಮತ್ತು ಈ ಜಗತ್ತಿನಲ್ಲಿಯೇ ಎಲ್ಲ ಸತ್ಯದ ವಿಕಾಸವಾಗುತ್ತಿದ್ದರೆ, ಈ ಜಗತ್ತಿನ ಎಲ್ಲ ಕ್ರಿಯೆಗೂ ಕಾರಣವಾದ ಅಚೇತನ ಪ್ರಾಣದಲ್ಲಿಯೇ ಪಂಚ-ಮಹಾಭೂತಗಳಿಂದ ಹಿಡಿದು ಆತ್ಮನ ವರೆಗಿನ ಎಲ್ಲ ತತ್ವಗಳೂ ಅಡಕವಾಗಿರಬೇಕಾಗಿತ್ತು. ಮತ್ತು ಈ ಪ್ರಾಣಶಕ್ತಿಯಿಂದಲೇ ಎಲ್ಲವೂ ಪೂರ್ಣವಾಗಿ ಇಲ್ಲಿಯೇ ಪೂರ್ಣ ವಿಕಾಸವನ್ನು ಹೊಂದಬಹುದಾಗಿತ್ತು. ಈ ವಿಕಾಸಕ್ಕೆ ಪ್ರಾಣಶಕ್ತಿಯ ಹಿಂದೆ ಗುಪ್ತವಾಗಿರುವ ಅತೀಂದ್ರಿಯ ಜ್ಞಾನದ ಹೊರತಾಗಿ ಬೇರೆ ಮತ್ತೆ ಯಾವ ತತ್ವದ ಅಥವಾ ಶಕ್ತಿಯ ಅವಶ್ಯಕತೆ ಇರುತ್ತಿರಲಿಲ್ಲ ಈ ಜಗತ್ತೊಂದೇ ಉತ್ಕ್ರಾಂತಿಯ ಕ್ಷೇತ್ರವಾಗಿದ್ದರೆ, ನಾವು ಇಲ್ಲಿ ಭೌತಿಕ ತತ್ವವೇ ಆದ್ಯ ತತ್ವವಾದದ್ದನ್ನು ಕಾಣುತ್ತಿದ್ದೆವು ಮತ್ತು ಪೂರ್ಣ ವಿಕಾಸ ಹೊಂದಿದ ವಸ್ತುವಿನಲ್ಲಿ ಭೌತಿಕ ತತ್ವವೇ ಆದ್ಯ ಸಾರಭೂತವಾದ ತತ್ವವಾಗುತ್ತಿತ್ತು. ಜೀವನ ಜೀವತ್ವವು ಉತ್ಕ್ರಾಂತಿಯ ಅಂತ್ಯದಲ್ಲಿ ಭೌತಿಕ ಪದಾರ್ಥಗಳ ಸಂಕೋಲೆಯಲ್ಲಿ ಕೆಲಮಟ್ಟಿಗೆ ಮರ್ಯಾದಿತ ಸ್ವರೂಪದಿಂದ ಪ್ರಕಟವಾಗಬೇಕಾಗಿತ್ತು. ಹಾಗೂ ಎಲ್ಲ ತತ್ವಗಳಿಗೂ ಬುಡವೆಂದು ಕಲ್ಪಿಸಿದ ಈ ಸ್ಥೂಲ ಭೌತಿಕ ವಸ್ತುಗಳು ಈಗ ಇದ್ದ ತಮ್ಮ ಪರಪ್ರಕಾಶಿತ, ಅತಿಪರಿಮಿತವಾದ ಗುಣ ಮತ್ತು ಶಕ್ತಿಗಳನ್ನು ತ್ಯಜಿಸಿ ತಮ್ಮ ಸ್ವಪ್ರಕಾಶಿತ ಅಪರಿಮಿತ ಗುಣಶಕ್ತಿಗಳನ್ನು ಧಾರಣಮಾಡಬಹುದಾಗಿತ್ತು. ಯಾಕಂದರೆ, ತನ್ನದೇ ಆದ ಅಪರಿಮಿತ ಸೂಕ್ಷ್ಮ ಶಕ್ತಿಗಳು ತನ್ನನ್ನೇ ಬಂಧಿಸಿ ಈಗಿನ

ಪರಿಮಿತವಾದ ಶಕ್ತಿಗಳ ಬೇಡಿಯನ್ನು ಅದಕ್ಕೆ ಹಾಕಲಾರವು. ಮತ್ತು ಆತ್ಮನು ಆವಿರ್ಭಾವವನ್ನು ಹೊಂದಲಿಕ್ಕೆ ಪೂರ್ಣವಾಗಿ ಭೌತಿಕ ವಸ್ತುಗಳ ಮೇಲೆಯೇ ಅವಲಂಬಿಸಿ ಇರಬೇಕಾಗಿತ್ತು. ಅವನ ಪ್ರಕಟನೆಗೆ ಬೇರೆ ಮತ್ತೆ ಯಾವ ಕ್ಷೇತ್ರವೂ ಇರುತ್ತಿರಲಿಲ್ಲ. ಈ ಭೌತಿಕ ದೇಹದ ಹೊರಗೆ ಬೇರೊಂದು ಪ್ರಕಾರದಿಂದ ಅದು ಉದಯವಾಗಲಾರದು ಇಷ್ಟೇ ಅಲ್ಲದೆ ಈ ಭೌತಿಕ ನೆಲಗಟ್ಟಿನ ಮೇಲೆ ಅಧಿಕಾರವನ್ನು ಅನಿರ್ಬಂಧವಾಗಿ ನಡಿಸುವಂಥ ಯಾವ ಶಕ್ತಿಯನ್ನೂ ಆತ್ಮನು ಸ್ವತಂತ್ರವಾಗಿ ಉತ್ಪನ್ನಮಾಡುತ್ತಿರಲಿಲ್ಲ. ಮತ್ತು ಆತ್ಮನ ವಿಕಾಸದ ಅಂತವು ಅಪರಿಹಾರ್ಯವಾಗಿ ಪಂಚಭೂತಗಳಲ್ಲಿಯೇ ಆಗಬೇಕಾಗಿತ್ತು ಪ್ರಾಣಶಕ್ತಿಯ ಪ್ರಾಬಲ್ಯವು ಅವುಗಳ ಮೇಲೆ ಆಗುತ್ತಿರಲಿಲ್ಲ. ಮನಸ್ಸಿನ ನಿರ್ಮಾಣಶಕ್ತಿ ಮತ್ತು ಪ್ರಭುತ್ವವು ಉಂಟಾಗುತ್ತಿರಲಿಲ್ಲ. ಪ್ರಾಣ ಮನಸ್ಸುಗಳ ಶಕ್ತಿಯ ಮರ್ಯಾದೆಯು ಭೌತಿಕ ಶಕ್ತಿಯನ್ನು ಎಂದೂ ಮೀರುತ್ತಿರಲಿಲ್ಲ ಭೌತಿಕ ಶಕ್ತಿಯನ್ನು ಅವು ತುಸು ಹೆಚ್ಚುಕಡಿಮೆ ಮಾಡಬಹುದಾದರೂ ಅದರಲ್ಲಿ ಮೂಲಭೂತವಾದ ರೂಪಾಂತರ ಮಾಡಿ ಪ್ರಾಣ ಮತ್ತು ಮನಸ್ಸಿನ ಶಕ್ತಿಗಳು ಭೌತಿಕ ಶಕ್ತಿಯಿಂದ ಸ್ವತಂತ್ರವಾಗಲಾರವು. ಆತ್ಮಶಕ್ತಿಯ ಪ್ರಕಟನೆಗೆ ಪೂರ್ಣ ಮತ್ತು ಸ್ವತಂತ್ರವಾದ ಅವಕಾಶವು ಸಿಗದೆ ಎಲ್ಲವೂ ಭೌತಿಕ ರಚನೆಯ ಗೂಢ ಸ್ಥಿತಿಯಿಂದ ಯಾವಾಗಲೂ ಆಚ್ಛಾದಿತವಾಗಿಯೇ ಇರುತ್ತಿದ್ದವು. ಆತ್ಮ, ಮನಸ್ಸು, ಪ್ರಾಣಗಳಿಗೆ ತಮ್ಮ ಸ್ವತಂತ್ರವಾದ ಸ್ಥಾನವಿರಗೆ, ಅವುಗಳ ಸ್ವತಂತ್ರ ವಾದ ಶಕ್ತಿ ಸ್ವಭಾವಗಳಿಗೆ ಅಸ್ತಿತ್ವವು ಇರುತ್ತಿರಲಿಲ್ಲ. ಆದರೆ, ಆತ್ಮ ತತ್ವದಿಂದಲೇ ಮನಸ್ಸು, ಪ್ರಾಣ, ಮತ್ತು ತನ್ಮಾತ್ರಗಳು ಉತ್ಪನ್ನವಾಗಿದ್ದರೆ ಮಾತ್ರ ಅಥವಾ ಇವೆಲ್ಲವೂ ಭೌತಿಕ ಪರಿಣಾಮವೇ ಅಗಿರದೆ, ಅವಕ್ಕೆ ತಮ್ಮ ತಮ್ಮ ಸ್ವತಂತ್ರವಾದ ಶಕ್ತಿಯು ಇರುತ್ತಿದ್ದರೆ ಮಾತ್ರ ಮೇಲೆ ಪ್ರತಿಪಾದಿಸಿದ ಸಂಕುಚಿತ ಮರ್ಯಾದೆಯಲ್ಲಿಯೇ ಅವೆಲ್ಲವೂ ಇರುವದು ಅವಶ್ಯವಿದೆಯೆಂದು ತಿಳಿಯುವ ಕಾರಣವಿಲ್ಲ

ಆದರೆ, ಅನಾದಿ ಸತ್ಯ-ವಸ್ತುವು ತನ್ನ ಸ್ವಬೋಧದ ಪ್ರಕಟನೆಯಲ್ಲಿ ಪೂರ್ಣ ಸ್ವತಂತ್ರವಿರುತ್ತದೆಂದು ನಾವು ತಿಳಿವರೆ, ಅದು ಪ್ರಕಟವಾಗಬೇಕಾ

ದರೆ, ಭೌತಿಕ ವಸ್ತುವಿನಲ್ಲಿಯೇ ಪ್ರಕಟವಾಗಬೇಕೆಂಬ ಬಂಧನವು ಅದಕ್ಕೆ ಇರಲಾರದು. ಅದು ಇದಕ್ಕೆ ವಿರುದ್ಧವಾದ ವಸ್ತು-ಸ್ಥಿತಿಯುಳ್ಳ ಜಗತ್ತನ್ನು ನಿರ್ಮಾಣಮಾಡಬಲ್ಲದು ಆದು ನಿರ್ಮಿಸಿದ ಜಗತ್ತಿನಲ್ಲಿ ಆತ್ಮನ ಏಕತ್ವವು ಈ ನಿರ್ಮಾಣ ಕ್ರಿಯೆಯ ಪ್ರಾಥಮಿಕ ಸಾಧನವಾಗಿ ಕ್ರಿಯಾ ಶಕ್ತಿಯು, ಇಲ್ಲಿಯಂತೆ ಅಚೇತನವಾಗಿರದೆ ಪೂರ್ಣ ಜ್ಞಾನಮಯವಾಗಬಹುದು. ಮತ್ತು ಅಲ್ಲಿಯ ಎಲ್ಲ ನಾಮರೂಪಗಳೂ ಈ ಆತ್ಮೈಕ್ಯದಿಂದ ಉತ್ಪನ್ನವಾದ ಚೇತನದ ಅಬಾಧಿತ ಆಟವಾಗಬಹುದು. ಅಥವಾ ಅಂಥ ಜಗತ್ತಿನಲ್ಲಿ ಆತ್ಮನ ಸ್ವಂತ ಶಕ್ತಿಯಾದ ಚೈತನ್ಯದ ಚಲನವಲನವು ಅಥವಾ ಇಚ್ಛೆಯು ಈ ಭೂಮಿಯಲ್ಲಿದ್ದಂತೆ ಭೌತಿಕ ಶಕ್ತಿಯಲ್ಲಿ ಅಡಗದೆ, ಅದರ ಆಳುವಿಕೆಗೆ ಯಾವ ಮಧ್ಯಸ್ಥಿಕೆಯೂ ಇರದೆ, ತನ್ನಲ್ಲಿ ತಾನೇ, ಎಲ್ಲ ಶಕ್ತಿಯನ್ನು ಪ್ರಕಟಗೊಳಿಸಬಹುದು. ಅಂದರೆ ಅದು ಸ್ವಸಂತುಷ್ಟತೆಯ ಸುಖವನ್ನು ಅನುಭವಿಸಬಹುದು. ಮತ್ತು ಆತ್ಮಾನುಭವವೇ ಎಲ್ಲ ವಸ್ತುಗಳ ಅಸ್ತಿತ್ವದ ಆದ್ಯಸ್ಥಾನವಾಗಿ, ಅದರ ಸ್ವತಂತ್ರಪೂರ್ಣ ಸುಖಮಯ ಕೃತಿಯ ಹೇತುವಾಗಬಹುದು ಅಥವಾ ಇಂಥ ಜಗತ್ತಿನಲ್ಲಿಯ ನಾನಾ ಜೀವಗಳು ತಮ್ಮಲ್ಲಿಯ ಅಪರಿಮಿತ ಆತ್ಮಾನಂದದ ಅನುಭವವನ್ನು, ಇಲ್ಲಿಯಂತೆ ಎಲ್ಲ ವಿವಿಧತೆಯು ಒಂದೆ ಅಡಗಿದ ಏಕತ್ವದ ಕಷ್ಟತರ ಸಂಶೋಧನದ ಪ್ರಯಾಸವಿಲ್ಲದೆ, ನಿಸರ್ಗತಃ ಅನುಭವಿಸುತ್ತಿರಬಹುದು. ಅಲ್ಲಿಯ ಪ್ರತಿಯೊಂದು ಕ್ರಿಯೆಯು ಈ ಆತ್ಮಾನುಭವದ ದಿವ್ಯಾನಂದದಿಂದಲೇ ಪ್ರತ್ಯಕ್ಷ ಉದ್ಭವಿಸಿ ಎಲ್ಲೆಡೆಯಲ್ಲಿಯೂ ಈ ಅನುಭವವೇ ಜೀವನದ ಸಾರವಾಗಿ ಕಾಣಬಹುದು ಅಥವಾ ಇಂಥ ಜಗತ್ತಿನಲ್ಲಿ ಸೂಕ್ಷ್ಮವಾದ ಬುದ್ಧಿ ತತ್ವವೇ ಆರಂಭದಿಂದ ಆದ್ಯತತ್ವವಾಗಿ ಕಂಗೊಳಿಸಬಹುದು. ಮತ್ತು ಅಲ್ಲಿಯ ನಾನಾವಿಧ ಪ್ರಾಣಿಗಳು ತಮ್ಮಲ್ಲಿಯ ಅಪರಿಮಿತ ಜ್ಯೋತಿರ್ಮಯ ದೈವೀ ವ್ಯಕ್ತಿತ್ವದ ವಿವಿಧತೆಯಲ್ಲಿ ಏಕತ್ವದ ಆನಂದವನ್ನು ಹೊಂದುತ್ತಿರಬಹುದು.

ಇಷ್ಟರಿಂದಲೇ ಈ ಅನಾದಿ ಸತ್ಯ ವಸ್ತುವಿನ ಜಗನ್ನಿರ್ಮಿತಿಯ ಪ್ರಕಾರಗಳು ಮುಗಿಯಲಾರವು. ಯಾಕಂದರೆ, ಈ ಬುದ್ಧಿತತ್ವವು ಪಂಚಭೂತ ಮತ್ತು ಪ್ರಾಣಗಳ ವಲಯದಲ್ಲಿ ಸಿಲುಕಿದ್ದರಿಂದ ಇವುಗಳಿಂದ

ಬುದ್ಧಿಗೆ ಉಂಟಾಗುತ್ತಿರುವ ಪ್ರತಿಬಂಧವನ್ನು ಮೀರುವದು ಅದಕ್ಕೆ ಬಹಳೇ ಪ್ರಯಾಸಕರವಾದದ್ದೆಂಬದನ್ನು ನಾವು ಈ ಲೋಕದಲ್ಲಿ ಕಾಣುತ್ತೇವೆ. ಅದೇ ಪ್ರಕಾರ ಪ್ರಾಣವೂ ಸಹ ಪಂಚಭೂತಗಳ ವಿನಾಶಿತ್ವ, ಜಡತ್ವ ಮತ್ತು ಅಸ್ಥಿರತೆಗಳಿಗೆ ಒಳಗಾಗಿರುತ್ತದೆ. ಈ ಪ್ರಕಾರದ ಬುದ್ಧಿ ಪ್ರಾಣಗಳ ದೌರ್ಬಲ್ಯವು ಅದ್ಯನಿಯಮವಾಗಿರದ ಜಗತ್ತನ್ನೂ ನಾವು ಕಲ್ಪಿಸಬಹುದು. ಬುದ್ಧಿಯೇ ಯಾವ ಜಗತ್ತಿನಲ್ಲಿ ಪ್ರಾರಂಭದಿಂದ ಪ್ರಬಲವಾದ ತತ್ವವಾಗಿರುವದೋ, ಮತ್ತು ಎಲ್ಲಿ ಬುದ್ಧಿ ತತ್ವವು ಇತರ ತತ್ವಗಳ ಪ್ರತಿಬಂಧವಿಲ್ಲದೆ ತನ್ನ ಸಾಮಗ್ರಿಯಿಂದ ಸ್ವತಂತ್ರ ಕ್ರಿಯೆಯನ್ನು ಮಾಡಬಲ್ಲದೋ ಮತ್ತು ಎಲ್ಲಿ ಬುದ್ಧಿಯು ವಿಶ್ವಶಕ್ತಿಯು ಜೀವಿತದಲ್ಲಿ ಆತಂಕವಿಲ್ಲದೇ ಪಂಚಭೂತಗಳನ್ನು ನಿರ್ಮಿಸಬಲ್ಲದೋ ಅಂಥ ಜಗತ್ತೂ ಇರಬಹುದು. ತಾತ್ವಿಕ ದೃಷ್ಟಿಯಿಂದ ಈ ನಮ್ಮ ಜಗತ್ತಿನಲ್ಲಿಯೂ ಇದೇ ಸ್ಥಿತಿ ಇರುತ್ತದೆ. ಆದರೆ ಇಲ್ಲಿ ಬುದ್ಧಿ ತತ್ವವು ಆರಂಭದಲ್ಲಿ ಅಡಗಿರುತ್ತದೆ; ಬಹುಕಾಲ ಅಜ್ಞಾನ ಸ್ಥಿತಿಯಲ್ಲಿರುತ್ತದೆ. ಮತ್ತು ಮುಂದೆ ಅದು ಪ್ರಕಟಾವಸ್ಥೆಯನ್ನು ಹೊಂದಿದಾಗ್ಯೂ, ಅದು ತನ್ನನ್ನು ಸುತ್ತುಗಟ್ಟಿದ ಇತರ ತತ್ವಗಳ ಸೆರೆಮನೆಯಲ್ಲಿರುತ್ತದೆ ಆದರೆ ಅಲ್ಲಿ ಬುದ್ಧಿಯು ತನ್ನ ಸ್ವಾಮಿಯಾಗಿದ್ದು ತನ್ನ ಸಾಧನಗಳ ಮೇಲೆ ಪೂರ್ಣ ಸ್ವಾಮಿತ್ವವನ್ನು ನಡೆಸುತ್ತದೆ. ಇಲ್ಲಿಗಿಂತ ಆ ಜಗತ್ತಿನ ಸಾಧನಗಳು ಹೆಚ್ಚು ಸೂಕ್ಷ್ಮ ಮತ್ತು ಕಾರ್ಯ ಸಿದ್ಧಿಗೆ ಹೆಚ್ಚು ಯೋಗ್ಯವಾದವು ಇರುತ್ತವೆ. ಅದೇ ಪ್ರಕಾರ ಪ್ರಾಣಕ್ಕೂ ತನ್ನವೇ ಆದ ಸ್ವತಂತ್ರ ಕಾರ್ಯಕ್ಷಮ ಲೋಕಗಳು ಇರಬಹುದು. ಅಲ್ಲಿ ಅದು ಅಧಿಪತಿಯಾಗಿ ತನ್ನ ಮನಸ್ಸಿಗೆ ಬಂದಂತೆ ತನ್ನ ಇಚ್ಛೆಗಳನ್ನೂ, ವೃತ್ತಿಗಳನ್ನೂ, ತನಗಿಂತ ಹೆಚ್ಚಿನ ಶಕ್ತಿಯ ಹೆದರಿಕೆ ಇಲ್ಲದೆ ಉಪಯೋಗಮಾಡಿಕೊಳ್ಳಬಹುದು. ಆದರೆ ಈ ಭೂ-ಲೋಕದಲ್ಲಿ ಹೆಚ್ಚು ಬಲವುಳ್ಳ ಪಂಚಭೂತಗಳು ಅದರ ಶಕ್ತಿಯ ಮೇಲೆ ದಾಳಿಮಾಡುತ್ತಿರುವ ಕಾರಣ ಅದಕ್ಕೆ ತನ್ನ ಸಂರಕ್ಷಣೆಯ ಬಗ್ಗೆ ತನ್ನ ಶಕ್ತಿಯ ಹೆಚ್ಚಿನ ಅಂಶವನ್ನು ವೆಚ್ಚಮಾಡಬೇಕಾಗುತ್ತದೆ. ಪಂಚಭೂತಗಳ ಸಂಗಡ ಹೂಡುತ್ತಿರಬೇಕಾದ ಈ ಯುದ್ಧದಿಂದ ಅದಕ್ಕೆ ತನ್ನ ಶಕ್ತಿಯನ್ನು ಸ್ವತಂತ್ರವಾಗಿ ಉಪಯೋಗಿಸಿಕೊಳ್ಳಲಿಕ್ಕೂ, ತನ್ನ ಎಲ್ಲ ಇಚ್ಛೆಗಳ ತೃಪ್ತಿಮಾಡಿಕೊಳ್ಳಲಿಕ್ಕೂ, ಎಲ್ಲ ಸಾಹಸದ ಕೆಲಸಗಳನ್ನು

ನೆರವೇರಿಸಲಿಕ್ಕೂ ಸಾಧ್ಯವಾಗುವದಿಲ್ಲ. ಈ ಜಗತ್ತಿನಲ್ಲಿ ಕಂಡುಬರುವ ಆತ್ಮ, ಬುದ್ಧಿ, ಪ್ರಾಣ ಮತ್ತು ಭೌತಿಕ ಪದಾರ್ಥ ಇವೆಲ್ಲ ತತ್ವಗಳಿಗೂ ತಮ್ಮ ತಮ್ಮ ಸ್ವತಂತ್ರ ಆಧಿಪತ್ಯದ ಲೋಕಗಳಿರುವದು ಈ ಉತ್ಕ್ರಾಂತಿಯಲ್ಲಿ ಅಡಕವಾದ ಒಂದು ಶಕ್ಯ ಸತ್ಯವೇ ಆಗಿದೆ. ಈ ಎಲ್ಲ ತತ್ವಗಳು ಮೂಲತಃ ಒಂದೇ ಆದ್ಯ ತತ್ವದಿಂದ ಉತ್ಪನ್ನವಾದಾಗ್ಯೂ, ಅವುಗಳ ಉತ್ಕ್ರಾಂತಿಯಲ್ಲಿಯ ವಾಸ್ತವ ಶಕ್ತಿ ಮತ್ತು ಕ್ರಿಯೆಗಳು ಬೇರೆ ಬೇರೆಯಾಗಿರುತ್ತವೆ.

ಈ ಎಲ್ಲ ವಿವೇಚನೆಯು ಕೇವಲ ತಾತ್ವಿಕ ಶಕ್ಯತೆಯೆಂದೂ, ಸರ್ವಶಕ್ತಿಮಾನ್ ಸಚ್ಚಿದಾನಂದ ಬ್ರಹ್ಮ ವಸ್ತುವು ಏನನ್ನು ಮಾಡಬಹುದೆಂಬ ಬಗ್ಗೆ ಇದೊಂದು ಕೇವಲ ತಾರ್ಕಿಕವಾದವಾಗಿದ್ದು ಅದು ಪ್ರತ್ಯಕ್ಷ ಇರುವದು ಶಕ್ಯವಿಲ್ಲೆಂದೂ, ಶಕ್ಯವಿದ್ದರೂ ವಸ್ತುತಃ ಈ ಲೋಕಗಳು ಇರಲಾರವೆಂದೂ, ಕದಾಚಿತ್ ಈ ಲೋಕಗಳು ವಸ್ತುತಃ ಇರುವವೆಂದು ಸಿದ್ಧವಾದರೂ, ಈ ಜಗತ್ತಿನಲ್ಲಿ ವಾಸವಾಗಿರುವ ಪ್ರಾಣಿಗಳ ಅನುಭವಕ್ಕೆ ಈ ಲೋಕಗಳು ಬರುವದು ಶಕ್ಯವಿಲ್ಲೆಂದೂ ಕೆಲವರು ಅನ್ನಬಹುದು. ಆದರೆ ಈ ಸಂಶಯಗಳಲ್ಲಿ ಬಹಳ ಮಹತ್ವವಿದೆಯೆಂದು ಅನಿಸುವದಿಲ್ಲ. ಯಾಕಂದರೆ, ನಮ್ಮ ಆಧ್ಯಾತ್ಮಿಕ ಅನುಭವದಿಂದ, ಈ ಜಗತ್ತಿಗಿಂತ ಹೆಚ್ಚು ವ್ಯಾಪಕ ಮತ್ತು ಸ್ವಾತಂತ್ರ್ಯವುಳ್ಳ ಮೇಲಿನ ಪಾತಳಿಯ ಲೋಕಗಳ ಅಸ್ತಿತ್ವ ಹಾಗೂ ಅವುಗಳ ತಾತ್ವಿಕ ರಚನೆ ಇವುಗಳನ್ನು ಕುರಿತು ಒಂದೇ ಪ್ರಕಾರದ ಅನುಭವವನ್ನು ಘೋಷಿಸುವ ಸಾಕ್ಷಿಗಳು ನಮಗೆ ದೊರಕುತ್ತವೆ. ಆಧುನಿಕ ವಿಚಾರವಂತ ಜಗತ್ತು ತಿಳಿಯುತ್ತಿದ್ದಂತೆ ಚಾಕ್ಷುಷಜ್ಞಾನವಷ್ಟೇ ಅಥವಾ ಇಂದ್ರಿಯಜನ್ಯ ಅನುಭವವಷ್ಟೇ ಸತ್ಯಜ್ಞಾನವೆಂದೂ, ತರ್ಕದ ಒರೆಯಿಂದ ಸಿದ್ಧವಾದ ಸ್ಥೂಲ ವಸ್ತುಗಳ ಅನುಭವವಷ್ಟೇ ನಿಜವೆಂದೂ, ಸ್ಥೂಲ ದ್ರವ್ಯಗಳಷ್ಟೇ ಅಂತಿಮ ಸತ್ಯವೆಂದೂ, ಇವುಗಳ ಹೊರತು ಇದ್ದ ಜ್ಞಾನವು ಈ ಸತ್ಯ ದ್ರವ್ಯಗಳ ಭ್ರಾಮಕ ಅನುಭವವೆಂದೂ ಆತ್ಮವಂಚನೆಯೆಂದೂ ಹೇಳುವವರ ಅಭಿನಿವೇಶಯುಕ್ತ ವಿತಂಡವಾದಕ್ಕೊಳಗಾಗದೆ ಸ್ವತಂತ್ರ ರೀತಿಯಿಂದ ವಿಚಾರಮಾಡುವವರಿಗೆ ಪುರಾಣ ಕಾಲದ ಪುರಾವೆ, ಐತಿಹಾಸಿಕ

ಮತ್ತು ಆಧುನಿಕ ಅನುಭವಿಕರ ಸಾಕ್ಷಿ ಇವುಗಳಲ್ಲಿ ಇದ್ದ ಸಾದೃಶ್ಯವನ್ನು ನೋಡಿ ಅನ್ಯ ಲೋಕಗಳ ಅಸ್ತಿತ್ವವನ್ನು ಒಪ್ಪಲೇ ಬೇಕಾಗುತ್ತದೆ. ಈ ಜಗತ್ತಿನಲ್ಲಿ ಕಂಡುಬರುವ ತಾಲಬದ್ಧವಾದ ಕ್ರಿಯಾಪದ್ಧತಿಯಂತೆ, ಇತರ ಲೋಕಗಳ ಅಸ್ತಿತ್ವವೂ ಬೇರೆ ಬೇರೆ ತಾಲಬದ್ಧವಾದ ಕ್ರಿಯಾಪದ್ಧತಿಯಲ್ಲಿ ಸಿದ್ಧವಾಗುವದೆಂಬುದನ್ನು ನಾವು ಕಾಣಬಹುದು. ಆದ್ದರಿಂದ ಈ ಸ್ಥೂಲ ಜಗತ್ತಿನ ಅನುಭವದ ತರ್ಕಕ್ಕೆ ನಿಲುಕದ ಎಲ್ಲ ವಿಚಾರಸರಣಿಯು ಭ್ರಮೆಯೆಂದು ತಿಳಿಯುವದು ತಪ್ಪು. ಈ ಜಗತ್ತಿನ ರಚನೆಯಲ್ಲಿ ಕಂಡುಬರುವ ಕ್ರಮಕ್ಕಿಂತ ಬೇರೆ ಕ್ರಮಗಳಲ್ಲಿ ಅನ್ಯ ಲೋಕಗಳ ಸಾಮಗ್ರಿಯು ರಚನೆಯಾಗಿದ್ದು, ಅವುಗಳ ಕೆಲಸದ ಪದ್ಧತಿಯೂ ಬೇರೆ ಬೇರೆಯಾಗಿರುತ್ತದೆ. ಆ ಲೋಕಗಳು ತಮ್ಮ ತಮ್ಮ ವಾತಳಿಯಲ್ಲಿ ಅವುಗಳ ರಚನಾಸಾಮಗ್ರಿಗೆ ಅನುಗುಣವಾಗುವಂತೆ ಕ್ರಿಯಾಪದ್ಧತಿಯ ನಿಯಮಗಳನ್ನು ಅನುಸರಿಸುವವು. ಆದ್ದರಿಂದ ಸ್ಥೂಲ ಜಗತ್ತಿನ ಅನುಭವಕ್ಕೆ ವಿಸಂಗತವಾದದ್ದೆಲ್ಲ ಕೇವಲ ಕಾಲ್ಪನಿಕ ಭ್ರಮೆಯಾಗಲಾರದು.

ಈ ಪರಲೋಕಗಳು ನಮ್ಮ ಲೋಕಕ್ಕಿಂತ ಬೇರೆ ಬೇರೆ ಸ್ಥಳಗಳಲ್ಲಿ ಮತ್ತು ಬೇರೆ ಬೇರೆ ಕಾಲಗಳಲ್ಲಿ ಇರುವವೋ ಅಥವಾ ಒಂದೇ ಸ್ಥಳ ಮತ್ತು ಕಾಲದಲ್ಲಿರುವವೋ ಎಂದು ವಿಚಾರಮಾಡುವದು ನಮಗೆ ಈಗ ಅವಶ್ಯವಿಲ್ಲ. ಅದು ಹೇಗೆ ಇದ್ದರೂ ಆ ಲೋಕಗಳು ನಮ್ಮ ಲೋಕಕ್ಕಿಂತ ಹೆಚ್ಚು ಸೂಕ್ಷ್ಮವಾದವೂ, ಬೇರೆ ತರದ ಕ್ರಿಯಾಪದ್ಧತಿಯುಳ್ಳವೂ ಆಗಿರುವವೆಂದು ತಿಳಿದರೆ ಸಾಕು. ನಮ್ಮ ವಿಚಾರಕ್ಕೆ ಈಗ ಪ್ರತ್ಯಕ್ಷ ಸಂಬಂಧವಿದ್ದ ಪ್ರಶ್ನೆಯೆಂದರೆ, ಈ ಬೇರೆ ಬೇರೆ ಲೋಕಗಳಲ್ಲಿ ಪ್ರತಿಯೊಂದು ಲೋಕವು ಪೂರ್ಣತೆಯನ್ನು ಹೊಂದಿದ, ಒಂದಕ್ಕೊಂದು ಯಾವ ಪ್ರಕಾರದಿಂದಲೂ ಸಂಬಂಧವಿಲ್ಲದ ಒಂದರಮೇಲೊಂದು ಪರಿಣಾಮವನ್ನುಂಟುಮಾಡದ, ಒಂದರಲ್ಲೊಂದು ಬೆರೆಯದ ಸ್ವತಂತ್ರ ಅಸ್ತಿತ್ವವುಳ್ಳವು ಇರುವವೋ, ಅಥವಾ ಅವೆಲ್ಲವೂ ಒಂದಕ್ಕೊಂದು ಗಾಢವಾಗಿ ಹೆಣೆದ ಒಂದೇ ವಸ್ತುವಿನ ಬೇರೆ ಬೇರೆ ತರಗತಿಯಲ್ಲಿ ನೆಲೆಸಿದ ವಾತಳಿಗಳಾಗಿರುವವೊ? ಅರ್ಥಾತ್ ನಾನಾವಿಧ ರಚನಾತ್ಮಕ ಒಂದೇ ವಿಶ್ವದ ಬೇರೆ ಬೇರೆ ಭಾಗಗಳಾಗಿರುವವೋ?

ಎಂಬದು. ಈ ಲೋಕಗಳು ನಮ್ಮ ಮನಸ್ಸಿನ ಮೇಲೆ ಪರಿಣಾಮವನ್ನುಂಟು ಮಾಡಿ ನಮ್ಮ ಮನಶ್ಚಕ್ಷುವಿನಲ್ಲಿಳಿಯುವವೆಂಬ ಸಂಗತಿಯಿಂದ ಒಂದೇ ವಿಶ್ವದ ಬೇರೆ ಬೇರೆ ಭಾಗಗಳು ಈ ಲೋಕಗಳಿರುವವೆಂದು ನಾವು ತರ್ಕಿಸಬಹುದು. ಆದರೆ ಇದು ನಿಶ್ಚಿತವಾದ ತರ್ಕವಾಗಲಾರದು. ನಮಗೆ ಈ ಬಗ್ಗೆ ಕಾಣುವ ಹೆಚ್ಚಿನ ಸಂಗತಿಯೇನಂದರೆ, ಮೇಲಿನ ಸೂಕ್ಷ್ಮ ಲೋಕಗಳು ಈ ನಮ್ಮ ಭೂಮಿಯ ಮೇಲೆ ಪ್ರತಿಕ್ಷಣವೂ ತಮ್ಮ ಕ್ರಿಯೆಯ ಪರಿಣಾಮವನ್ನುಂಟುಮಾಡಿ ಈ ಲೋಕದಲ್ಲಿ ವ್ಯವಹಾರ ಮಾಡುತ್ತಿರುವವು. ಆದರೆ ಈ ವ್ಯವಹಾರದ ಜ್ಞಾನವು ನಮ್ಮ ಈ ಜಾಗ್ರತಾವಸ್ಥೆಯಲ್ಲಿ ಬಾಹ್ಯ ವೃತ್ತಿಯ ಮನಸ್ಸಿಗೆ ಆಗಲಾರದು ಯಾಕಂದರೆ ಈ ಬಾಹ್ಯವೃತ್ತಿಯ ಮನಸ್ಸು ಇಂದ್ರಿಯಗಳ ಮುಖಾಂತರ ಈ ಸ್ಥೂಲ ಜಗತ್ತಿನ ಸಂಬಂಧವನ್ನುಂಟುಮಾಡಿಕೊಂಡು, ಅದನ್ನು ಗ್ರಹಿಸಿ ನಮ್ಮ ವ್ಯವಹಾರದಲ್ಲಿ ಈ ಜ್ಞಾನದ ಉಪಯೋಗವನ್ನು ಮಾಡಿಕೊಡುವದಷ್ಟೇ ಅದರ ಕೆಲಸವಾಗಿದೆ. ಆದ್ದರಿಂದ ಈ ಜ್ಞಾನವು ಪರಿಮಿತವಾದದ್ದು. ಆದರೆ ನಾವು ನಮ್ಮ ಮನಸ್ಸನ್ನು ಅಂತರ್ಮುಖ ಮಾಡಿ ನಮ್ಮ ಸೂಕ್ಷ್ಮ ಭಾಗಗಳ ಕಡೆಗೆ ಹೋಗುವ ಅಭ್ಯಾಸ ಮಾಡಿದರೆ ಅಥವಾ ಕೇವಲ ಈ ಸ್ಥೂಲ ಜಗತ್ತಿನ ಕಡೆಗೇ ಹೋಗುತ್ತಿರುವ ನಮ್ಮ ಮನಸ್ಸಿನ ಕ್ಷೇತ್ರವನ್ನು ಬೆಳಿಸಿ ನಮ್ಮ ಜಾಗ್ರತ ಜ್ಞಾನದ ಪರಿಘವನ್ನು ಬೆಳೆಸುತ್ತ ಹೋದರೆ, ಈ ಸೂಕ್ಷ್ಮ ಲೋಕಗಳ ಕ್ರಿಯೆಯ ಜ್ಞಾನವು ನಮಗಾಗುತ್ತದೆ ಇಷ್ಟೇ ಅಲ್ಲ, ಮನುಷ್ಯನು ಈ ದೇಹದಲ್ಲಿರುವಾಗಲೇ ಕೆಲವು ಅವಸ್ಥೆಗಳಲ್ಲಿ ತನ್ನ ಸೂಕ್ಷ್ಮ ದೇಹವನ್ನು ಅನ್ಯಲೋಕಗಳಲ್ಲಿ ಕೆಲವು ವೇಳೆ ಇರಿಸಬಹುದು. ಅಂದ ಮೇಲೆ ಅವನು ಈ ದೇಹದಿಂದ ಮುಕ್ತನಾದ ಮೇಲೆ ಈ ಲೋಕಗಳಲ್ಲಿ ಸಂಚರಿಸಬಹುದೆಂಬದರಲ್ಲಿ ಸಂದೇಹವಿಲ್ಲ. ಯಾಕಂದರೆ ಆಗ ಅವನಿಗೆ ಈ ಸ್ಥೂಲ ದೇಹದ ಜಡ ಸಂಕೋಲೆಯು ಇರುವದಿಲ್ಲ. ನಮ್ಮ ಲೋಕ ಮತ್ತು ಪರಲೋಕಗಳಲ್ಲಿದ್ದ ಈ ಸಂಬಂಧ ಮತ್ತು ಪರಲೋಕಗಮನ ಶಕ್ತಿ ಇವುಗಳ ಪರಿಣಾಮದ ಮಹತ್ವವು ಅನೇಕ ಪ್ರಕಾರದ್ದಿರುತ್ತದೆ ಮೊದಲನೇ ಸಂಗತಿಯೆಂದರೆ, ಈ ದೇಹವು ನಷ್ಟವಾದ ನಂತರ ಈ ಸ್ಥೂಲ ಜಗತ್ತನ್ನು ಬಿಟ್ಟು ಜೀವನು ಅನ್ಯ ಲೋಕಗಳಿಗೆ, ಕೆಲಕಾಲವೇ ಯಾಕಾಗಲೊಲ್ಲದು

ಪ್ರಯಾಣಮಾಡುವನೆಂಬ ಸನಾತನ ಕಲ್ಪನೆಯ ಶಕ್ಯತೆಯು ಸತ್ಯವಿರುವದೆಂದು ಕೂಡಲೇ ಸಿದ್ಧವಾಗುತ್ತದೆ. ಎರಡನೇ ಸಂಗತಿಯೆಂದರೆ, ಮೇಲಿನ ಲೋಕಗಳ ಕ್ರಿಯೆಯ ಪರಿಣಾಮವು ಈ ನಮ್ಮ ಸ್ಥೂಲ ಜಗತ್ತಿನ ಮೇಲೆ ಆಗಿ ಇಲ್ಲಿಯ ಸ್ಥೂಲ ದ್ರವ್ಯಗಳಲ್ಲಿ ಗುಪ್ತವಾಗಿದ್ದ ಪ್ರಾಣ, ಬುದ್ಧಿ ಮತ್ತು ಆತ್ಮ ಶಕ್ತಿಗಳನ್ನು ಆ ಆ ಲೋಕಗಳ ದ್ರವ್ಯ ಘಟನೆಯ ಮಹತ್ ಸಾಮರ್ಥ್ಯದಿಂದ ವಿಕಾಸಗೊಳಿಸಿ ಪ್ರಕೃತಿಯ ಸ್ವಾಭಾವಿಕ ಉದ್ದೇಶವಾದ ಉತ್ಕ್ರಾಂತಿಗೆ ಈ ಲೋಕಗಳು ಸಾಧನವಾಗಿರುವದೆಂಬದರ ಶಕ್ಯತೆಯನ್ನೂ ಸ್ಥಿರಗೊಳಿಸುತ್ತದೆ.

ಈ ವಿಶ್ವದ ಪ್ರಾರಂಭಕ್ಕೆ, ಮೊದಲು ನಮ್ಮ ಈ ಪೃಥ್ವಿಯ ರಚನೆಯಾಗಿ, ಆಮೇಲೆ ಸ್ವರ್ಗಾದಿ ಭುವನಗಳ ರಚನೆಯಾಯಿತೆಂದು ಹೇಳಲಿಕ್ಕೆ ಬರುವದಿಲ್ಲ. ಕಾಲದ ದೃಷ್ಟಿಯಿಂದಲ್ಲದಿದ್ದರೂ, ಪರಿಣಾಮದ ದೃಷ್ಟಿಯಿಂದ ಸ್ವರ್ಗಾದಿ ಲೋಕಗಳು ಈ ನಮ್ಮ ಜಗತ್ತಿಗಿಂತ ಮೊದಲೇ ಆಗಿರುವವೆಂದು ಹೇಳಬೇಕಾಗುವದು. ಯಾಕಂದರೆ ವಿಶ್ವರಚನೆಯಲ್ಲಿ, ಈ ಲೋಕಗಳು ಕೆಳಗಿಳಿಯುವ ಮತ್ತು ಮೇಲಕ್ಕೇರುವ ಸೋಪಾನಗಳಂತೆ ಇದ್ದು ಮೇಲಿನ ಮೆಟ್ಟಿಲುಗಳು ಆರಂಭದಲ್ಲಿ ಬ್ರಹ್ಮವಸ್ತುವಿನಿಂದ ಪಂಚಭೂತಗಳ ವರೆಗೆ ಇಳಿದವುಗಳು ಇರಬೇಕೆಂಬುವದು ಸ್ಪಷ್ಟವಾಗಿದೆ ಈ ಭೂಮಿಯ ರಚನೆಗೆ ಮತ್ತು ನಾಶಕ್ಕೆ ಅನುಕೂಲ ಪ್ರತಿಕೂಲ ಶಕ್ತಿಗಳು ಸ್ವರ್ಗಾದಿ ಸೂಕ್ಷ್ಮ ಲೋಕಗಳಿಂದಲೇ ಉತ್ಪನ್ನವಾಗುವವಾದ್ದರಿಂದ, ಈ ಲೋಕಗಳೇ ಭೂಮಿಯ ಉತ್ಪತ್ತಿ ನಾಶಗಳಿಗೆ ಕಾರಣವಾಗಿರುವವೆಂದು ಊಹಿಸಬೇಕಾಗುತ್ತದೆ ಆದ್ದರಿಂದ ಭೂಮಿಯಲ್ಲಿ ಕಂಡುಬರುವ ಉತ್ಕ್ರಾಂತಿಯ ಪರಿಣಾಮವಾಗಿ ಅನ್ಯಲೋಕಗಳು, ಭೂಮಿಯ ನಂತರ ಉತ್ಪನ್ನವಾಗಿರಬೇಕೆಂದು ತಿಳಿಯುವದು ಶಕ್ಯವಾಗಲಾರದು. ಹೀಗಿರುವದು ತರ್ಕದಿಂದ ಸಂಭವನೀಯವೂ ಇಲ್ಲ; ಅಥವಾ ಈ ವಾದಕ್ಕೆ ಆಧ್ಯಾತ್ಮಿಕ ದೃಷ್ಟಿಯಿಂದಾಗಲಿ ಪದಾರ್ಥರಚನಾಶಾಸ್ತ್ರದ ದೃಷ್ಟಿಯಿಂದಾಗಲಿ ಅಥವಾ ವ್ಯಾವಹಾರಿಕ ದೃಷ್ಟಿಯಿಂದಾಗಲಿ ಏನೂ ಅರ್ಥವಿದ್ದದ್ದು ಕಂಡುಬರುವದಿಲ್ಲ. ಅರ್ಥಾತ್ ಮೇಲಿನ ಲೋಕಗಳು ಭೂಮಿಯ ಉತ್ಕ್ರಾಂತಿಯ ಮೂಲಕ ಜನ್ಮ

ತಾಳಿರುವದಿಲ್ಲ. ಆದರೆ ಈ ಅಚೇತನ ಸ್ಥೂಲ ಪದಾರ್ಥಗಳಲ್ಲಿ ಅಡಗಿದ್ದ ಸಚ್ಚಿದಾನಂದ ವಸ್ತುವಿನ ಪ್ರಕಟನೆಗೆ ಸಾಧನವಾಗಿಯಾಗಲಿ, ಅಥವಾ ಅದು ಕ್ರಮದಿಂದ ವಿಕಾಸವಾಗಿ ಪ್ರಾಣ, ಬುದ್ಧಿ ಮತ್ತು ಜೀವಗಳ ರೂಪಕ್ಕೆ ಬರುವದರಿಂದ, ಈ ತತ್ವಗಳಿಗೆ ಹೆಚ್ಚು ಸ್ವತಂತ್ರವಾದ ಕಾರ್ಯಕ್ಷೇತ್ರವಿರಬೇಕೆಂಬ ಉದ್ದೇಶದಿಂದಾಗಲಿ ಅಥವಾ ಮನುಷ್ಯ ಯೋನಿಯ ವರೆಗೆ ಉತ್ಕ್ರಮಿಸಿದ ಜೀವವು ತನ್ನ ಪ್ರಾಣ, ಬುದ್ಧಿ ಮತ್ತು ಆತ್ಮಗಳ ಶಕ್ತಿಯನ್ನು ಬೆಳಿಸಿಕೊಳ್ಳಬೇಕೆಂಬ ಉದ್ದೇಶದಿಂದಾಗಲಿ ಈ ಲೋಕಗಳ ಅವಶ್ಯಕತೆಯು ಕಂಡುಬರುವ ಕಾರಣ, ಅವು ಭೂಮಿಯ ಪಶ್ಚಾತ್ ಉತ್ಪನ್ನವಾದವೆಂದು ಹೇಳಲಿಕ್ಕೆ ಬರುವದಿಲ್ಲ. ಈ ಲೋಕಗಳು ಜೀವಗಳಿಂದ ನಿರ್ಮಿತವಾದವುಗಳಂತೂ ಎಂದೂ ಆಗಲಾರವು. ಅಥವಾ ಅವು ಜೀವಗಳ ಆಕಾಂಕ್ಷೆಯ ಪರಿಣಾಮವಾಗಿಯಾಗಲಿ ಅಥವಾ ಮನುಷ್ಯನ ಆಂತರಿಕ ಆತ್ಮಶಕ್ತಿಯ ಬೆಳವಣಿಗೆಯಿಂದ ಉಂಟಾದ ಅವನ ಸೂಕ್ಷ್ಮ ಭಾಗಗಳಿಂದ ನಿರ್ಮಿಸಲ್ಪಟ್ಟವುಗಳಾಗಲಿ ಇರಲಾರವು ಆದರೆ, ಮನುಷ್ಯನು ಈ ಲೋಕಗಳ ಪ್ರತಿಬಿಂಬವನ್ನು ಮಾತ್ರ ತನ್ನ ಬುದ್ಧಿಯ ರಚನಾ ಸಾಮರ್ಥ್ಯದಿಂದ ಉಂಟುಮಾಡಿಕೊಂಡು, ಆ ಲೋಕಗಳಿಂದುಂಟಾಗುತ್ತಿರುವ ಪರಿಣಾಮವನ್ನು ಗ್ರಹಣಮಾಡುವ ಸಾಮರ್ಥ್ಯವನ್ನೂ ಮತ್ತು ಈ ಸ್ಥೂಲ ಜಗತ್ತಿನ ಕ್ರಿಯೆಗಳಲ್ಲಿ ಮಿಶ್ರವಾಗಿದ್ದ ಪರಲೋಕಗಳ ಕ್ರಿಯೆಯ ಪರಿಣಾಮಗಳನ್ನು ತಿಳಕೊಳ್ಳುವ ಶಕ್ತಿಯನ್ನೂ ಬೆಳೆಸಬಹುದು. ಇಷ್ಟೇ ಅಲ್ಲ, ಈ ಲೋಕಗಳ ಮೇಲೆ ಆಗುತ್ತಿದ್ದ ಪರಲೋಕಗಳ ಪರಿಣಾಮದಲ್ಲಿ ಅಥವಾ ಕ್ರಿಯೆಗಳಲ್ಲಿ ತನ್ನ ಸೂಕ್ಷ್ಮ ಪ್ರಾಣ ಮತ್ತು ಬುದ್ಧಿಯ ಕ್ರಿಯೆಗಳನ್ನು ಬೆರಿಸಿ ಅವನ್ನು ಹೆಚ್ಚು ಪರಿಣಾಮಕಾರಕವಾಗುವಂತೆ ಮಾಡಬಹುದು. ಆದರೆ ಮನುಷ್ಯನ ಈ ಸೂಕ್ಷ್ಮೇಂದ್ರಿಯಗಳ ಸಾಮರ್ಥ್ಯವು, ಆ ಲೋಕಗಳಿಂದಲೇ ಮನುಷ್ಯನ ಸ್ಥೂಲ ಬುದ್ಧಿಯ ಮೇಲೆ ಆಗುತ್ತಿರುವ ಕ್ರಿಯೆಯ ಪರಿಣಾಮವಿದ್ದದ್ದರಿಂದ, ಈ ಬೆಳೆದ ಸಾಮರ್ಥ್ಯವು ಮನುಷ್ಯನಿಂದುಂಟಾದ ಒಂದು ಸ್ವತಂತ್ರ ಕ್ರಿಯೆಯ ಪರಿಣಾಮವೆಂದೂ ಹೇಳುವದು ಶಕ್ಯವಿಲ್ಲ. ಕೆಳಗಿನ ತರಗತಿಯ ಈ ಊರ್ಧ್ವ ಲೋಕಗಳಲ್ಲಿ ತನ್ನದೊಂದು ಸ್ವತಂತ್ರವಾದ ಕಲ್ಪನಾ ನಿರ್ಮಿತ ಪರಿಸ್ಥಿತಿಯನ್ನು ಕೂಡ ಜೀವನು ನಿರ್ಮಿಸಬಹುದು. ಆದರೆ ಇದು ಸತ್ಯ

ವಾದ ಒಂದು ಸ್ವತಂತ್ರ ಲೋಕವಿರದೆ, ತಾನೇ ತನ್ನ ಸುತ್ತಲೂ ನಿರ್ಮಿಸಿದ ಅರ್ಥ ಸತ್ಯವಾದ ಒಂದು ಕವಚವಿರುವದು. ಮನುಷ್ಯನು ಈ ಲೋಕದಲ್ಲಿ ಪರಲೋಕಗಳ ಮನೋರಾಜ್ಯಗಳನ್ನು ನಿರ್ಮಿಸುತ್ತಿದ್ದುದರ ಪರಿಣಾಮವಾಗಿ ಮನಸ್ಸಿನಲ್ಲಿಯೇ ಮುಂಡಗೀ ತಿನ್ನುವ ಅವನ ಬುದ್ಧಿಶಕ್ತಿಯು ನಿರ್ಮಿಸಿ ಕೊಂಡ ಸ್ವರ್ಗ ನರಕಗಳ ಪರಿಣಾಮವಾಗಿ, ಅವನ ಕಲ್ಪನೆಯ ಪ್ರತಿ ಬಿಂಬವೇ ಈ ಸ್ವಯಂ ನಿರ್ಮಿತ ಪರಿಸ್ಥಿತಿಯಾಗಿರುತ್ತದೆ. ಈ ಎರಡೂ ಪ್ರಕಾರಗಳಿಂದ ಮನುಷ್ಯನು ಆ ಲೋಕಗಳ ಕ್ರಿಯೆಗೆ ಸಹಾಯನಾಗುವನು ಮಾತ್ರ. ಆದರೆ ಅವನ ಸಹಾಯವು ಒಂದು ಸ್ವತಂತ್ರವಾದ ಲೋಕದ ಅಸ್ತಿತ್ವಕ್ಕೆ ಕಾರಣವಾಗಲಾರದು. ಹಾಗೂ ಅವನ ಈ ಮನೋರಾಜ್ಯ ದಿಂದುಂಟಾದ ಪರಿಸ್ಥಿತಿಯಲ್ಲಿ ಸ್ವತಂತ್ರವಾದ ತಾತ್ವಿಕ ಕ್ರಿಯಾಪದ್ಧತಿಯೂ ಇರಲಾರದು.

ನಾವು ಇಲ್ಲಿಯ ವರೆಗೆ ಮಾಡಿದ ವಿವೇಚನೆಯ ಮೇಲಿಂದ ಪರ ಲೋಕಗಳು ನಮಗೆ ಜ್ಞಾತವಾದ ಈ ಸ್ಥೂಲ ಜಗತ್ತಿಗೆ ಸಮಕಾಲೀನವಾಗಿ ಇರಲಿಕ್ಕೇ ಬೇಕೆಂದು ಮತ್ತು ಈ ಜಗತ್ತು ನಾಶವಾಗುವವರೆಗೂ ಇರ ಬೇಕೆಂದು ಸಿದ್ಧವಾಗುತ್ತದೆ. ಹಾಗೂ ಈ ಜಗತ್ತಿನಲ್ಲಿ ಕಂಡುಬರುವ ಪ್ರಾಣ ಮನಸ್ಸು ಮತ್ತು ಜೀವ ಇವುಗಳ ಶಕ್ತಿಯ ಬೆಳವಣಿಗೆಗೆ ಈ ಲೋಕಗಳು ಮುಂಚಿತವಾಗಿಯೇ ಇರಬೇಕೆಂಬ ತಿಳುವಳಿಕೆಯು ಅಪರಿಹಾರ್ಯವಾಗಿದೆ. ಯಾಕ ದರೆ ಈ ತತ್ವಗಳ ಬೆಳವಣಿಗೆ ಅಥವಾ ವಿಕಾಸವು ಈ ಜಗತ್ತಿನಲ್ಲಿ ವಿರುದ್ಧ ಬದಿಯಿಂದ ಒಟ್ಟುಗೂಡಿದ ಎರಡು ಶಕ್ತಿಗಳಿಂದ ಆಗುತ್ತದೆ. ಒಂದು ಕೆಳಗಿನಿಂದ ಮೇಲ ನೂಕುವ ಶಕ್ತಿ; ಮತ್ತೊಂದು ಮೇಲಿನಿಂದ ಕೆಳಗಿಳಿದು ಮೇಲಕ್ಕೆ ಜಗ್ಗುತ್ತಿರುವ ಶಕ್ತಿ ಅಚೇತನ ವಸ್ತುಗಳಲ್ಲಿ ಸುಪ್ತ ವಾಗಿದ್ದ ಸೂಕ್ಷ್ಮ ತತ್ವಗಳನ್ನು ಜಾಗ್ರತಗೊಳಿಸಲಿಕ್ಕೆ ಕೆಳಗಿನ ಶಕ್ತಿಯ ಅವಶ್ಯಕತೆ ಇರುತ್ತದೆ. ಮತ್ತು ಮೇಲಿನ ಶಕ್ತಿಯು ಈ ಜಾಗ್ರತವಾದ ಜೀವನಿಗೆ ಆತ್ಮಸಾಕ್ಷಾತ್ಕಾರದ ಸರ್ವಸಾಮಾನ್ಯ ಜ್ಞಾನವನ್ನುಂಟುಮಾಡ ಲಿಕ್ಕೆ ಸಹಾಯ ಮಾಡುತ್ತದ ಇಷ್ಟೇ ಅಲ್ಲ, ಅದು ಈ ಸಾಕ್ಷಾತ್ಕಾರವು ಯಾವ ವಿಶಿಷ್ಟ ಮಾರ್ಗದಿಂದ ಆಗತಕ್ಕದ್ದೆಂಬದನ್ನೂ ನಿಶ್ಚಿತಗೊಳಿಸುತ್ತದೆ.

ಈ ನಮ್ಮ ಭೌತಿಕ ಜಗತ್ತಿನ ಮೇಲೆ ಪರಿಣಾಮವನ್ನುಂಟುಮಾಡುತ್ತಿರುವ ಪ್ರಾಣಮಯ, ಮನೋಮಯ ಮತ್ತು ಆತ್ಮಮಯ ಲೋಕಗಳ ಕ್ರಿಯೆಯು ಈ ಮೇಲಕ್ಕೇಳಿಯುತ್ತಿರುವ ಶಕ್ತಿಯಿಂದ, ಮೇಲಿಂದ ಮೇಲೆ ಬರುತ್ತಿರುವ ಮೇಲಿನ ಒತ್ತರ ಅಥವಾ ಸೂಚನೆಗಳಿಂದ ತಿಳಿದು ಬರುತ್ತದೆ. ಏಳು ಪ್ರಕಾರದ ತತ್ವಗಳಿಂದ ಹೆಣೆದ ಈ ಜಟಿಲ ವಿಶ್ವದಲ್ಲಿ ಒಂದು ತತ್ವದ ಮೇಲೆ ಮತ್ತೊಂದರ ಕ್ರಿಯೆಯು ಆಗುತ್ತಿರುವದರಿಂದ, ಅವು ಒಂದರ-ಲ್ಲೊಂದು ಕೂಡಿ, ಒಂದರ ಮೇಲೆ ಮತ್ತೊಂದರ ಪರಿಣಾಮವುಂಟಾಗುತ್ತಿರುವದರಿಂದ, ಈ ವಿಶ್ವದ ಪ್ರತಿಯೊಂದು ಭಾಗದಲ್ಲಿ ಸತತವಾಗಿ ಕಂಡು ಬರುತ್ತಿದ್ದ ಉತ್ಕ್ರಾಂತಿ ಶಕ್ತಿಯ ಪ್ರವಾಹವು ಅನಿವಾರ್ಯವಾಗಿದೆಯೆಂಬದನ್ನು ಅಥವಾ ಈ ಪ್ರವಾಹವು ವಿಶ್ವದ ಪ್ರಕಟನೆಯ ಸ್ವಭಾವವೇ ಆಗಿರುವದೆಂಬದನ್ನು ನಾವು ಮನಗಾಣಬಹುದು

ಈ ಸೂಕ್ಷ್ಮ ತತ್ವಗಳು ಮತ್ತು ಶಕ್ತಿಗಳು ತಮ್ಮ ತಮ್ಮ ಲೋಕಗಳಿಂದ ಈ ನಮ್ಮ ಸ್ಥೂಲ ಜಗತ್ತಿನ ಮೇಲೆ ಸತತ ಕ್ರಿಯೆಯನ್ನು ಮಾಡುತ್ತವೆ. ಈ ಕ್ರಿಯೆಯು ನಮ್ಮ ಸೂಕ್ಷ್ಮ ಶರೀರಗಳ ಮುಖಾಂತರ ಆಗುತ್ತಿದ್ದು, ಈ ಸೂಕ್ಷ್ಮ ಶರೀರಗಳೂ ಆ ಆ ಲೋಕಗಳು ರಚಿತವಾದ ಸಾಮಗ್ರಿಗಳಿಗೆ ಸಮಾನವಾದ ಸಾಮಗ್ರಿಗಳಿಂದಲೇ ರಚಿತವಾಗಿವೆ; ಅಥವಾ ಈ ಲೋಕಗಳ ಅಂಶವೇ ಈ ಶರೀರಗಳಲ್ಲಿ ಪರಿಣಮಿಸಿವೆಯೆಂದು ಹೇಳಬಹುದು. ಈ ಸ್ಥೂಲ ಅಚೇತನ ಜಗತ್ತಿನ ಮೇಲೆ ಆಗುತ್ತಿದ್ದ ಅನ್ಯ ಲೋಕಗಳ ಪರಿಣಾಮವು ನಮ್ಮ ಮೇಲೆ ಆಗುತ್ತಿರುವವೆಂಬದೂ ಮತ್ತು ಈ ಪರಿಣಾಮಕ್ಕೆ ಒಂದು ವಿಶಿಷ್ಟ ಅರ್ಥವಿರುವದೆಂಬದೂ ನಿರ್ವಿವಾದವಾಗಿದೆ. ಈ ಕ್ರಿಯೆಯ ಆದ್ಯ ಪರಿಣಾಮವೆಂದರೆ ಸ್ಥೂಲ ದ್ರವ್ಯಗಳ ಸುಪ್ತವಾಗಿರುವ ಪ್ರಾಣ ಮತ್ತು ಬುದ್ಧಿ ಶಕ್ತಿಗಳ ವಿಕಾಸವಾಗುವದು. ಇದರ ಅಂತಿಮ ಪರಿಣಾಮವೆಂದರೆ ಈ ಜಗತ್ತಿನಲ್ಲಿ ಆಧ್ಯಾತ್ಮಿಕ ಇಚ್ಛೆ, ಆತ್ಮದ ಯಥಾರ್ಥ ತಿಳುವಳಿಕೆ ಮತ್ತು ಆತ್ಮದ ಪ್ರತ್ಯಕ್ಷ ಜ್ಞಾನ ಇವುಗಳನ್ನು ಪ್ರಕಟಗೊಳಿಸಲಿಕ್ಕೆ ಸಹಾಯ ಮಾಡುವದು ಇರುತ್ತದೆ. ಇದರಿಂದ ಮನುಷ್ಯನು ತನ್ನ ಬಾಹ್ಯ ಜೀವನದಲ್ಲಿಯೇ ತಲ್ಲೀನನಾಗಿ ತನ್ನ ಬಾಹ್ಯ ಮಾನಸಿಕ ಕೋರಿಕೆಗಳನ್ನೇ

ತೃಪ್ತಿಗೊಳಿಸುವದು ಮತ್ತು ಇಂದ್ರಿಯಜನ್ಯ ಸುಖದ ಸಾಧನಗಳನ್ನು ಸಂಚಯ ಮಾಡುವದು ಇಷ್ಟೇ ತನ್ನ ಜೀವಿತದ ಸಾಫಲ್ಯವೆಂದು ತಿಳಿಯದೆ, ತನ್ನ ನಿಜವಾದ ಆತ್ಮ ಸ್ವರೂಪವನ್ನು ತಿಳಿಯುವದಕ್ಕೋಸ್ಕರ ಅಂತರ್ಮುಖ ನಾಗಿ ಈ ಸ್ಥೂಲ ಜಗತ್ತಿನ ಬಂಧನಗಳಿಂದ ಮುಕ್ತನಾಗುವ ತೀವ್ರ ಅಪೇಕ್ಷೆ ಯುಳ್ಳವನಾಗುತ್ತಾನೆ. ಅವನ ಅಂತರ್ದೃಷ್ಟಿಯು ಬೆಳೆದಂತೆ ಅವನ ಮನ ಸ್ಸಿನ, ಪ್ರಾಣಗಳ ಮತ್ತು ಆತ್ಮನ ಸಂಕುಚಿತವಾದ ಸೀಮೆಯು ವಿಶಾಲ ವಾಗುತ್ತದೆ ಅವನು ಮೊದಲು "ತಾನು" ಎಂದು ಭಾವಿಸಿದ ಸಂಕುಚಿತ ವಾದ ಚೌಕಟ್ಟಿನ ಬಂಧನವು ಸಡಿಲಾಗಿ ಉರುಳಿ ಹೋಗುತ್ತದೆ. ಹಾಗೂ ಈ ವರೆಗೆ ಮುಚ್ಚಿ ಮರೆಯಾದ ಆತ್ಮನ ರಾಜ್ಯದ ವಿಶಾಲವಾದ ದೃಶ್ಯವು ಅವನೆದುರಿಗೆ ಹರಡುವದು ಮನುಷ್ಯನು ತನ್ನ ಬಹಿರ್ಭಾಗದ ಜ್ಞಾನ ಪಾತಳಿಯಲ್ಲಿ ಇರುವವರೆಗೆ ಈ ಆತ್ಮಸ್ಥಿತಿಯ ಬಗ್ಗೆ ತನ್ನ ಇಲ್ಲಿಯ ಅಲ್ಪಜ್ಞಾನ ಶಕ್ತಿಗೆ ನಿಲುಕುವಷ್ಟರ ಮಟ್ಟಿಗೇ ಒಂದು ಕಲ್ಪನಾಮಯ ಮನೋರಾಜ್ಯ ವನ್ನು ಕಲ್ಪಿಸುವನು. ಈ ಮನೋರಾಜ್ಯದ ಸಹಾಯದಿಂದ ಅವನು ತನ್ನ ಆಧ್ಯಾತ್ಮಿಕ ಜೀವನದ ಅವಶ್ಯಕತೆಯನ್ನು ಅರಿತು ಆದರ ಸೂಚನೆಗಳಿಗನು ಸರಿಸಿ ಆಂತರಿಕ ಮಾರ್ಗವನ್ನು ಕ್ರಮಿಸುತ್ತ ನಡೆಯುವನು ಅವನು ಈ ಮಾರ್ಗದಿಂದ ಮುಂದಕ್ಕೆ ಹೋದಂತೆ ತನ್ನಲ್ಲಿಯೇ ಹೆಚ್ಚು ವ್ಯಾಪಕ ಜ್ಞಾನ ವನ್ನೂ ಮತ್ತು ವಿಶಾಲವಾದ ಜೀವನವನ್ನೂ ಕಾಣುತ್ತಾನೆ. ಈ ಸೂಕ್ಷ್ಮ ಲೋಕಗಳ ಆಂತರಿಕ ಶಕ್ತಿಯಿಂದ ಮತ್ತು ಈ ಜಗತ್ತಿನ ಬಾಹ್ಯ ಕ್ರಿಯೆ ಯಿಂದ, ಅವನ ಮೇಲಿನ ಈ ಸ್ಥೂಲ ದೇಹದ ಆಧಿಪತ್ಯವು ಕಡಿಮೆಯಾಗಿ ಅಂತ್ಯದಲ್ಲಿ ಅಜ್ಞಾನದ ಪ್ರಭಾವವು ಪೂರ್ಣವಾಗಿ ನಾಶಹೊಂದುತ್ತದೆ. ಈಗಿನ ಜ್ಞಾನಸಂಪಾದನೆಯ ಕ್ರಮವು ಪೂರ್ಣ ವಿಪರೀತವಾಗಿ—ಈ ಸ್ಥೂಲ ಶರೀರ ಮತ್ತು ಬಾಹ್ಯ ಜಗತ್ತೇ ಜ್ಞಾನಕ್ಕೆ ಸಾಧನಗಳೆಂಬ ಇದ್ದ ಈಗಿನ ತಿಳುವಳಿಕೆಯು ಬದಲಾಗಿ— ಆತ್ಮನೇ ಎಲ್ಲ ಜ್ಞಾನಕ್ಕೂ ಕಾರಣನೆಂದು ದೃಢವಾದ ವಿಶ್ವಾಸವು ಉಂಟಾಗುತ್ತದೆ. ಹಾಗೂ ಆತ್ಮನ ಅಪರಿಮಿತ ಶಕ್ತಿಯು ಈ ಜೀವನದಲ್ಲಿಯೇ ಪೂರ್ಣತೆಯಿಂದ ಪ್ರಕಟವಾಗಿ ಎಲ್ಲ ಬಂಧನ ಗಳಿಂದ ಮನುಷ್ಯನು ಮುಕ್ತನಾಗುತ್ತಾನೆ.

---

# ನೂರನೆಯ ಪರಿಚ್ಛೇದ

## ಜನ್ಮ ಕರ್ಮ ಮೀಮಾಂಸೆ

ಅರ್ಥಾತ್

## ಕರ್ಮವಿಪಾಕ



ಪುನರ್ಜನ್ಮದ ವಿವೇಚನೆಯನ್ನು ಮಾಡುವಾಗ್ಗೆ ನಾವು ಹಿಂದೆ ಹೇಳಿರುವದೇನಂದರೆ ಜೀವನು ಈ ಜಗತ್ತಿನಲ್ಲಿ ಸ್ಥೂಲ ದೇಹವನ್ನು ಪುನಃ ಪುನಃ ಧಾರಣ ಮಾಡುವದು ಈ ವಿಶ್ವದ ಉತ್ಕ್ರಾಂತಿಯ ನಿಯಮದಂತೆ ಆತ್ಮವಿಕಾಸದ ಒಂದು ಅನಿವಾರ್ಯವಾದ ಪರಿಣಾಮವಾಗಿರುವದು. ಈ ಸಿದ್ಧಾಂತದಿಂದ ಬೇರೆ ಹಲವು ಪ್ರಶ್ನೆಗಳೂ ಪುತ್ತು ಇವುಗಳಿಂದ ಪುನಃ ಈ ವಿಶ್ವದ ಮೇಲೆ ಆಗುತ್ತಿರುವ ಪರಿಣಾಮಗಳೂ ಉತ್ಪನ್ನವಾಗುತ್ತವೆ. ಇವನ್ನು ಹೆಚ್ಚು ವಿವರಿಸುವದು ಅವಶ್ಯವಿದೆ. ಈ ಸಿದ್ಧಾಂತದಿಂದ ಉದ್ಭವಿಸುವ ಮೊದಲನೇ ಪ್ರಶ್ನೆಯಾವದೆಂದರೆ, ಪುನರ್ಜನ್ಮವು ಯಾವ ಪ್ರಕಾರದ್ದು? ಮರಣದ ನಂತರ ಮಧ್ಯದಲ್ಲಿ ಏನೂ ಕಾಲಹರಣವಾಗದೇ, ಕೂಡಲೇ, ಜೀವನು ಮತ್ತೊಂದು ಜನ್ಮ ತಾಳಿ ದೇಹಧಾರಣ ಮಾಡುವನೋ ಅಥವಾ ಮಧ್ಯದಲ್ಲಿ ಕೆಲವುಕಾಲ ಹೋಗುವದೋ? ಅಥವಾ ಒಂದು ಸ್ಥೂಲ ದೇಹವು ನಷ್ಟವಾದ ನಂತರ ಮಧ್ಯದಲ್ಲಿ ಅಭ್ಯಂತರವಿಲ್ಲದೇ ಮತ್ತೊಂದು ಸ್ಥೂಲ ದೇಹವನ್ನು ಜೀವನು ಧಾರಣ ಮಾಡುವನೋ ಅಥವಾ ಮಧ್ಯದಲ್ಲಿ ಅವನು ಕೆಲಕಾಲ ಬೇರೆ ಸ್ಥಿತಿಯಲ್ಲಿರುವನೋ? ಈ ಸ್ಥೂಲ ದೇಹದಲ್ಲಿಯ ಜೀವನ ಜೀವಿತವು ಭಂಗವಿಲ್ಲದ ಒಂದೇ ಪ್ರವಾಹವಾಗಿರುವದೋ ಅಥವಾ ಜೀವನ ದೈಹಿಕ ಸ್ಥಿತಿಯು ಕಾಲಾಂತರದಿಂದ ಕಡಿದು ತುಂಡುತುಂಡಾದ ಪ್ರವಾಹವಿರುವದೋ? ಜೀವನ ಮರಣ–ಜನನಗಳ ಮಧ್ಯದಲ್ಲಿ ಕಾಲ ಖಂಡಗಳು ಇರುತ್ತವೆಂದು ಸಿದ್ಧವಾದರೆ, ಆದರಿಂದ ಮತ್ತೆ ಕೆಲವು ಪ್ರಶ್ನೆಗಳು

ಉಂಟಾಗುತ್ತವೆ. ಈ ಮಧ್ಯಾವಧಿಯಲ್ಲಿ ಜೀವನು ಯಾವ ಸ್ಥಿತಿಯಲ್ಲಿರುವನು? ಅವನು ಈ ಲೋಕದಲ್ಲಿಯೋ ಅದೃಶ್ಯನಾಗಿರುವನೋ ಅಥವಾ ಅನ್ಯ ಲೋಕಗಳಿಗೆ ಗಮನ ಮಾಡುವನೋ? ಅವನ ಈ ಅವಧಿಯ ವ್ಯವಹಾರ ಕ್ಷೇತ್ರವು ಬೇರೆಯಾಗಿದ್ದರೆ, ಅವನು ಅನ್ಯಲೋಕಗಳಿಗೆ ಹೋಗುತ್ತಿದ್ದರೆ, ಈ ಪರಲೋಕ ಗಮನದ ತತ್ವವು ಅಥವಾ ದಾರಿಯು ಯಾವುದು? ಇದರಲ್ಲಿ ಬರುವ ಮುಂದಿನ ಪ್ರಶ್ನೆಯು ಜೀವನ ಉತ್ಕ್ರಾಂತಿಯ ಕ್ರಮದ ಬಗ್ಗೆ. ಈ ಉತ್ಕ್ರಾಂತಿಯ ಮಾರ್ಗದಲ್ಲಿ ಅವನು ಪುನಃ ಪುನಃ ತಾಳುತ್ತಿದ್ದ ಜನ್ಮಗಳಲ್ಲಿ, ಅಥವಾ ಅವನ ಸಾಹಸದ ಬೇರೆ ಬೇರೆ ರಂಗಭೂಮಿಗಳಲ್ಲಿ ಯಾವ ಮಾರ್ಪಾಟನ್ನು ಅಥವಾ ಬದಲಾವಣೆಯನ್ನು ಜೀವನು ಹೊಂದುತ್ತಾನೆ? ಇವೇ ಮೊದಲಾದ ಪ್ರಶ್ನೆಗಳು.

ಈ ಸವ್ಯಸ್ಥೂಲ ಜಗತ್ತು ಪ್ರಕಟವಾದ ವಿಶ್ವದ ಒಂದೇ ರೂಪವಾಗಿದ್ದರೆ, ಅಥವಾ ಈ ಜಗತ್ತು ಅನ್ಯಲೋಕಗಳಿಗೆ ಯಾವ ಪ್ರಕಾರದಿಂದಲೂ ಸಂಬಂಧವಿಲ್ಲದ ಸ್ವತಂತ್ರ ವಿಶ್ವದ ಭಾಗವಾಗಿದ್ದರೆ, ಉತ್ಕ್ರಾಂತಿಯ ಸಾಧನವಾದ ಪುನರ್ಜನ್ಮವು ಒಂದು ಸ್ಥೂಲ ದೇಹದಿಂದ ಕೂಡಲೇ ಮತ್ತೊಂದು ಸ್ಥೂಲ ದೇಹದಲ್ಲಿ ಆಗಬೇಕಾಗಿತ್ತು. ಮತ್ತು ಮರಣದ ನಂತರ ಏನೂ ಕಾಲಾವಧಿಯಿಲ್ಲದೆ, ಕೂಡಲೇ ಮತ್ತೊಂದು ದೇಹದಲ್ಲಿ ಜನ್ಮತಾಳಬೇಕಾಗಿತ್ತು. ಹೀಗಿದ್ದಲ್ಲಿ ಜೀವನ ಉತ್ಕ್ರಮದ ಮಾರ್ಗವು ಜೀವಾತ್ಮನ ಮೇಲಿನ ಬಲುಮೆ ಅಥವಾ ಬಲಾತ್ಕಾರದಿಂದುಂಟಾದ ಕಾಲಖಂಡವಿಲ್ಲದ ಯಾಂತ್ರಿಕ ಜಡದೇಹಗಳ ಒಂದು ಸಾಲಾಗುತ್ತಿತ್ತು. ಇಂಜನಿನಿಂದ ಎಳೆಯಲ್ಪಡುವ ಉಗಿಬಂಡಿಗಳ ಡಬ್ಬಿಗಳ ಸಾಲಿನಂತೆ, ಈ ಜನ್ಮಗಳ ಸಾಲು ಉತ್ಕ್ರಾಂತಿಯ ಇಂಜಿನ ಶಕ್ತಿಯಿಂದ, ಯಾವ ಸ್ವಾತಂತ್ರ್ಯವೂ ಜನ್ಮದ ಬಗ್ಗೆ ಆತ್ಮನಿಗೆ ಉಳಿಯದೆ, ಎಳೆಯಲ್ಪಡುತ್ತಿತ್ತು. ಆತ್ಮನಿಗೆ ಜಡದೇಹದಿಂದ ಎಂದೂ ಬಿಡುಗಡೆ ಇರುತ್ತಿರಲಿಲ್ಲ ಅದು ತನ್ನ ಪ್ರಕಟನೆಯ ಕೇವಲ ಒಂದೇ ಸಾಧನವಾದ ಈ ಜಡ ದೇಹವನ್ನು ಅವಲಂಬಿಸಿ ತನ್ನ ಜೀವನವನ್ನು ಸಾಗಿಸಬೇಕಾಗಿತ್ತು. ಆದರೆ ಜೀವನಿಗೆ ಮರಣದ ನಂತರ ಬೇರೆ ಬೇರೆ ಪಾತಳಿಯ ಲೋಕಗಳಲ್ಲಿ ಅಸ್ತಿತ್ವವು ಇರುತ್ತದೆಂದೂ,

ಪುನಃ ಜನ್ಮ ತಾಳುವ ಮೊದಲು ಮೊದಲಿನ ಜನ್ಮದ ಪರಿಣಾಮವಾಗಿ ಮತ್ತು ಮುಂದಿನ ಈ ಭೂಮಿಯಲ್ಲಿಯ ಜನ್ಮಕ್ಕೆ ಕಾರಣವಾಗಿ ಇದ್ದ ಬೇರೊಂದು ಸ್ಥಿತಿಯು ಜೀವನಿಗೆ ಇರುತ್ತದೆಂದೂ ನಾವು ಹಿಂದಿನ ಪ್ರಕರಣದಲ್ಲಿ ನೋಡಿದ್ದೇವೆ. ಹಾಗೂ ಇತರ ಲೋಕಗಳು ನಮ್ಮ ಜಗತ್ತಿಗೆ ಸಮಕಾಲೀನವಾಗಿಯಾದರೂ ಉತ್ಪನ್ನವಾಗಿರಲಿಕ್ಕೇ ಬೇಕೆಂದೂ, ಈ ಎಲ್ಲ ಲೋಕಗಳು ಒಂದೇ ಜಟಿಲವಾದ ವಿಶ್ವದ ಬೇರೆ ಬೇರೆ ಭಾಗಗಳೆಂದೂ, ಊರ್ಧ್ವಲೋಕಗಳು ಈ ಜಗತ್ತಿನ ಮೇಲೆ ತಮ್ಮ ಕ್ರಿಯೆಯಿಂದ ಪರಿಣಾಮವನ್ನುಂಟು ಮಾಡುವವೆಂದೂ, ಊರ್ಧ್ವಲೋಕಗಳ ಕ್ರಿಯೆ ಪ್ರತಿಕ್ರಿಯೆಗಳನ್ನು ಸ್ವೀಕರಿಸಿ ಈ ಲೋಕವು ಒಂದು ಗುಪ್ತ ವ್ಯವಹಾರವನ್ನು ಆ ಲೋಕಗಳ ಸಂಗಡ ಸತತವಾಗಿ ನಡೆಸಿರುತ್ತದೆಂದೂ ನಾವು ಮನಗಂಡಿದ್ದೇವೆ. ಇದಲ್ಲದೆ, ಮನುಷ್ಯನು ಈ ಬೇರೆ ಬೇರೆ ಪಾತಳಿಗಳಲ್ಲಿಯ ಲೋಕಗಳನ್ನು ತಿಳಿದು, ತನ್ನ ಜ್ಞಾನ ಕರಣಗಳನ್ನು ಈ ದೇಹದಲ್ಲಿರುವಾಗಲೇ, ಈ ಲೋಕಗಳಲ್ಲಿ ಪ್ರವೇಶಿಸಿ ಅವುಗಳ ಗುಟ್ಟನ್ನು ಅರಿಯಬಹುದೆಂಬುದನ್ನೂ ನಾವು ನಿಶ್ಚಯಿಸಿದ್ದೇವೆ. ಆದ್ದರಿಂದ ಈಗ ನಾವು ಈ ದೇಹದ ಬಂಧನವು ನಷ್ಟವಾದ ನಂತರ, ಈ ಲೋಕಗಳಲ್ಲಿ ಅವನು ಪೂರ್ಣತೆಯಿಂದ ಪ್ರವೇಶಿಸಬಹುದೆಂಬ ಸಂಗತಿಯನ್ನು ಸಹಜವಾಗಿ ಊಹಿಸಬಹುದು. ಆದರೆ ಮನುಷ್ಯನು ಈ ಜೀವಿತದಲ್ಲಿಯೇ ಜ್ಞಾನ ಕಿರಣಗಳನ್ನು ಪರಲೋಕಗಳಲ್ಲಿ ಪ್ರವೇಶಗೊಳಿಸುವ ಶಕ್ತಿಯನ್ನು ಬೆಳೆಸಿದ್ದರೆ ಮಾತ್ರ, ಮರಣೋತ್ತರ ಅವನಿಗೆ ಈ ಲೋಕಗಳು ಪ್ರತ್ಯಕ್ಷವಾಗುವವೆಂಬುದನ್ನು ನಾವು ಲಕ್ಷದಲ್ಲಿಡತಕ್ಕದ್ದು. ಯಾಕೆಂದರೆ ಮನುಷ್ಯ ಮಟ್ಟದ ಆರಂಭದಲ್ಲಿ ಜೀವನ ಪ್ರಗತಿಯು ಸಾಕಷ್ಟು ಆಗಿರುವದಿಲ್ಲ. ಅವನ ಪ್ರಾಣ ಮತ್ತು ಬುದ್ಧಿ ತತ್ವಗಳು, ಜಾಗೃತಾವಸ್ಥೆಗೆ ಬಂದಾಗ್ಯೂ ಅವು ಇನ್ನೂ ತಮತಮಗೆ ಅನುಗುಣವಾದ ಲೋಕಗಳಲ್ಲಿ ವಾಸಿಸುವಷ್ಟು ಸ್ವತಂತ್ರತೆಯನ್ನೂ ಪ್ರಾಬಲ್ಯವನ್ನೂ ಹೊಂದಿರುವದಿಲ್ಲ. ಆದ್ದರಿಂದ ಜೀವನಿಗೆ ಈ ದೇಹವು ನಷ್ಟವಾದನಂತರ ಮತ್ತೊಂದು ಸ್ಥೂಲ ದೇಹವನ್ನೇ ಪ್ರವೇಶಿಸಬೇಕಾಗುವದು. ಸ್ಥೂಲ ಪಂಚಭೂತಗಳ ಬಂಧನಗಳಲ್ಲಿ ಬಂಧಿಸಲ್ಪಟ್ಟ ಜೀವನ ಪ್ರಗತಿಯ ಈ ಮಟ್ಟದಲ್ಲಿ ಅವನಿಗೆ ಇಷ್ಟೇ ಶಕ್ಯವಿದೆ.

ಒಂದು ಜನ್ಮದಿಂದ ಮತ್ತೊಂದು ಜನ್ಮದ ವರೆಗಿನ ಮಧ್ಯದ ಕಾಲದಲ್ಲಿ ಕೆಲವು ಕಾಲದ ಅನಾಯಕ ಸ್ಥಿತಿಯೂ ಮತ್ತು ಪರಲೋಕ ಗಮನದ ಅವಶ್ಯಕತೆಯೂ ಎರಡು ಕಾರಣಗಳಿಂದ ಇರುತ್ತವೆ. ಮನುಷ್ಯನ ಮನೋಮಯ ಮತ್ತು ಪ್ರಾಣಮಯ ಕೋಶಗಳು ಅನುಕ್ರಮವಾಗಿ ಮನಸ್ತತ್ವ ಪ್ರಧಾನ ಮತ್ತು ಪ್ರಾಣತತ್ವ ಪ್ರಧಾನ ಲೋಕಗಳಿಂದ ಆಕರ್ಷಿಸಲ್ಪಡುತ್ತವೆ ಯಾಕಂದರೆ ಒಂದು ವಸ್ತುವಿನ ಪರಿಣಾಮವು ಅದಕ್ಕೆ ಸಮಾನವಾದ ತತ್ವ ಘಟಿತ ವಸ್ತುವಿನ ಮೇಲೆ ಆಗಬೇಕೆಂಬ ನಿಯಮವು ಅಬಾಧಿತವಾಗಿದೆ. ಮತ್ತು ಇಲ್ಲಿಯ ಜೀವನದಲ್ಲಿ ಪಡೆದ ಅನುಭವವನ್ನು ಆತ್ಮಸಾತ್-ಜೀರ್ಣ ಮಾಡಿಕೊಳ್ಳಲಿಕ್ಕೆ ಕೆಲವು ಕಾಲಾವಧಿಯು ಬೇಕು ಈ ಜೀವನದಲ್ಲಿಯ ಕಟು ಅಥವಾ ತಾತ್ವಿಕವಲ್ಲದ ಅನುಭವವನ್ನು ಬಿಡುವದು ಮತ್ತು ಹೊಸ ಅನುಭವವನ್ನು ಹೊಂದುವದಕ್ಕೋಸ್ಕರ ಮುಂದಿನ ದೇಹಧಾರಣೆಯ ತಯಾರಿಯನ್ನು ಮಾಡುವದು ಅವಶ್ಯವಿದೆ ಆದರೆ ಪಶುತುಲ್ಯ ದೇಹಾತ್ಮ ಭಾವನೆಯು ದೃಢವಾಗಿದ್ದ ಮನುಷ್ಯನ ಸೂಕ್ಷ್ಮ ದೇಹಗಳ ಮೇಲೆ ಅವಕ್ಕೆ ಸಮಾನತತ್ವಘಟಿತ ಲೋಕಗಳ ಕ್ರಿಯೆಯೂ ಮತ್ತು ಆಕರ್ಷಣದ ಪರಿಣಾಮವೂ ಯೋಗ್ಯವಾಗಿ ಆಗುವದಿಲ್ಲ. ಅರ್ಥಾತ್ ಈ ಆಕರ್ಷಣದ ಉಪಯೋಗವಾಗುವದಿಲ್ಲ. ಈ ಸೂಕ್ಷ್ಮ ಕೋಶಗಳು ಸಾಕಷ್ಟು ಬೆಳವಣಿಗೆಯನ್ನು ಹೊಂದಿದ ಹೊರತ, ಅನ್ಯ ಲೋಕಗಳ ಕ್ರಿಯೆಗೆ ಪ್ರತಿಕ್ರಿಯೆಯು ಈ ಕೋಶಗಳಿಂದ ಆಗುವದಿಲ್ಲ. ಆದ್ದರಿಂದ ಇಂಥ ಜೀವನಿಗೆ ಪರಲೋಕ ಗಮನವೂ ಸಂಭವಿಸುವದಿಲ್ಲ ಈ ಮನುಷ್ಯನ ಅನುಭವವು ತೀರ ಹೀನ ತರಗತಿಯದೂ ಪ್ರಾಥಮಿಕ ಗ್ರಾಮ್ಯ ಸ್ವರೂಪದ್ದೂ ಇರುವ ಕಾರಣ ಅದರಲ್ಲಿ ಅರಗಿಸಿಕೊಂಡು ಆತ್ಮಸಾತ್ ಮಾಡಿಕೊಳ್ಳತಕ್ಕದ್ದೇನೂ ಇರುವದಿಲ್ಲ. ಆ ಜೀವನ ಸ್ವಭಾವವು ಇನ್ನೂ ಅಪರಿಪಕ್ವವಿರುವ ಕಾರಣ ಅದಕ್ಕೆ ದಿವ್ಯ ಅನುಭವವನ್ನು ಗ್ರಹಿಸಿ ಅದನ್ನು ಇಟ್ಟುಕೊಳ್ಳುವ ಸಾಮರ್ಥ್ಯವಿರುವದಿಲ್ಲ ಸೂಕ್ಷ್ಮ ಶರೀರಗಳ ವಿಕಾಸವು ಇನ್ನೂ ಸಾಕಷ್ಟು ಆಗಿರದ ಕಾರಣ ಅವು ಜೀವನನ್ನು ಎತ್ತಿಕೊಂಡು ಸೂಕ್ಷ್ಮಲೋಕಗಳಿಗೆ ಹೋಗಲಾರವು. ಈ ಅಪಕ್ವ ಜೀವನ ಸಂಬಂಧವು ಈ ಪ್ರಕಾರ ಅನ್ಯಲೋಕಗಳಿಗೆ ಆಗದರಿಂದ ಅವನ ಜನ್ಮವು ಪುನಃಪುನಃ ಈ ಸ್ಥೂಲ ಜಗತ್ತಿನಲ್ಲಿಯೇ ಆಗಬೇಕಾ

ಗುತ್ತದೆ. ಇಂಥ ಜೀವಗಳ ಬಗ್ಗೆ ಪರಲೋಕದ ಅಸ್ತಿತ್ವವೂ, ಪರಲೋಕ ಗಮನವೂ ಪುನರ್ಜನ್ಮ ಕಲ್ಪನೆಯ ಒಂದು ಅವಶ್ಯವಾದ ಭಾಗವಾಗದು. ಪರಲೋಕ ಗಮನವು ಅವಶ್ಯವಿದ್ದ ಮತ್ತೊಂದು ಪ್ರಮೇಯವನ್ನು ನಾವು ಕಲ್ಪಿಸಬಹುದು. ಈ ಪ್ರಮೇಯದ ಪ್ರಕಾರ ಮರಣೋತ್ತರ ತತ್‍ಕ್ಷಣ ಪುನರ್ಜನ್ಮದ ಅವಶ್ಯಕತೆ ಇರುವದಿಲ್ಲ. ಹೊಸ ಅನುಭವವನ್ನು ಹೊಂದು ವದಕ್ಕೋಸ್ಕರ ಜೀವನಿಗೆ ಪುನಃ ದೇಹಧಾರಣದ ತಯಾರಿಯನ್ನು ಮಾಡ ಲಿಕ್ಕೆ ಕೆಲವು ಕಾಲ ಬೇಕೆಂಬುದೇ ಈ ಪ್ರಮೇಯವು ಈ ಎರಡೂ ಪ್ರಮೇಯಗಳ ಒಂದು ಮಧ್ಯದ ಕಲ್ಪನೆಯನ್ನೂ ನಾವು ಮಾಡಬಹುದು. ಪರಲೋಕ ಗಮನಕ್ಕೆ ಜೀವನು ಅಪಕ್ವವಿರುವ ವರೆಗೆ ಅವನಿಗೆ ಈ ಲೋಕ ದಲ್ಲಿಯೇ ಜನ್ಮವು ಸಂಭವಿಸಬಹುದು. ಮತ್ತು ಅವನು ಪಕ್ವ ಸ್ಥಿತಿಗೆ ಮುಟ್ಟಿದ ನಂತರ ಮರಣೋತ್ತರ ಪರಲೋಕ ಗಮನವು ಸಂಭವಿಸಬಹುದು. ಮತ್ತೊಂದು ನಾಲ್ಕನೆಯ ಪ್ರಕಾರದ ಕಲ್ಪನೆಯೂ ಸಂಭವನೀಯವಿದೆ. ಜೀವನ ಆತ್ಮಭಾವನೆಯು ಬಹಳ ಪ್ರಜ್ವಲಿತವಾದಲ್ಲಿ ಪರಲೋಕ ಗಮನ ದಿಂದ ವ್ಯರ್ಥ ಕಾಲಹರಣ ಮಾಡದೆ, ಮುಂದಿನ ಆತ್ಮೀಯ ಪ್ರಗತಿಯನ್ನು ಹೊಂದುವದಕ್ಕೋಸ್ಕರ ಕೂಡಲೇ ಯೋಗಭ್ರಷ್ಟನಾದ ಈ ಜೀವನು ಈ ಪ್ರಗತಿಗೆ ಅನುಕೂಲವಾದ ಪರಿಸ್ಥಿತಿಯಲ್ಲಿ ( शुचीना श्रीमता गेहे, अथवा योगिनामेव कुले ) ಪವಿತ್ರರಾದ ಗರ್ಭಶ್ರೀಮಂತರ ಮನೆಯಲ್ಲಿ ಅಥವಾ ಯೋಗಿಗಳ ಕುಲದಲ್ಲಿಯೇ ಜನ್ಮವೆತ್ತಬಹುದು.

ಪುನರ್ಜನ್ಮದ ತಾತ್ವಿಕ ಭೂಮಿಕೆಯನ್ನು ಸ್ವೀಕಾರ ಮಾಡುವ ಕೆಲವು ಧಾರ್ಮಿಕರ ಕಲ್ಪನೆಗಳಲ್ಲಿ ಒಂದಕ್ಕೊಂದು ವಿಸಂಗತವಾದ ಭಾವ ನೆಯು ಇದ್ದದ್ದು ಕಂಡುಬರುತ್ತದೆ. ಈ ಭಾವನೆಗಳನ್ನು ಅವರು ಸುಸಂಗತ ವಿಚಾರದಿಂದ ದೃಢಪಡಿಸಿಕೊಂಡಂತೆ ಕಾಣುವದಿಲ್ಲ ಈ ದೇಹವು ನಷ್ಟವಾದ ನಂತರ ಮಧ್ಯದಲ್ಲಿ ಏನೂ ಕಾಲಾವಧಿ ಇಲ್ಲದೆ ಅಥವಾ ಅಲ್ಪ ಕಾಲಾವಧಿಯಲ್ಲಿಯೇ ಜೀವನು ಮತ್ತೊಂದು ದೇಹವನ್ನು ಧರಿಸುವನೆಂಬು ಒಂದು ಅಸ್ಪಷ್ಟವಾದ ವಿಚಾರಸರಣಿ ಇರುತ್ತದೆ. ಮನುಷ್ಯನು ಮೃತನಾದ ನಂತರ, ಈ ಲೋಕದಲ್ಲಿ ಮಾಡಿದ ಪಾಪ ಪುಣ್ಯಗಳಿಗನುಸಾರವಾಗಿ ನರಕ

ಅಥವಾ ಸ್ವರ್ಗಗಳಿಗೆ ಅವನು ಹೋಗುವನೆಂದು ಕೆಲವರ ಕಲ್ಪನೆಯಿದೆ. ಈ ಸಂಚಿತ ಪಾಪ ಪುಣ್ಯಗಳನ್ನು ಭೋಗಿಸಿ, ಅವು ನಷ್ಟವಾದ ಮೇಲೆಯೇ ಅವನು ಪುನಃ ಈ ಲೋಕಕ್ಕೆ ದೇಹಧಾರಣ ಮಾಡುವ ಬಗ್ಗೆ ಬರುವನೆಂದೂ ತಿಳಿವಳಿಕೆ ಇದೆ. ಜೀವನು ಮುಟ್ಟಿದ ಉತ್ಕ್ರಾಂತಿಯು ಕೆಲವು ಮಟ್ಟದಲ್ಲಿ ಮಾತ್ರ ಈ ಪ್ರಕಾರದ ಅಲೆದಾಟವು ಇರಬಹುದೆಂದು ಒಪ್ಪಿದರೆ ಮಾತ್ರ ಇಂಥ ವಿಚಾರಗಳಲ್ಲಿ ಕಂಡುಬರುವ ವಿಸಂಗತಿಯನ್ನು ಇಲ್ಲದಂತೆ ಮಾಡಬಹುದು. ಜೀವನು ಅನುಭವಿಸಬೇಕಾದ ಪುನರ್ಜನ್ಮಗಳ ಪ್ರಕಾರವು, ಈ ಲೋಕವನ್ನು ಬಿಟ್ಟು ಪರಲೋಕಗಳಿಗೆ ಹೋಗುವ ಜೀವನ ಯೋಗ್ಯತೆಯು ಮೇಲೆ ಅವಲಂಬಿಸಿರುವದೆಂದು ಹೇಳಬೇಕಾಗುತ್ತದೆ ಈ ಜನರ ಪುನರ್ಜನ್ಮದ ಸರ್ವಸಾಧಾರಣ ಕಲ್ಪನೆಯಲ್ಲಿ ಜೀವನ ವಿಕಾಸದ ಭಾವನೆ ಸ್ಪಷ್ಟವಾಗಿರುವದಿಲ್ಲ ಆದರೆ ಜೀವನು ಪುನರ್ಜನ್ಮದ ಆವಶ್ಯಕತೆಯ ಸೀಮೆಯನ್ನು ಮೀರಿ ಹೋಗುವಷ್ಟು ಬಲವಂತನಾದನಂತರವೇ ಅವನು ತನ್ನ ಅನಾದಿ ಉಗಮಸ್ಥಾನಕ್ಕೆ ಮುಟ್ಟುವನೆಂಬ ಸಂಗತಿಯು ಮೇಲಿಂದ ಅವನ ಪ್ರಗತಿಯ ಕಲ್ಪನೆಯನ್ನು ಮಾಡಬೇಕಾಗುತ್ತದಷ್ಟೆ. ಆದರೆ ಒಂದು ಕ್ರಮವಾದ ತರಗತಿಯುಳ್ಳ ಉತ್ಕ್ರಾಂತಿಯಿಂದ ಜೀವನು ವಿಕಾಸಹೊಂದುತ್ತಿರದಿದ್ದರೆ, ಈ ಅಂತಿಮ ಸ್ಥಾನವನ್ನು ಒಂದು ಅವ್ಯವಸ್ಥಿತವಾದ, ನಾಗಮುರಿಯ, ಅಂಕಡೊಂಕಾದ ಗತಿಯಿಂದಲೂ ಅವನು ಮುಟ್ಟಬಹುದು ಈ ಗತಿಗೆ ಒಂದು ನಿಶ್ಚಿತವಾದ ನಿಯಮವಿರಲಾರದು. ಈ ತೊಡಕಾದ ಪ್ರಶ್ನೆಯನ್ನು ಮನೋವಿಜ್ಞಾನದ ಅಭ್ಯಾಸ ಮತ್ತು ಜ್ಞಾನಿಗಳ ಅನುಭವದಿಂದಲೇ ಬಿಡಿಸಬೇಕಾಗುತ್ತದೆ. ಇಲ್ಲ ನಾವು ವಸ್ತುಸ್ವಭಾವದಲ್ಲಿ ಅಥವಾ ಉತ್ಕ್ರಾಂತಿಯ ಕ್ರಮದಲ್ಲಿ ಸ್ಪಷ್ಟವಾಗುವ ಅಥವಾ ಅಡಗಿರುವ ನಿಯಮಗಳಿಗನುಸಾರವಾಗಿ ಜೀವನ ಮರಣೋತ್ತರ ಗತಿಯ ಸ್ವರೂಪವನ್ನು ನಿಶ್ಚಯಿಸೋಣ ಒಂದು ಸ್ಥೂಲ ದೇಹದಿಂದ ಮತ್ತೊಂದು ಸ್ಥೂಲ ದೇಹಕ್ಕೆ ಕಾಲಾವಧಿ ಇಲ್ಲದೇ ಜೀವನು ಹೋಗುವನೋ ಅಥವಾ ಅವನು ಮನುಷ್ಯಯೋನಿಯಿಂದ ಪುನಃ ಪಶುಜನ್ಮವನ್ನು ತಾಳುವನೋ ಅಥವಾ ಊರ್ಧ್ವಲೋಕಗಳಿಗೆ ಹೋಗಿ ಪುನಃ ಇಲ್ಲಿಗೆ ಬರುವನೋ? ಹೀಗಿದ್ದ ಪಕ್ಷಕ್ಕೆ ಯಾವ ಯಾವ ಪ್ರಸಂಗಗಳಲ್ಲಿ ಅವನ ಈ ಪ್ರಕಾರದ ಗತಿಗಳು ಸಂಭವಿ

ಸತ್ತವೆ. ಎಂಬ ಪ್ರಶ್ನೆಗಳನ್ನು ತರ್ಕ ಸಮ್ಮತವಾದ ವಿಚಾರಸರಣಿಯಿಂದ ಬಿಡಿಸೋಣ.

ಜೀವನ ತಾತ್ವಿಕ ಸ್ವರೂಪದ ದೃಷ್ಟಿಯಿಂದ ಪರಲೋಕ ಗಮನವು ಅತ್ಯವಶ್ಯವಿರುವದೆಂದು ನಾವು ಸಿದ್ಧಮಾಡುವದು ಶಕ್ಯವಿಲ್ಲದಿದ್ದರೂ, ಕೇವಲ ವ್ಯಾವಹಾರಿಕ ದೃಷ್ಟಿಯಿಂದ ಮತ್ತು ಜೀವನ ಕೋಶಭೂತ ಸಾಮಗ್ರಿಗಳ ದೃಷ್ಟಿಯಿಂದ ಪರಲೋಕ ಗಮನವು ಅವಶ್ಯವಿರುವದೆಂದು ಸಿದ್ಧವಾಗುತ್ತದೆ. ಈ ವಿಶ್ವದಲ್ಲಿಯ ಬೇರೆ ಬೇರೆ ಲೋಕಗಳು ಯಾವ ತತ್ವಗಳಿಂದ ರಚಿತನಾಗಿರುವವೋ ಅವು ಒಂದರಲ್ಲೊಂದು ನಿಬಿಡವಾಗಿ ಹೆಣೆಯಲ್ಪಟ್ಟದ್ದರಿಂದ ಅವು ಒಂದರ ಮೇಲೊಂದು ಅವಲಂಬಿಸಿರುತ್ತವೆ ಮತ್ತು ಅವು ಆತ್ಮ ವಿಕಾಸಕ್ಕೆ ಅಖಂಡವಾದ ಗತಿಯನ್ನುಂಟು ಮಾಡುತ್ತವೆ. ಈ ಮೇಲಕ್ಕೇರುತ್ತಿರುವ ಜೀವನು ತನ್ನ ಮನಷ್ಯ ಜೀವನದಲ್ಲಿಯ ವಿಕಾಸದ ಕೊನೆಯನ್ನು ಮುಟ್ಟಲಿಕ್ಕೆ ಮನುಷ್ಯ ಜನ್ಮವನ್ನು ಪುನಃ ಪುನಃ ತಾಳಬೇಕಾಗುವದೆಂಬ ಶ್ರದ್ಧೆಯು ನಮ್ಮ ತರ್ಕ ಬುದ್ಧಿಗೆ ಸರಿಯಾದದ್ದೇ ಇದೆ. ಈ ಸ್ಥೂಲ ಭೌತಿಕ ಜಗತ್ತಿನ ಉತ್ಕ್ರಾಂತಿಯಲ್ಲಿ ಸಿಕ್ಕ ಜೀವನು ವೃಕ್ಷ, ಪಶು, ಪಕ್ಷ್ಯಾದಿ ಜೀವನಗಳಿಂದ ಏರುತ್ತ ಮನುಷ್ಯ ಜನ್ಮಕ್ಕೆ ಬಂದನಂತರ, ಇದೇ ಜೀವನದಲ್ಲಿ ಆ ಜೀವಕ್ಕೆ ಪುನಃ ಪುನಃ ಜನ್ಮತಾಳಬೇಕಾಗುವದೆಂಬ ಬಗ್ಗೆ ಬಲವತ್ತರವಾದ ಕಾರಣಗಳಿವೆ ಈ ಮನುಷ್ಯ ಮಟ್ಟದಲ್ಲಿ ಜೀವನು ಸಾಧಿಸಬೇಕಾದ ಪ್ರಗತಿಯು ಬಹು ಜಟಿಲವಾದದ್ದಿದ್ದು ಅವನಿಗೆ ತನ್ನ ಗುರಿಯನ್ನು ಮುಟ್ಟಲಿಕ್ಕೆ ಒಂದೇ ಮನುಷ್ಯ ಜನ್ಮವು ಸಾಕಾಗದೆಂಬುದು ಸ್ಪಷ್ಟವಿದೆ ಮನುಷ್ಯನ ಪ್ರಾಥಮಿಕ ಸ್ಥಿತಿಯಲ್ಲಿ ತಾಳಬೇಕಾಗುತ್ತಿದ್ದ ಜನ್ಮಗಳು, ಒಂದರ ಹಿಂದೊಂದು, ಮಧ್ಯದಲ್ಲಿ ಕಾಲಾವಧಿಯಿಲ್ಲದೆ ಈ ಜಗತ್ತಿನಲ್ಲಿಯೇ ಸ್ಥೂಲ ದೇಹವನ್ನು ಧಾರಣಮಾಡಿ ಆಗತಕ್ಕದ್ದೆಂಬುದಕ್ಕೂ ಕಾರಣಗಳಿವೆ. ಈ ಸ್ಥೂಲ ದೇಹದಲ್ಲಿಯ ಪರಮಾಣುಗಳನ್ನು ಒಟ್ಟಾಗಿ ಹಿಡಿದ ಪ್ರಾಣಶಕ್ತಿಯು ಅಳಿದು ಅಥವಾ ಅದು ಹೊರಗೆ ಹೋಗಿ ಈ ದೇಹಪಾತವಾದ ನಂತರ, ಅಂದರೆ ಮರಣೋತ್ತರ ಜೀವನು ಕೂಡಲೇ ಧರಿಸಬೇಕಾದ ಮತ್ತೊಂದು ದೇಹವು, ಈ ಮನುಷ್ಯನ

ಆದ್ಯ ಸ್ಥಿತಿಯಲ್ಲಿ, ಮತ್ತೊಂದು ಮನುಷ್ಯ ದೇಹವೇ ಇರಬೇಕಾಗುವದೆ ಬ ಬಗ್ಗೆ ಉತ್ಕ್ರಾಂತಿಯು ಯಾವ ನಿಯಮವು ಕಾರಣವಾಗಿದೆ? ಮನುಷ್ಯನ ಮನೋಮಯ ಕೋಶವು (ಮನುಷ್ಯನ ಆತ್ಮತತ್ವವಲ್ಲ ಆದರೆ ಈ ಆತ್ಮನು ಸೃಷ್ಟಿಯಲ್ಲಿ ಗರಿಸಿದ ಸ್ಥೂಲ ದೇಹದೊಳಗಿನ ಸಂಸ್ಕಾರ ಮತ್ತು ವಿಚಾರ ಗಳಿಂದ ಕೂಡಿದ ಒಂದು ಸೂಕ್ಷ್ಮ ಆವರಣ ಅಥವಾ ಸೂಕ್ಷ್ಮ ಚೀಲ) ನಾಕಷ್ಟು ವಿಕಾಸ ಹೊಂದುವ ವರೆಗೆ ಮನುಷ್ಯ ದೇಹದ ಅವಶ್ಯಕತೆ ಇದ್ದೇ ಇರುತ್ತದೆ. ಈ ಸ್ಥಿತಿಯಲ್ಲಿ ಮನೋಮಯ ಕೋಶವು ಈ ಜೀವನದಲ್ಲಿಯ ಮನಸ್ಸು ಪ್ರಾಣ ಮತ್ತು ದೇಹಗಳ ವಿನಾ ಸ್ವತಂತ್ರವಾಗಿ ಇರುವಷ್ಟು ಬೆಳೆದಿರುವದಿಲ್ಲ. ತನ್ನ ಸ್ವತಂತ್ರ ವ್ಯಕ್ತಿತ್ವವನ್ನು ಪ್ರಕಟ ಮಾಡುವಷ್ಟು ಅದು ಬಲಿತಿರುವದಿಲ್ಲ. ಹಿಂದಿನ ಮನಸ್ಸು, ಪ್ರಾಣ ಮತ್ತು ದೇಹಗಳ ಸಂಸ್ಕಾರಗಳು ಇನ್ನೂ ದೃಢಮೂಲವಾಗಿದ್ದು ಆ ಜೀವನನ್ನು ಅವು ಪುನಃ ಮತ್ತೊಂದು ಸ್ಥೂಲ ದೇಹಕ್ಕೆ ಎಳೆಯುತ್ತವೆ. ಮನುಷ್ಯತ್ವವನ್ನು ಪಡೆಯು ವಷ್ಟು ಬೆಳವಣಿಗೆ ಹೊಂದಿದ ಜೀವದಲ್ಲಿ ನಾವು ಮೇಲೆ ಹೇಳಿದ ನ್ಯೂನತೆ ಗಳು ಉಳಿದಿರುತ್ತವೆಂದು ಹೇಳುವದು ನ್ಯಾಯವಾಗಬಹುದೋ ಎಂಬ ಬಗ್ಗೆ ಕೆಲವರಿಗೆ ಸಂಶಯ ಉಂಟಾಗಬಹುದು ಮನುಷ್ಯಮಟ್ಟದ ತೀರ ಕೆಳಗಿನ ಪಾತಳಿಯ ವ್ಯಕ್ತಿಯಲ್ಲಿ ಕೂಡ ಸ್ವತಂತ್ರವಾದ ಮನೋರಚನೆಯುಳ್ಳ ಜೀವನದ ಕಾರ್ಯವು ಕಂಡುಬರುತ್ತದೆ. ಈ ಮನಸ್ಸು ಎಷ್ಟೇ ಪರಿಮಿತ ಅಥವಾ ಅಲ್ಪಶಕ್ತಿಯುಳ್ಳದ್ದಿದ್ದರೂ, ಈ ಸ್ಥೂಲ ದೇಹ ಮತ್ತು ಪ್ರಾಣಗಳಲ್ಲಿ ಅದು ಎಷ್ಟೇ ತಾದಾತ್ಮ್ಯ ಹೊಂದಿ ಇದ್ದಾಗ್ಯೂ, ಈ ಸ್ಥೂಲ ಭಾಗಗಳಿಂದ ಅದು ತನ್ನನ್ನು ಬೇರ್ಪಡಿಸಿಕೊಳ್ಳಲಿಕ್ಕೆ ಎಷ್ಟೇ ಅಸಮರ್ಥ ಅಥವಾ ಇಚ್ಛೆ ಇಲ್ಲದಿದ್ದಾಗ್ಯೂ ಅದರ ಮನೋರಚನೆಯು ಒಂದು ಸ್ವತಂತ್ರ ಮಟ್ಟವನ್ನು ಮುಟ್ಟಿರುತ್ತದೇನೊ ನಿಜ. ಆದರೂ ಅದರ ಇಹಲೋಕದ ಆಸಕ್ತಿಯು, ಆ ಜೀವನನ್ನು ಕೂಡಲೇ ಮತ್ತೊಂದು ಸ್ಥೂಲ ದೇಹಕ್ಕೆ ಎಳೆಯುವಷ್ಟು ಬಲವತ್ತರವಾಗಿರುವವೆಂದು ನಾವು ಕಲ್ಪಿಸಬೇಕಾಗುವದು ಯಾಕಂದರೆ ಈ ಜೀವದ ಮನೋರಚನೆಯು ಸ್ಥೂಲ ದೇಹವನ್ನು ಧಾರಣ ಮಾಡಿದ ಹೊರತು ಕಾರ್ಯಕ್ಷಮವಾಗುವದಿಲ್ಲ ಆದ್ದರಿಂದ ಅದು ಇತರ ಲೋಕ ಗಳಲ್ಲಿಯ ಮೇಲಿನ ಪಾತಳಿಯ ಜೀವನಕ್ಕೆ ಯೋಗ್ಯವಾಗಿರುವದಿಲ್ಲ.

ಇದಲ್ಲದೆ, ಮನುಷ್ಯ ಜೀವನದಲ್ಲಿಯ ಅನುಭವವು ಬಹು ಅಲ್ಪ ಕಾಲದ್ದೂ ಅಪೂರ್ಣವಾದದ್ದೂ ಇದ್ದದ್ದರಿಂದ ಈ ಅನುಭವದ ಪೂರ್ಣತೆಯನ್ನು ಹೊಂದಲಿಕ್ಕೆ, ಅದನ್ನೇ ಮುಂದುವರಿಸಲಿಕ್ಕೆ ಮತ್ತೊಂದು ದೇಹವನ್ನು ಕೂಡಲೇ ಧಾರಣ ಮಾಡುವ ಬಗ್ಗೆ ಜೀವನು ಆತುರನಾಗುತ್ತಾನೆ. ಮತ್ತು ಈ ಬಹುವಿಧ ವಿಷ್ಯದಲ್ಲಿ ಅನೇಕ ಆಕಾಂಕ್ಷೆಗಳೂ, ಪ್ರೇರಣೆಗಳೂ ಜೀವನ ತತ್‌ಕ್ಷಣ ದೇಹಧಾರಣೆಗೆ ಕಾರಣಗಳಾಗಿ ಕೆಲಸಮಾಡುತ್ತಿವೆ. ಉದಾಹರಣಾರ್ಥವಾಗಿ, ಯಾವದಾದರೊಂದು ಐಹಿಕ ಕಾಮನೆಯನ್ನು ಪೂರ್ತಿಗೊಳಿಸಿಕೊಳ್ಳಬೇಕೆಂಬ ಬಲವತ್ತರವಾದ ಆಶೆಯು ಜೀವನ ಅದೇ ವ್ಯಕ್ತಿತ್ವದಿಂದ ಪುನಃ ದೇಹಧಾರಣೆಗೆ ಉದ್ಯುಕ್ತ ನಾಗುತ್ತದೆ. ಆಗದೆ ಜೀವನು ಮನುಷ್ಯ ಯೋನಿಯಲ್ಲಿ ಜನ್ಮ ತಾಳುವ ಯೋಗ್ಯತೆಯನ್ನು ಪಡೆದ ನಂತರ, ಅವನು ಬೇರೊಂದು ವ್ಯಕ್ತಿತ್ವ ಅಥವಾ ಮನೋರಚನೆಯಿಂದ ಹೊಸ ದೇಹದಲ್ಲಿ ಜನ್ಮ ತಾಳುವದು ಸರ್ವಸಾಮಾನ್ಯ ನಿಯಮವಾಗಿದೆ

ಜೀವನು ತನ್ನ ವ್ಯಕ್ತಿತ್ವವನ್ನು ಬೆಳೆಸಿಕೊಂಡು ತನ್ನ ಪ್ರಕೃತಿ ಅಥವಾ ಸ್ವಭಾವ ರಚನೆಯ ಮೇಲೆ ನಾಕಷ್ಟು ನಿಯಂತ್ರಣವನ್ನು ಸಂಪಾದಿಸತಕ್ಕದ್ದಿರುತ್ತದೆ. ಈ ಸ್ಥೂಲ ಜಗತ್ತು ಮತ್ತು ತನ್ನ ಸ್ಥೂಲ ದೇಹ ಇವುಗಳ ಮೇಲೆ ಇದ್ದ ಮೋಹದಿಂದ ಮನುಷ್ಯನು ಪ್ರಾಥಮಿಕ ಸ್ಥಿತಿಯಲ್ಲಿ ಆಕರ್ಷಿಸಲ್ಪಡುತ್ತಾನೆ. ಈ ಆಕರ್ಷಣದಿಂದ ಅವನು ತನ್ನ ಸ್ಥೂಲ ಶರೀರ ಮತ್ತು ಅದರ ಗುಣಗಳಿಂದ ಬದ್ಧನಾಗಿರುತ್ತಾನೆ. ಅವನ ಸೂಕ್ಷ್ಮ ಶರೀರಗಳು ವಿಕಾಸಗೊಂಡಂತೆ ಅವು— ಅವನಲ್ಲಿಯ ಪ್ರಾಣ ಮತ್ತು ಮನಸ್ತತ್ವಗಳು— ಈ ಸ್ಥೂಲ ಜಗತ್ತು ಮತ್ತು ಸ್ಥೂಲ ದೇಹದ ಸಹಾಯದ ಹೊರತು ತಮ್ಮ ಸ್ವತಂತ್ರ ವ್ಯಕ್ತಿತ್ವವನ್ನು ಪ್ರಕಟಗೊಳಿಸುತ್ತವೆ. ಇದರಿಂದ ಜೀವನು ಈ ಮನೋಮಯ ಮತ್ತು ಪ್ರಾಣಮಯ ಕೋಶಗಳಲ್ಲಿ ಸ್ವತಂತ್ರ ಇರಹತ್ತುತ್ತಾನೆ. ಮತ್ತು ಈ ದೇಹವು ನಷ್ಟವಾದರೂ ಅವನು ತನ್ನ ಸಂಗಡ ಈ ಜನ್ಮದಲ್ಲಿ ಮತ್ತು ಅಸಂಖ್ಯ ಜನ್ಮಗಳಲ್ಲಿ ಮಾಡಿದ ಕರ್ಮಗಳ ಸಂಸ್ಕಾರ ಅಥವಾ ಬೀಜಭೂತ ಕರ್ಮಗಳ ನಿಧಿಯಾದ ತನ್ನ ಮನಸ್ಸನ್ನೂ ಪ್ರಾಣವನ್ನೂ ಸಂಗಡ ತೆಗೆದುಕೊಂಡು ಮುಂದಿನ ಪ್ರವಾಸವನ್ನು ಕ್ರಮಿಸುತ್ತಾನೆ.

ಹೀಗೆ ಆ ಜೀವನ ವ್ಯಕ್ತಿತ್ವವು ಈ ಸ್ಥೂಲ ದೇಹವನ್ನು ಬಿಟ್ಟನಂತರ, ಮನೋಮಯ ಅಥವಾ ಪ್ರಾಣಮಯ ದೇಹಗಳಲ್ಲಿ ವಾಸಿಸುವ ಕಾರಣ ಈ ಎರಡೂ ತತ್ವಗಳು ಸಾಕಷ್ಟು ಬೆಳೆದಿದ್ದರೆ ಮಾತ್ರ ಜೀವನ ಮುಂದಿನ ಪ್ರವಾಸವು ಸುಖಕರವಾಗುತ್ತದೆ ಜೀವನು ಮನೋಮಯ ಅಥವಾ ಪ್ರಾಣಮಯ ಲೋಕಗಳಿಗೆ ಹೋಗಬೇಕಾದರೆ, ಜೀವನಲ್ಲಿಯ ಈ ಎರಡೂ ತತ್ವಗಳು ಒಂದಕ್ಕೊಂದು ತಿಕ್ಕಾಟವಿಲ್ಲದೆ, ಈ ಲೋಕಗಳಲ್ಲಿ ಕೆಲಕಾಲ ವಾಸಿಸುವಷ್ಟು ಬೆಳೆದಿರಬೇಕು. ಜೀವನ ವ್ಯಕ್ತಿತ್ವದ ಈ ಸೂಕ್ಷ್ಮ ಭಾಗಗಳಾದ ಮನೋಮಯ ಮತ್ತು ಪ್ರಾಣಮಯ ಕೋಶಗಳು ಸ್ವತಂತ್ರವಾಗಿ ಕೆಲಕಾಲ ಇರುವಷ್ಟು ಬಲಿಷ್ಠವಿದ್ದರೆ ಮಾತ್ರ, ಈ ಜೀವ ವ್ಯಕ್ತಿಯು ಕೂಡಲೇ ಸ್ಥೂಲ ದೇಹವನ್ನು ಧಾರಣಮಾಡದೆ ಕೆಲಕಾಲ ಇರುವದು ಶಕ್ಯವಿದೆ. ಮತ್ತು ಈ ಜೀವನು ಅನ್ಯಲೋಕಗಳಿಂದ ಆಕರ್ಷಿಸಲ್ಪಡುತ್ತಾನೆ. ಆದರೆ ಈ ಪ್ರಗತಿಯ ಮಟ್ಟದಲ್ಲಿದ್ದ ಜೀವನು ತನ್ನ ಈ ಮಾನಸಿಕ ಮತ್ತು ಪ್ರಾಣ-ಶಕ್ತಿಯ ವ್ಯಕ್ತಿತ್ವವನ್ನು ಅಳಿಯಗೊಡದೆ, ಅದರಲ್ಲಿ ಏನೂ ಹೆಚ್ಚು ಕಡಿಮೆಯಾಗದೆ, ಯಾವ ಪ್ರಕಾರದ ಉತ್ಕ್ರಾಂತಿಯ ಮೇಲಿನ ಮಟ್ಟವನ್ನೂ ಏರದೆ, ಇದ್ದಕ್ಕಿದ್ದಂತೆಯೇ ಪುನಃ ಈ ಲೋಕಕ್ಕೆ ಬರುತ್ತಾನೆ. ಜೀವಾತ್ಮನು ಮನಸ್ಸು ಮತ್ತು ಪ್ರಾಣರೂಪವಾದ ಎರಡೇ ಸೂಕ್ಷ್ಮ ತತ್ವಗಳಿಂದ ಆಗಿರದೆ, ಅವನಲ್ಲಿ ಪೂರಸೆಯುದಾದ ಆತ್ಮತತ್ವವು— ಜೀವನ ಅಚಲವಾದ ಜ್ಞಾನಮಯ ಸತ್ಯಸ್ವರೂಪವು—ಇರುತ್ತದೆ. ಆದ್ದರಿಂದ ಜೀವನು ಈ ಪ್ರಾಣಮಯ ಮತ್ತು ಮನೋಮಯ ಕೋಶ ಅಥವಾ ಸೂಕ್ಷ್ಮ ಶರೀರಗಳ ಮೇಲೂ ಅವಲಂಬಿಸಿರದೆ, ತನ್ನ ನಿಜ ಸ್ವರೂಪವಾದ ಆತ್ಮತತ್ವವನ್ನು ಹೆಚ್ಚು ಬೆಳೆಸಿ, ಈ ಸೂಕ್ಷ್ಮ ಕೋಶಗಳನ್ನೂ ಬಿಟ್ಟು ಹೊಸ ಅನುಭವವನ್ನು ಪಡೆಯಲಿಕ್ಕೆ ಅನ್ಯಲೋಕಗಳಿಗೆ ಹೋಗಬೇಕಾಗುತ್ತದೆ. ಈ ಸ್ಥಿತಿಯಲ್ಲಿ ಜೀವನ ಪ್ರಾಣ ಮತ್ತು ಮನಸ್ಸಿನ ಕೋಶಗಳ ಪುನಃರಚನೆಯಾಗುತ್ತಿದ್ದು ಅವು ಹೆಚ್ಚು ಶುದ್ಧತೆಯನ್ನು ಪಡೆಯುತ್ತವೆ. ಈ ಕೋಶಗಳ ಪುನಃರಚನೆಯನ್ನು ಸ್ಥಿರಗೊಳಿಸುವದಕ್ಕೋಸ್ಕರ ಮರಣ ಮತ್ತು ಮುಂದಿನ ಜನ್ಮ ಇವುಗಳ ಮಧ್ಯ ಸ್ಥಿತಿಯಲ್ಲಿ ಈ ಭೂಲೋಕದ ಹೊರತು ಇದ್ದ ಬೇರೆ ಸೂಕ್ಷ್ಮ ಲೋಕಗಳಲ್ಲಿ ಇರಬೇಕಾಗುವದು. ಯಾಕಂದರೆ ಸ್ಥೂಲ ದೇಹಧಾರಣ

ಮಾಡದ ಜೀವನಿಗೆ ಭೂಲೋಕದಲ್ಲಿ ಚಿರಕಾಲದ ಸ್ಥಾನವು ಇರುವದಿಲ್ಲ. ಆದರೆ ಜೀವನು ಈ ದೇಹದಿಂದ ಉತ್ಕ್ರಮಣ ಹೊಂದುವ ಕಾಲಕ್ಕೆ ಭೌತಿಕ ಸೂಕ್ಷ್ಮ ಪದರಗಳು ಅದರ ಸುತ್ತಲೂ ಇರುವ ಸಂಭವವಿದೆ. ಅವು ಪ್ರಾಣ ಮತ್ತು ಮನಸ್ಸಿನ ಸ್ವರೂಪದವೇ ಆಗಿರುವದರಿಂದ ಅವು ಈ ಸ್ಥೂಲ ದೃಷ್ಟಿಗೆ ಕಾಣುವದಿಲ್ಲ. ಇಂಥ ಸ್ಥಿತಿಯಲ್ಲಿ ಕೆಲಕಾಲ ಮೃತ ಜೀವನು ಈ ಭೂಲೋಕದಲ್ಲಿರಬಹುದು. ಆದರೆ, ಈ ಜಗತ್ತಿನ ಜೀವನದಲ್ಲಿ ಅದಕ್ಕೆ ಬಲವಾದ ಆಸಕ್ತಿ ಇದ್ದ ಹೊರತು, ಇಂಥ ಜೀವಗಳಿಗೂ, ಇಲ್ಲಿ ಬಹುಕಾಲ ಅಲೆದಾಡುತ್ತಿರುವ ಕಾರಣವಿಲ್ಲ. ಮೃತ ಜೀವನಿಗೆ ಈ ಭೌತಿಕ ಜಗತ್ತಿಗಿಂತ ಮೇಲಿರುವ ಸೂಕ್ಷ್ಮ ಲೋಕಗಳೇ ಬಹುಕಾಲದ ವಸತಿಸ್ಥಾನಗಳಾಗಿವೆ. ಇಂಥ ಲೋಕಗಳು ಆ ಜೀವನ ಉತ್ಕ್ರಾಂತವಾದ ಜ್ಞಾನದ ಮಟ್ಟಕ್ಕೆ ಯೋಗ್ಯವಾದವು ಇರಬೇಕು. ಕೇವಲ ಮನೋಮಯ ಮತ್ತು ಪ್ರಾಣಮಯ ಕೋಶಗಳ ಬೆಳವಣಿಗೆಯಾಗಿದ್ದು, ಜೀವನ ಸ್ವರೂಪ ಭೂತ ಆತ್ಮನ ವಿಕಾಸವಾಗಿರದಿದ್ದರೆ, ಅವನು ಈ ಲೋಕಗಳಲ್ಲಿ ಅಲ್ಪಕಾಲ ಮಾತ್ರ ಇದ್ದು ಪುನಃ ಭೂಲೋಕಕ್ಕೆ ಬರುತ್ತಾನೆ. ಆದರೆ ಜೀವನು ತನ್ನ ಮೂಲ ಸ್ವರೂಪವಾದ ಆತ್ಮನ ಪೂರ್ಣ ವಿಕಾಸದಿಂದ, ಆತ್ಮಲೋಕಕ್ಕೆ ಹೋಗಿದ್ದರೆ ಮಾತ್ರ ಪುನಃ ಈ ಭೂಲೋಕಕ್ಕೆ ಬರುವದಿಲ್ಲ

ಜೀವನು ಈ ಸ್ಥೂಲ ಜಗತ್ತನ್ನು ಬಿಟ್ಟನಂತರ ಯಾವ ಊರ್ಧ್ವ ಲೋಕದಲ್ಲಿ ಅವನ ಕೆಲಕಾಲದ ವಸತಿಯು ಸಂಭವಿಸುತ್ತದೆ? ಅಥವಾ ಪರೇತ ಸ್ಥಿತಿಯಲ್ಲಿ ಜೀವನ ಸ್ವಾಭಾವಿಕವಾದ ಇರುವ ಸ್ಥಳ ಯಾವದು? ಮನುಷ್ಯನ ಈ ಸ್ಥೂಲ ದೇಹದ ಸಂಬಂಧವು ಅಥವಾ ಮೋಹವು ಹೋದನಂತರ ಜೀವನಲ್ಲಿ ಕ್ರಿಯಾಶೀಲವಾಗಿದ್ದ ಮನಸ್ಸೇ ಸ್ವಾಭಾವಿಕ ಪ್ರಬಲ ತತ್ತ್ವವಾಗಿರುವ ಕಾರಣ ಮತ್ತು ಮನೋಲೋಕವೇ ಮನಸ್ಸಿನ ಸ್ವಾಭಾವಿಕವಾದ ವಸತಿಸ್ಥಾನವಿರುವದರಿಂದ ಜೀವನು ಮನೋಲೋಕಕ್ಕೆ ಹೋಗಬಹುದೆಂದು ನಾವು ಊಹಿಸಬಹುದು. ಆದರೆ ಜೀವನ ರಚನೆಯಲ್ಲಿ ಇನ್ನೂ ಕೆಲವು ತತ್ತ್ವಗಳು ಇರುವ ಕಾರಣ ಮೇಲಿನ ಊಹೆಯು ಸ್ವಯಂಸಿದ್ಧವಾಗಿ ಬರಲಾರದು. ಯಾಕೆಂದರೆ ಜೀವನು ಕೇವಲ ಮನಸ್ಸೊಂದೇ

ಆಗಿರದೆ ಅವನಲ್ಲಿ ಪ್ರಾಣದ ಭಾಗವೂ ಇದೆ ಮತ್ತು ಅವನ ಮನಸ್ಸಿನ ಹಿಂದೆ ಜೀವ ತತ್ವವಿದ್ದು ಮನಸ್ಸು ಈ ತತ್ವದ ಪ್ರತಿನಿಧಿಯಾಗಿರುತ್ತದೆ. ಇದಲ್ಲದೆ, ಒಂದೇ ತತ್ವದ ಬೇರೆ ಬೇರೆ ಪಾತಳಿಯ ಲೋಕಗಳೂ ಅನೇಕ ಇವೆ. ಆದ್ದರಿಂದ ಜೀವನಿಗೆ ತನ್ನ ನಿಸರ್ಗ ಸಿದ್ಧವಾದ ಲೋಕಕ್ಕೆ ಹೋಗ ಬೇಕಾದರೆ ಈ ಎಲ್ಲ ಪಾತಳಿಗಳಲ್ಲಿ ಹಾಯ್ದು ತನ್ನ ಸ್ವಭಾವಸಿದ್ಧವಾದ ಸ್ಥಳವನ್ನು ಮುಟ್ಟಬೇಕಾಗುತ್ತದೆ. ಹಾಗೂ ಈ ಭೂಲೋಕದಲ್ಲಿಯೇ ಅತಿ ಸೂಕ್ಷ್ಮ ಭೌತಿಕ ಪರಮಾಣುಗಳಿಂದ ತಯಾರಾದ ಪ್ರಾಣ ಮತ್ತು ಮನಸ್ಸಿಗೆ ಹೋಲುವ ಈ ಜಗತ್ತಿನ ಭಾಗವಾದ ಪಾತಳಿಗಳೂ ಇವೆ. ಈ ಸೂಕ್ಷ್ಮ ಭೌತಿಕ ವಲಯಗಳಿಗೂ ಅನ್ಯ ಲೋಕಗಳಿಗೂ ಪ್ರತ್ಯಕ್ಷ ಸಂಬಂಧ ವಿರುವದರಿಂದ ಈ ಸ್ಥೂಲ ಜಗತ್ತಿನ ಸಂಗಡ ಈ ಪಾತಳಿಗಳನ್ನು ದಾಟಿಯೇ ಅನ್ಯ ಲೋಕಗಳ ವ್ಯವಹಾರವು ನಡೆಯಬೇಕಾಗುತ್ತದೆ. ಆದ್ದರಿಂದ ಈ ಮಾನವ ಜೀವನಿಗೆ ಅವನ ಮನಸ್ತತ್ವವು ಇನ್ನೂ ಸೂಕ್ಷ್ಮ ಭೌತಿಕ ಭಾಗ ಗಳಿಂದ ಕೂಡಿದ್ದಿದ್ದರೆ ಈ ಮಧ್ಯಂತರದ ಭೌತಿಕ ವಲಯಗಳಲ್ಲಿ ಅವನು ಸಿಕ್ಕುಬೀಳುವ ಪ್ರಸಂಗಗಳೂ ಇವೆ. ಮತ್ತು ಮುಂದಿನ ಲೋಕಗಳಿಗೆ ಹೋಗಲಿಕ್ಕೆ ಇಲ್ಲಿಯೇ ತಡವಾಗುತ್ತದೆ. ಈ ಭೂಮಿಯಲ್ಲಿ ಮತ್ತೊಂದು ಜನ್ಮವನ್ನು ಇಲ್ಲಿಂದಲೇ ಕೆಲವು ಸಾರೆ ಜೀವನಿಗೆ ತೆಗೆದುಕೊಳ್ಳಬೇಕಾಗ ಬಹುದು. ಆದರೆ ಇದು ಬಹುಶಃ ಸಂಭವನೀಯವಿರುವದಿಲ್ಲ. ಜೀವನ ಸ್ಥೂಲ ಜಗತ್ತಿನ ಆಸಕ್ತಿ ಮತ್ತು ಇಲ್ಲಿಯ ಸ್ಥೂಲ ವ್ಯವಹಾರದ ಹವ್ಯಾಸ ಇವು ಬಹಳ ಬಲವತ್ತರವಿದ್ದು ಜೀವನ ನಿಸರ್ಗಸಿದ್ಧವಾದ ಮುಂದಿನ ಪ್ರಗತಿಯನ್ನು ಅವು ತಡೆಗಟ್ಟುತ್ತಿದ್ದರೆ ಮಾತ್ರ ಇದು ಶಕ್ಯವಿದೆ. ಈ ಅವನ ಮಧ್ಯ ಸ್ಥಿತಿಯೂ ಕೂಡ ಈ ಜಗತ್ತಿನಲ್ಲಿ ಅವನು ಸಂಪಾದಿಸುತ್ತಿದ್ದ ಆತ್ಮ ವಿಕಾಸಕ್ಕೆ ಸಂಬಂಧಿಸಿಯೇ ಇರಬೇಕು. ಈ ಮಧ್ಯ ಸ್ಥಿತಿಯು ಜೀವನ ಸ್ವತಂತ್ರವಾದ ವಾಡಿಕೆಯ ಮರಣೋತ್ತರ ಸ್ಥಾನವಾಗಿರದೆ ಅದೊಂದು ಅವನ ಈ ಜಗತ್ತಿನ ಅನುಭವದ ಭಾಗವೇ ಆಗಿರುತ್ತದೆ. ಈ ಸ್ಥಾನವೂ ಜೀವನ ಈ ಭೂಮಿಯಲ್ಲಿಯ ಜೀವನದ ಮುಖ್ಯ ಉದ್ದೇಶವಾದ ಆತ್ಮೋ- ನ್ನತಿಯ ಒಂದು ಸಾಧನವೇ ಆಗಿರುತ್ತದೆ. ವಿಶ್ವರಚನೆಯಲ್ಲಿ ಈ ಭೂಮಿಯು ಒಂದು ಸುಸಂಗತವಾದ ಭಾಗವಾಗಿದ್ದು ಅದು ಮೇಲಿನ ಭುವನಗಳ ಸಂಗಡ

ಒಂದು ಪ್ರಕಾರದ ಸಂಬಂಧವನ್ನುಂಟುಮಾಡಿಕೊಂಡಿರುತ್ತದೆ. ಈ ಸಂಬಂಧದಿಂದಲೇ ಜೀವನ ಮರಣ ಮತ್ತು ಪುನರ್ಜನ್ಮಗಳ ಮಧ್ಯಂತರ ಸ್ಥಿತಿಯಲ್ಲಿಯೂ ಅವು ಜೀವನ ಮೇಲೆ ಪರಿಣಾಮವನ್ನುಂಟು ಮಾಡುತ್ತವೆ. ಈ ಭೂಮಿಯ ಜೀವನದಲ್ಲಿ ಮನುಷ್ಯನು ಪ್ರಯತ್ನಪೂರ್ವಕ ಇಟ್ಟುಕೊಂಡ ಈ ಸಂಬಂಧದ ಪರಿಣಾಮದಿಂದಲೇ ಅವನ ಮರಣೋತ್ತರ ಗಮನದ ದಿಕ್ಕೂ, ಅವನ ಪರೇತ (ಮರಣೋತ್ತರ) ಸ್ಥಿತಿಯಲ್ಲಿ ವಾಸಿಸಬೇಕಾದ ಲೋಕಗಳೂ, ಅಲ್ಲಿ ವಾಸಿಸುವ ಕಾಲವೂ, ಅವನ ಅನುಭವದ ಸ್ವರೂಪವೂ ನಿಶ್ಚಿತವಾಗುತ್ತದೆ.

ಅದೇ ಪ್ರಕಾರ ಮನುಷ್ಯನು ಈ ಲೋಕದಲ್ಲಿ ಯಾವದೊಂದು ವಿಶಿಷ್ಟ ಪ್ರಕಾರದ ಅಂಥ ವಿಶ್ವಾಸವನ್ನು ಇಟ್ಟಿದ್ದನೋ ಅಥವಾ ಯಾವ ಪ್ರಕಾರದ ಆಕಾಂಕ್ಷೆಯನ್ನು ಮಾಡಿದ್ದನೋ ಅದೇ ಪ್ರಕಾರದ ಶ್ರದ್ಧೆ ಅಥವಾ ಆಕಾಂಕ್ಷೆಗಳಿಗನುಸರಿಸಿ ಅವನು ಅನ್ಯ ಲೋಕಗಳಿಗೆ ಹೊಂದಿದ ಉಪಲೋಕಗಳಲ್ಲಿಯೂ ಕಾಲಹರಣಮಾಡಬಹುದು. ಮನುಷ್ಯನು ಸೂಕ್ಷ್ಮ ಸ್ವರ್ಗಾದಿ ಲೋಕಗಳ ಮನೋರಾಜ್ಯವನ್ನು ಈ ಲೋಕದಲ್ಲಿರುವಾಗಲೇ ಮಾಡುತ್ತಿರುವನೆಂದು ನಾವು ಹಿಂದೆ ನೋಡಿದ್ದೇವೆ. ಕೆಲವು ಸಾರೆ ಅವನ ಈ ಮನೋರಾಜ್ಯಗಳು ಆ ಲೋಕಗಳ ಸತ್ಯಾಂಶಗಳ ಮೇಲೆ ರಚಿಸಿದ ಕಲ್ಪನೆಗಳೂ ಇರಬಹುದು. ಅವನು ತನ್ನ ತರ್ಕಕ್ಕೆ ಸರಿಗಂಡಂತೆ ಒಂದು ವಿಚಾರದ ಮಂದಿರವನ್ನೇ ಕಟ್ಟುತ್ತಾನೆ. ಮತ್ತು ಅವನ ಈ ಮನೋರಚನೆಯು ಸತ್ಯವೆಂದು ನಂಬುತ್ತಾನೆ. ಆದ್ದರಿಂದ ಅವನ ಈ ಮಾನಸಿಕ ಕಲ್ಪನಾ ರಾಜ್ಯವು ಅವನು ಮೃತನಾದನಂತರ ಒಂದು ಕೃತಕ ವಾತಾವರಣವನ್ನುಂಟು ಮಾಡಿ ಅವನನ್ನು ಅಲ್ಲಿ ಕೆಲಕಾಲ ತಡೆಹಿಡಿಯಬಹುದು. ಈ ಮೃತ್ಯು ಲೋಕದಲ್ಲಿ ಮನೋರಾಜ್ಯವು ಮನುಷ್ಯನಿಗೆ ಜ್ಞಾನಾರ್ಜನೆಯ ಸಾಧನವಾಗಿ ಮತ್ತು ಜೀವಿತದ ಆಧಾರವಾಗಿ ಅವಶ್ಯ ಬೇಕಾಗುತ್ತದೆ. ಇದೇ ಮನೋರಾಜ್ಯವು ಮನೋಮಯ ಕೋಶದಲ್ಲಿರುವ ಜೀವನಿಗೆ ಪರಲೋಕಗಳಲ್ಲಿ ಅವನಿಗೆ ಅನುಕೂಲವಾದ ಉಪಲೋಕಗಳನ್ನು ನಿರ್ಮಿಸುವ ಶಕ್ತಿಯಾಗಿ ಪರಿಣಮಿಸುತ್ತದೆ. ಮತ್ತು ಅವನು ಇಂಥ ಲೋಕಗಳಲ್ಲಿ

ಆತ್ಮನ ಒತ್ತಾಯದಿಂದ ಈ ಕಲ್ಪನಾಮಯ ವಾತಾವರಣವು ಕರಗುವವರೆಗೆ ತಡೆಹಿಡಿಯಲ್ಪಡುತ್ತಾನೆ. ಈ ಉಪಲೋಕಗಳು ಮನುಷ್ಯನು ಈ ಜಗತ್ತಿನಲ್ಲಿ ಮಾಡಿದ ಕಲ್ಪನೆಗಳ ವ್ಯಾಪಕವಾದ ರಾಜ್ಯಗಳೇ ಆಗಿರುತ್ತವೆ. ಮನೋಮಯ ಮತ್ತು ಪ್ರಾಣಮಯ ಜಗತ್ತುಗಳ ಸತ್ಯಾಂಶದಿಂದ ಮನುಷ್ಯನ ಈ ಮೃತ್ಯುಲೋಕದಲ್ಲಿಯ ಅನುಭವವೇ ಅನ್ಯ ಲೋಕಗಳಲ್ಲಿ ಹೆಚ್ಚು ವ್ಯಾಪಕವಾದ ಬಹುಕಾಲದ ವರೆಗೆ ಬಾಳುವ ಮತ್ತು ಭೌತಿಕ ಬಂಧನಗಳಿಂದ ಬಿಡುಗಡೆ ಹೊಂದಿದ ಸ್ಥಿತಿಯಲ್ಲಿ ಪರಿಣಮಿಸುತ್ತವೆ. ಈ ಭೂಮಿಯ ಜೀವನದಲ್ಲಿಯ ಸುಖದುಃಖಗಳೇ ಊರ್ಧ್ವಲೋಕಗಳಲ್ಲಿಯ ಪರಿಸ್ಥಿತಿಯಲ್ಲಿ ಹೆಚ್ಚು ಫಲಪ್ರದವಾಗಿಯೂ ಪೂರ್ಣವಾಗಿಯೂ ಬಹುಕಾಲ ಬಾಳುವಂಥವಾಗಿಯೂ ಪರಿಣಮಿಸುತ್ತವೆ. ಆದ್ದರಿಂದ ಜೀವನ ಈ ಮನೋನಿರ್ಮಿತ ವಾತಾವರಣಗಳಿಗೆ ಸತ್ಯವಾದ ಸೂಕ್ಷ್ಮ ಲೋಕಗಳಲ್ಲಿ ಸ್ಥಾನವಿರುವ ಮಟ್ಟಿಗೆ ಅವು ಒಂದು ಪ್ರಾಣಮಯ ಮತ್ತು ಮನೋಮಯ ಲೋಕಗಳಲ್ಲಿಯ ಉಪಲೋಕಗಳೆಂದೇ ತಿಳಿಯಬೇಕಾಗುವದು

ಈ ಜೀವಕಲ್ಪಿತ ಭಾವನಾಮಯ ಪರಲೋಕಗಳ ಹೊರತಾಗಿ, ಸತ್ಯವಾದ ಪ್ರಾಣಮಯ ಮತ್ತು ಮನೋಮಯ ಲೋಕಗಳೂ ಇರುತ್ತವೆ ಪ್ರಾಣಮಯ ಜಗತ್ತು ಈ ವಿಶ್ವರಚನೆಯ ಒಂದು ಮಹತ್ವದ ಭಾಗವೇ ಆಗಿದ್ದು, ಅದು ವಿಶ್ವದ ಸೂಕ್ಷ್ಮ ಪ್ರಾಣಶಕ್ತಿಯ ನೈಸರ್ಗಿಕ ವಾಸಸ್ಥಳವಾಗಿದೆ ಮನುಷ್ಯನ ಐಹಿಕ ಜೀವನದ ಘಟನೆಗೆ ಕಾರಣವಾದ ಶಕ್ತಿಯು ಪ್ರಾಣವಿಶಿಷ್ಟವಿರುವದರಿಂದ, ಜೀವನ ಪಾರಲೌಕಿಕ ಪ್ರವಾಸದಲ್ಲಿ, ಅವನು ಈ ಪ್ರಾಣಮಯ ಲೋಕಗಳಲ್ಲಿ ಕೆಲಕಾಲ ಹಿಡಿಯಲ್ಪಡುವದು ಸ್ವಾಭಾವಿಕವಾಗಿದೆ. ಯಾಕಂದರೆ, ಜೀವಘಟಿತ ಈ ಪ್ರಾಣಶಕ್ತಿಯು ಪ್ರಾಣಮಯ ಲೋಕಗಳ ನಿಸರ್ಗಸಿದ್ಧ ಸ್ವರೂಪವಾಗಿದೆ. ಮತ್ತು ಜೀವನ ಮೇಲೆ ಇರುವ ಅವುಗಳ ಸತ್ತೆಯಿಂದ, ಈ ಶಕ್ತಿಯು ತನ್ನ ನೈಜಪ್ರಾಂತದಲ್ಲಿ ಕೆಲಕಾಲ ವಾಸಮಾಡಬೇಕಾಗುವದು. ಈ ಸ್ಥೂಲ ಶರೀರದಲ್ಲಿ ಯಾವ ಜೀವನನ್ನು ಈ ಶಕ್ತಿಯು ಹಿಡಿದಿತ್ತೋ ಅದು ತನ್ನ ನಿಜ ಪ್ರಾಂತದಲ್ಲಿಯೂ ಅವನನ್ನು ಹಿಡಿದು ಇಡುವದು ಆಶ್ಚರ್ಯಕರವಲ್ಲ. ಸ್ವಯಂ ನಿರ್ಮಿತ ಉಪಲೋಕ

ಗಳಲ್ಲಿ ಜೀವನ ವಸತಿಯು, ಈ ಲೋಕದಿಂದ ಪರಲೋಕಗಳಿಗೆ ಹೋಗುವ ದಾರಿಯಲ್ಲಿಯು ಒಂದು ಸಂಕ್ರಮಣ ಸ್ಥಿತಿ ಅಥವಾ ಅಲ್ಪಕಾಲದ ವಸತಿ ಸ್ಥಾನವಾಗಿದ್ದು ಈ ಸ್ಥಿತಿಯಿಂದ ಜೀವನು ಸತ್ಯವಾದ ಊರ್ಧ್ವ ಲೋಕಗಳಿಗೆ ಹೋಗುವನು. ಜೀವನು ಈ ಸ್ಥೂಲ ದೇಹಪಾತದನಂತರ ಕೂಡಲೇ ಈ ಲೋಕಗಳಿಗೆ ಹೋಗಬಹುದು ಅಥವಾ ಮೊದಲು ಸಂಕ್ರಮಣ ಸ್ಥಿತಿಯಲ್ಲಿ ಅಲ್ಪಕಾಲವಿದ್ದು ಮುಂದೆ ಅಲ್ಲಿಗೆ ಹೋಗಬಹುದು ಈ ಸಂಕ್ರಮಣ ಸ್ಥಿತಿಯಲ್ಲಿ ಜೀವನು ಈ ಭೌತಿಕ ಜೀವನದ ಅನುಭವವನ್ನೇ ಹೊಂದುತ್ತಿದ್ದು ಈ ಅನುಭವವು ಹೆಚ್ಚು ಸ್ವತಂತ್ರವಾದ ವಾತಾವರಣದಲ್ಲಿ, ಸ್ಥೂಲ ದೇಹ ರಹಿತ, ಕೇವಲ ಮನೋಮಯ ಮತ್ತು ಪ್ರಾಣಮಯ ಸೂಕ್ಷ್ಮ ಶರೀರದಿಂದ ಯುಕ್ತನಾಗಿ ಈ ಸ್ಥಿತಿಗೆ ಅನುಗುಣವಾದ ಐಹಿಕ ಆಕೃತಿ ರೂಪದಿಂದ ಪರಿಣಮಿಸುವದು. ಈ ಸೂಕ್ಷ್ಮ ಉಪಲೋಕ ಮತ್ತು ಪ್ರಾಣಮಯ ಲೋಕಗಳ ಮೇಲ್ಭಾಗಕ್ಕೆ ಮಾನಸ ಮತ್ತು ಆತ್ಮಲೋಕಗಳಿದ್ದು, ಜೀವನು ಈ ಮೃತ್ಯುಲೋಕದಲ್ಲಿ ಪುನಃ ಜನ್ಮ ತಾಳುವ ಮೊದಲು ಈ ಲೋಕಗಳೂ ಅವನಿಗೆ ಗಮನಾರ್ಹವಾಗಿವೆ. ಆ ಲೋಕಗಳಿಗೂ ಅವನು ಈ ಭೂಲೋಕದಲ್ಲಿ ಪುನಃ ಜನ್ಮಕ್ಕೆ ಬರುವ ಮೊದಲು ಹೋಗಬಹುದು. ಆದರೆ ಈ ಲೋಕದಲ್ಲಿಯ ಜೀವನದಲ್ಲಿ ಜೀವನ ಮಾನಸಿಕ ಮತ್ತು ಆತ್ಮೀಯ ವಿಕಾಸವು ಸಾಕಷ್ಟು ಆಗಿರದಿದ್ದರೆ, ಅವನು ಈ ಮೇಲಿನ ಲೋಕಗಳಲ್ಲಿ ಜ್ಞಾನಪೂರ್ವಕ ವ್ಯವಹಾರ ಮಾಡುವದು ಸಂಭವನೀಯವಿಲ್ಲ. ಯಾಕಂದರೆ ಈ ಭೌತಿಕ ಜಗತ್ತಿನಲ್ಲಿ ವಿಕಾಸ ಹೊಂದುತ್ತಿದ್ದ ಜೀವನು ಮರಣೋತ್ತರ ವಾಸಮಾಡಬೇಕಾದ ಲೋಕಗಳಲ್ಲಿ ಈ ಸೂಕ್ಷ್ಮ ಮನೋಮಯ ಮತ್ತು ಆತ್ಮಮಯ ಲೋಕಗಳು ಹೆಚ್ಚಿನ ತರಗತಿಯವು. ಆದ್ದರಿಂದ ಇಲ್ಲಿಯ ಸ್ಥೂಲ ಮಾನಸಿಕ ಜೀವ ಸ್ಥಿತಿಗಿಂತ ಮೇಲಿನ ಸ್ಥಿತಿಯಲ್ಲಿ ಇರಲಿಕ್ಕೆ ಈ ಭೌತಿಕ ಜಗತ್ತಿನಲ್ಲಿ ಯಾವನು ಸಾಧನ ಮಾಡಿರುವದಿಲ್ಲವೋ, ಅಂಥ ಜೀವನು ಈ ಸೂಕ್ಷ್ಮ ಲೋಕಗಳನ್ನು ಪ್ರವೇಶಿಸುವದು ಶಕ್ಯವಿಲ್ಲ. ಕದಾಚಿತ್ ಅವನು ಈ ಸ್ಥೂಲ ಮಾನಸಿಕ ಸ್ಥಿತಿಯನ್ನು ದಾಟಿ ಈ ಲೋಕಗಳಿಗೆ ಏರುವಷ್ಟು ಬೆಳವಣಿಗೆ ಹೊಂದಿದ್ದರೂ, ಈ ಭೌತಿಕ ಜಗತ್ತಿನ ಉತ್ಕ್ರಾಂತಿಯಲ್ಲಿ ಅವನ ಮನೋರಚನೆಯು, ಸೂಕ್ಷ್ಮ

ಮಾನಸಿಕ ದ್ರವ್ಯಗಳಿಂದ ಹಗುರಾಗಿರದಿದ್ದರೆ, ಅವನು ಈ ಲೋಕಗಳಲ್ಲಿ ಚಿರಕಾಲ ಉಳಿಯಬಹುದು.

ಜೀವನ ಮರಣೋತ್ತರ ಪ್ರವಾಸದಲ್ಲಿ ಮನೋಮಯ ಲೋಕಗಳೇ ಕೊನೆಯ ವಾಸಸ್ಥಾನವಾಗಲಾರವು. ಯಾಕೆಂದರೆ ಜೀವನ ಅಂತಿಮ ತತ್ವವು ಕೇವಲ ಮನೋಮಯವಾಗಿರದೆ—ಮನಸ್ಸೃಷ್ಟಿ ಮೃತ್ಯು ಮತ್ತು ಪುನರ್ಜನ್ಮದ ಮಧ್ಯಕಾಲದಲ್ಲಿ ಪ್ರವಾಸ ಮಾಡುತ್ತಿರದೆ, ಈ ಪ್ರವಾಸ ಮಾಡುತ್ತಿರುವ ಜೀವ ಸಂಘಾತನಲ್ಲಿ ಚಿದಾಭಾಸವೂ ಒಂದು ಕೊನೆಯ ತತ್ವವಾಗಿದೆ. ಆದ್ದರಿಂದ ಜೀವಾತ್ಮನು ಹೋಗಬೇಕಾದ ಕೊನೆಯ ವಾಸಸ್ಥಾನವು ಆತ್ಮಲೋಕವೇ ಆಗಿರಬೇಕು. ಅಲ್ಲಿ ಜೀವಾತ್ಮನು ಕೆಲಕಾಲ ತನ್ನ ಹಿಂದಿನ ಜೀವನಗಳಲ್ಲಿ ಪಡೆದ ಅನುಭವದಿಂದುಂಟಾದ ಜ್ಞಾನಶಕ್ತಿಯನ್ನು ಅರಗಿಸಿಕೊಳ್ಳುತ್ತಾನೆ. ಸರ್ವಸಾಮಾನ್ಯತಃ ಈ ಮೃತ್ಯುಲೋಕದಲ್ಲಿ ಸಂಪೂರ್ಣ ಬೆಳವಣಿಗೆಯನ್ನು ಹೊಂದಿದ ಮಾನವ ಜೀವವು, ಇಲ್ಲಿಯೇ, ತನ್ನ ಬುದ್ಧಿಶಕ್ತಿಯನ್ನು ಸಾಕಷ್ಟು ಬೆಳಸಿಕೊಂಡಿದ್ದರೆ, ಈ ಲೋಕದಿಂದ ಆತ್ಮಲೋಕದ ವರೆಗಿನ—ಸೂಕ್ಷ್ಮ ಭೌತಿಕ, ಪ್ರಾಣಮಯ ಮನೋಮಯ ಮುಂತಾದ—ಎಲ್ಲ ಮಧ್ಯದ ಪ್ರದೇಶಗಳನ್ನು ಒಂದರ ಹಿಂದೊಂದು ಕ್ರಮವಾಗಿ ದಾಟಬಹುದು ಪ್ರತಿಯೊಂದು ಸ್ಥಿತಿಯಲ್ಲಿ, ತನ್ನ ಹಿಂದಿನ ಜೀವಿತದಲ್ಲಿಯ ಇನ್ನೂ ಕೆಲವಟ್ಟಿಗೆ ಉಳಿದ ವ್ಯಕ್ತಿತ್ವದ ಜಡವಾದ ಹೊದಿಕೆಗಳಿಂದ ಮುಕ್ತನಾಗಲು ಅವನು ಪ್ರಯತ್ನಿಸುತ್ತಾನೆ. ಅವನು ಈ ಸ್ಥೂಲ ಜಗತ್ತನ್ನು ಬಿಡುವಾಗಲೇ—ಈ ಸ್ಥೂಲ ದೇಹವನ್ನು—ಅನ್ನಮಯ ಕೋಶವನ್ನು, ಕಳಚಿ ಒಗೆದಂತೆ, ತನ್ನ ಪ್ರಾಣಮಯ ಮತ್ತು ಮನೋಮಯ ಕೋಶಗಳನ್ನೂ ಕಳಚಿ ಒಗೆಯುತ್ತಾನೆ. ಆದರೆ, ಅವನ ಈ ಸ್ಥೂಲದೇಹದ, ಪ್ರಾಣಮಯ ಮತ್ತು ಮನೋಮಯ ದೇಹಗಳ ಅನುಭವವು ಮಾತ್ರ ಸಂಸ್ಕಾರ ರೂಪದಿಂದ, ಸುಪ್ತಸ್ಮೃತಿಪಟಲದಲ್ಲುಳಿದು ಅವನ ಮುಂದಿನ ಪ್ರಗತಿಗೆ ಅದು ಸಹಾಯ ಮಾಡುತ್ತದೆ. ಆದರೆ, ಮನುಷ್ಯನ ಈ ಜಗತ್ತಿನಲ್ಲಿಯ ಬೌದ್ಧಿಕ ಪ್ರಗತಿಯು ಸಾಕಷ್ಟು ಆಗಿರದಿದ್ದರೆ ಮಾತ್ರ, ಜೀವನು ಪ್ರಾಣಮಯ ಲೋಕಗಳ ಪಾತಳಿಯನ್ನು ಮೀರಿ

ಮೇಲಿನ ಲೋಕಗಳಿಗೆ ಜಾಗ್ರತ ಸ್ಥಿತಿಯಲ್ಲಿ ಹೋಗಲಾರನು ಮತ್ತು ಈ ಲೋಕಗಳಿಂದ—ಸ್ವರ್ಗ ಅಥವಾ ನರಕಗಳಿಂದ—ಅವನು ಈ ಭೂಮಿಗೆ ಇಳಿದು ಪುನಃ ಇಲ್ಲಿ ಜನ್ಮತಾಳುವವರೆಗೆ ಸುಪ್ತಸ್ಥಿತಿಯಲ್ಲಿ ಉಳಿಯುವನು. ಈ ಸ್ಥಿತಿಯಲ್ಲಿ ಅವನ ಹಿಂದಿನ ಕರ್ಮ ಸಂಸ್ಕಾರಗಳ ಬಲಾಬಲಗಳ ಮೇಲಿಂದ, ಅವನು ಮುಂದೆ ತೆಗೆದುಕೊಳ್ಳಬೇಕಾದ ಜನ್ಮವು ನಿಶ್ಚಿತವಾಗುವದು. ಮೇಲಿನ ಲೋಕಗಳಲ್ಲಿ ಜಾಗ್ರತ ವ್ಯವಹಾರವನ್ನು ನಡಸಬೇಕಾದರೆ ಕೆಲಮಟ್ಟಕ್ಕೆ ಮುಟ್ಟಿದ ಆಧ್ಯಾತ್ಮಿಕ ಪ್ರಗತಿಯು ಅವಶ್ಯವಾಗಿ ಬೇಕು.

ನಾವು ಇಲ್ಲಿಯವರೆಗೆ ಪ್ರತಿಪಾದಿಸಿದ, ಜೀವನ ಮರಣೋತ್ತರ ಸ್ಥಿತಿಗಳು ಅವನ ಆಂತರಿಕ ಬೆಳವಣಿಗೆಯಿಂದ ಉಂಟಾಗುವುದಾದ ವ್ಯಾಪ್ತಿಯನ್ನು ತೋರಿಸುತ್ತವೆ. ಇವು ತಾತ್ವಿಕ ದೃಷ್ಟಿಯಿಂದ ಜೀವನು ಅವಶ್ಯವಾಗಿ ಹೊಂದಬೇಕಾದ ವಿಕಾಸದ ಮಾರ್ಗವನ್ನು ತೋರಿಸುತ್ತವೆ. ಆದರೆ ಈ ವಿವೇಚನೆಯು ಸತ್ಯತೆಯು ಜೀವನ ಸೂಕ್ಷ್ಮ ಅನುಭವಗಳಿಂದ ಸಿದ್ಧವಾದಾಗ್ಯೂ, ಅವನ ವ್ಯಾವಹಾರಿಕ ತರ್ಕಬುದ್ಧಿಗೆ, ಈ ಪ್ರತಿಪಾದನೆಯು ಅಪರಿಹಾರ್ಯವೆಂದು ಅನಿಸಲಾರದು ಆದ್ದರಿಂದ ನಾವು ಇದಕ್ಕಿಂತ ಹೆಚ್ಚು ದೃಢವಾಗಿ ಮನುಷ್ಯನ ಜನ್ಮದ ಮಧ್ಯಸ್ಥಿತಿಯ ಅವಶ್ಯಕತೆಯನ್ನು ಸಿದ್ಧಗೊಳಿಸುವ ಸಂಗತಿಗಳು ಏನಾದರೂ ಇರುವವೋ ಅಥವಾ ಸ್ವತಃ ಸಿದ್ಧವಾದ ಪ್ರಮಾಣಗಳು ಇರುವವೋ ಎಂಬುದನ್ನು ನೋಡುವಾ. ಇಂಥ ಒಂದು ಅವಶ್ಯವಾದ ಪ್ರಮಾಣವನ್ನು ಮೇಲಿನ ಲೋಕಗಳು ಈ ಜಗತ್ತಿನ ಉತ್ಕ್ರಾಂತಿಗೆ ಮಾಡುತ್ತಿರುವ ಸಹಾಯದಲ್ಲಿ ಮತ್ತು ಅವು ಜೀವನ ಜ್ಞಾನ—ಅಥವಾ ಸಂವಿತ್ ಶಕ್ತಿಯ ವಿಕಾಸದ ಮೇಲೆ ಮಾಡುತ್ತಿರುವ ಪರಿಣಾಮದಲ್ಲಿ ಕಾಣಬಹುದು. ಊರ್ಧ್ವ ಲೋಕಗಳು ಈ ನಮ್ಮ ಭೂಮಿಯ ಮೇಲೆ ಗುಪ್ತರೀತಿಯಿಂದ ಮಾಡುತ್ತಿರುವ ತಮ್ಮ ಶ್ರೇಷ್ಠವಾದ ಕ್ರಿಯೆಯ ಪರಿಣಾಮವಾಗಿ ನಮ್ಮ ಪ್ರಗತಿಯು ಆಗುತ್ತದೆ. ನಮ್ಮ ಜಾಗ್ರತ ಮನಸ್ಸಿನ ಕೆಳಭಾಗದಲ್ಲಿ ಬೀಜರೂಪದಿಂದ ಎಲ್ಲ ಶಕ್ತಿಗಳೂ ಇರುತ್ತವೆ. ಈ ಬೀಜರೂಪ ಶಕ್ತಿಗಳು ಮೇಲಿನ ಲೋಕಗಳ ಕ್ರಿಯೆಯಿಂದಲೇ

ಅಂಕುರಿಸಿ ಜಾಗ್ರತಾವಸ್ಥೆಗೆ ಬರುತ್ತವೆ. ಈ ನಿಸರ್ಗದಲ್ಲಿ ನಮ್ಮ ಮನಸ್ಸಿನ ಅಥವಾ ಪ್ರಾಣದ ಉತ್ಕ್ರಾಂತಿಯು ಯಾವ ಪ್ರಕಾರ ಅಥವಾ ಯಾವ ಮಾರ್ಗದಿಂದ ಆಗಬೇಕೆಂಬುದು ಮೇಲಿನ ಸೂಕ್ಷ್ಮ ಲೋಕಗಳ ಕ್ರಿಯೆಯಿಂದಲೇ ಗೊತ್ತಾಗುತ್ತದೆ. ಆದ್ದರಿಂದ ಅವುಗಳ ಸತತ ಕ್ರಿಯೆಯ ಅವಶ್ಯಕತೆಯು ನಮ್ಮ ಪ್ರಗತಿಯ ದೃಷ್ಟಿಯಿಂದ ಇದ್ದೇ ಇದೆ. ನಮ್ಮಲ್ಲಿ ಸುಪ್ತವಾದ ಪ್ರಾಣ ಮತ್ತು ಮನಃಶಕ್ತಿಗಳಿಗೆ ಉತ್ಕ್ರಾಂತಿಯ ಮಾರ್ಗದಲ್ಲಿ ಮುಂದೂಡುವ ಚಾಲನೆಯು ಸದೃಶವಾದ ಶ್ರೇಷ್ಠ ಲೋಕಗಳ ಕ್ರಿಯೆಯಿಂದಲೇ ದೊರಕುತ್ತದೆ. ಈ ಮೇಲಿನ ಸಂತತವಾದ ಮತ್ತು ಗುಪ್ತವಾದ ಶಕ್ತಿಯ ಹೊರತು ಈ ಜಗತ್ತಿನ ಉತ್ಕ್ರಾಂತಿಗೆ ಅಡ್ಡಬರುತ್ತಿರುವ ಜಡ, ಕ್ರಿಯಾಹೀನ ಭೌತಿಕ ನಿಸರ್ಗದ ಎಳೆತದಿಂದ ಮನುಷ್ಯನ ಪ್ರಗತಿಗೆ ಸಾಕಷ್ಟು ವೇಗವು ಪ್ರಾಪ್ತವಾಗುವದಿಲ್ಲ. ಮೇಲಿನ ಲೋಕಗಳ ಈ ಕ್ರಿಯೆಯು ನಮ್ಮ ಅಜ್ಞಾತ ಅಥವಾ ಸುಪ್ತ ಭಾಗಗಳ ಮೇಲೆ ಆಗುತ್ತದೆ. ಈ ಶಕ್ತಿಗಳ ಸಂಯೋಗವು ನಮ್ಮ ಸುಪ್ತ ಒಳಭಾಗದೊಂದಿಗೆ ಆಗುತ್ತದೆ; ಜಾಗ್ರತವಾದ ಮೇಲ್ಭಾಗದ ಸಂಗಡವಲ್ಲ. ಈ ಸುಪ್ತಭಾಗದಿಂದ ನಮ್ಮ ಜಾಗ್ರತ ಜ್ಞಾನಶಕ್ತಿಯು ಹೊರಚಿಮ್ಮುತ್ತದೆ. ಮತ್ತು ನಮ್ಮ ಈ ಜಾಗ್ರತ ಜ್ಞಾನದ ಅನುಭವಕ್ಕೆ ಬಂದ ಸಂಗತಿಗಳನ್ನು ಪುನಃ ಈ ಸುಪ್ತ ಭಾಗವು ಸಂಸ್ಕಾರ ರೂಪದಿಂದ ಸಂಗ್ರಹಿಸುತ್ತದೆ. ಈ ಸಂಸ್ಕಾರಗಳು ಪುನಃ ಹೆಚ್ಚು ಬಲದಿಂದ ಮೇಲ್ಭಾಗಕ್ಕೆ ಅಪ್ಪಳಿಸುತ್ತವೆ. ಮನುಷ್ಯನು ಒಮ್ಮೆ ಈ ಸ್ಥೂಲಭೂತಗಳನ್ನಷ್ಟೇ ಗ್ರಹಣಮಾಡಲಿಕ್ಕೆ ಸಮರ್ಥವಾದ ಈ ಸ್ಥೂಲ ಮನಸ್ಸನ್ನು ದಾಟಿ ಮೇಲೆ ಹೋದನೆಂದರೆ, ನಮ್ಮ ಸುಪ್ತ ಒಳಭಾಗ ಮತ್ತು ಜಾಗ್ರತ ಹೊರಭಾಗ ಇವುಗಳ ಮೇಲೆ ಆಗುತ್ತಿರುವ ಪರಸ್ಪರ ಕ್ರಿಯೆ ಪ್ರತಿಕ್ರಿಯೆಗಳ ಜ್ಞಾನವು ಅವನಿಗೆ ಆಗುತ್ತದೆ. ಇದೇ ಅವನ ಶೀಘ್ರವಾದ ಪ್ರಗತಿಯ ಗುಟ್ಟು.

ಈ ಕ್ರಿಯೆ ಮತ್ತು ಪ್ರತಿಕ್ರಿಯೆಗಳು ಜೀವನು ಈ ಲೋಕದಲ್ಲಿ ಜನ್ಮಕ್ಕೆ ಬರುವ ಪೂರ್ವ ಸ್ಥಿತಿಯಲ್ಲಿಯೂ ಆಗುತ್ತಿರಬೇಕು. ಯಾಕಂದರೆ, ಹಿಂದಿನ ಅವನ ಸ್ಥೂಲ ದೇಹವು ನಷ್ಟನಾಗುವ ಕಾಲಕ್ಕೆ, ಈ ಲೋಕದಲ್ಲಿ ನಿಂತ

ಪ್ರಗತಿಯನ್ನೇ ಮುಂದುವರಿಸುವದಕ್ಕೋಸ್ಕರ ಹೊಸ ಜನ್ಮವು ಪ್ರಾಪ್ತ ವಾಗಿರುವದಿಲ್ಲ. ಪುನರ್ಜನ್ಮದಿಂದ ಪ್ರಾಣಿಗೆ ಅದರ ಹಿಂದಿನ ಜಾಗ್ರತ ವಾದ ವ್ಯಕ್ತಿತ್ವವು ಪುನಃ ಪ್ರಾಪ್ತವಾಗಿ ಅಲ್ಲಿಂದ ಅದು ತನ್ನ ಸ್ವಾಭಾವಿಕ ಪ್ರಗತಿಯನ್ನು ಸಾಧಿಸುವದೆಂದು ಇದರ ಅರ್ಥವಾಗುವದಿಲ್ಲ. ಆದರೆ ಅದು ಹೊಸ ಜನ್ಮದಲ್ಲಿ ಹಿಂದಿನ ಸ್ವಭಾವದಲ್ಲಿಯ ಅಹಿತಕರವಾದ ಭಾಗವನ್ನು ಬಿಟ್ಟು ತನ್ನ ಆಂತರಿಕ ಸ್ವಭಾವದಲ್ಲಿ ಅಡಗಿರುವ ಹಿತಕರವಾದ ಕೆಲವು ಹೊಸ ಭಾಗಗಳನ್ನು ತೆಗೆದುಕೊಂಡು ಹಿಂದಿನ ಪ್ರಗತಿಯ ಪುನಃರಚನೆ ಯನ್ನು ಮಾಡಿಕೊಳ್ಳುತ್ತದೆ. ಮುಂದಿನ ಪ್ರಗತಿಯ ಸಲುವಾಗಿ ಹೊಸ ಗುಣಗಳು ಆರಿಸಲ್ಪಡುತ್ತವೆ ಹೀಗಾದ ಹೊರತು ಹೊಸ ಜನ್ಮದ ಕ್ರಿಯೆಯು ಫಲದಾಯಕವಾಗಲಾರದು. ಅಥವಾ ಜೀವನ ಉತ್ಕ್ರಾಂತಿ ಯಲ್ಲಿ ಪ್ರಗತಿಯಾಗಲಾರದು. ಯಾಕೆಂದರೆ, ಪ್ರತಿಯೊಂದು ಜನ್ಮವು ಹೊಸ ಪ್ರಾರಂಭವೇ ಇರುತ್ತದೆ. ಅದು ಹಿಂದಿನ ಜನ್ಮಕ್ಕಿಂತ ಪ್ರಗತ ವಾದದ್ದು ಅಥವಾ ಬೆಳವಣಿಗೆ ಹೊಂದಿದ ಸ್ಥಿತಿಯೇನೂ ನಿಜ. ಆದರೆ, ಅದೊಂದು ಯಾಂತ್ರಿಕ ಪ್ರಗತಿಯಲ್ಲ. ಪುನರ್ಜನ್ಮವೆಂದರೆ, ಅದೇ ಸಂಗತಿ ಗಳ ಪುನರಾವೃತ್ತಿ ಇರದೆ, ಅದು ಹಿಂದಿನ ಜೀವಿತದ ಬೆಳವಣಿಗೆ ಹೊಂದಿದ ಸ್ಥಿತಿಯಾಗಿರುತ್ತದೆ. ಪುನರ್ಜನ್ಮವು ಉತ್ಕ್ರಾಂತಿಯ ಒಂದು ಮಹತ್ವದ ಸಾಧನವಾಗಿರುತ್ತದೆ. ಮನುಷ್ಯನ ಮರಣದ ನಂತರ, ಅವನು ಜೀವಂತ ಇರುವಾಗ ಇದ್ದ ಶರೀರ, ಪ್ರಾಣ ಮತ್ತು ಮನಸ್ಸು ಇವುಗಳ ಎಳೆದಾಟವು ಕಡಿಮೆಯಾಗಿ, ಅವನ ಹಿಂದಿನ ವ್ಯಕ್ತಿತ್ವದಲ್ಲಿಯ ಎಳೆದಾಟವನ್ನು ಬಿಟ್ಟು, ಅಥವಾ ಅವನ ಸ್ವಭಾವದಲ್ಲಿಯ ಅನಿಶ್ಚಿತವಾದ, ಅಹಿತಕರವಾದ ಚಂಚ- ಲತೆಯನ್ನು ಬಿಟ್ಟು ಅವನ ಹೊಸ ವ್ಯಕ್ತಿತ್ವದ ಕೆಲ ಭಾಗಗಳು ಪುನಃ ರಚಿತವಾಗುತ್ತವೆ. ಈ ಜೀವ ಸ್ವಭಾವದಲ್ಲಿಯ ಆಂತರಿಕ ಪ್ರತಿಕೂಲ ಗುಣಗಳ ಅಥವಾ ಅವನ ಪ್ರಗತಿಯನ್ನು ಅಡ್ಡಗಟ್ಟುವ ಸ್ಥೂಲ ಭಾಗಗಳ ತ್ಯಾಗವು ಮತ್ತು ಅವಶ್ಯವಿರುವ ಗುಣಗಳ ಗ್ರಹಣವು, ಆ ಆ ಸಂಸ್ಕಾರ ಗಳಿಗೆ ಅನುಗುಣವಾದ ಪಾತಳಿಯ ಲೋಕಗಳಲ್ಲಿಯೇ ಸುಲಭವಾಗುವದು. ಯಾಕೆಂದರೆ, ಜೀವನ ಪ್ರಾಣ, ಬುದ್ಧ್ಯಾದಿ ಆಂತರಿಕ ಭಾಗಗಳ ಜಾಗ್ರತ ಜ್ಞಾನವು ಅವನಿಗೆ ಆ ಆ ಭಾಗಗಳಿಗೆ ಅನುಗುಣವಾದ ಲೋಕಗಳಲ್ಲಿಯೇ

ಆಗುತ್ತದೆ. ಆದ್ದರಿಂದ ಅವನು ಮತ್ತೊಂದು ತನ್ನ ವ್ಯಕ್ತಿತ್ವದ ಹೊಸ ರಚನೆಯನ್ನು ತಿಳಿದು ಮಾಡುವ ಕ್ರಿಯೆಯು ಇಂಥ ಲೋಕಗಳಲ್ಲಿಯೇ ಶಕ್ಯವಾಗುವದು. ಅಥವಾ ಜೀವನು ತನ್ನ ಮೂಲ ತಾತ್ವಿಕ ಸ್ವಭಾವವೇ ಆದ ಆತ್ಮಲೋಕಕ್ಕೆ ಹೋಗಿ ಅಲ್ಲಿಯೇ ಒಂದಕ್ಕೊಂದು ವಿರೋಧ ವನ್ನುಂಟುಮಾಡದ, ಜೀವನದ ಎಲ್ಲ ಭಾಗಗಳೂ ಸರಿಯಾಗಿ ಹೊಂದುವ ಸಿದ್ಧತೆಯನ್ನು ಮಾಡಿ ತನ್ನ ಹೊಸ ಜೀವನದ ರೂಪರೇಷೆಗಳನ್ನು ತಾನೇ ನಿಶ್ಚಿತಗೊಳಿಸುವನು ತನ್ನಲ್ಲಿಯೇ ಎಲ್ಲವನ್ನೂ ವಿಲೀನಮಾಡಿ, ಜೀವನು ತನ್ನ ಮುಂದಿನ ಉತ್ಕ್ರಾಂತ ಸ್ಥಿತಿಯ ದಾರಿಯನ್ನು ನೋಡುತ್ತ, ಈ ಆತ್ಮಲೋಕದಲ್ಲಿ ವಿಶ್ರಾಂತಿ ಹೊಂದುವನು. ಈ ಆತ್ಮ ಲೋಕದ ಸ್ಥಾನವು ಜೀವನಿಗೆ, ಸೂಕ್ಷ್ಮ ಭೌತಿಕ, ಪ್ರಾಣಮಯ ಮತ್ತು ಮನೋಮಯ ಲೋಕಗಳ ದ್ವಾರದಿಂದ ಪ್ರಾಪ್ತವಾಗುತ್ತಿದ್ದು, ಅಲ್ಲಿಂದ ಅವನು ಪುನಃ ಈ ಲೋಕಕ್ಕೆ ತಿರುಗಿ ಬರುತ್ತಾನೆ. ಹೀಗೆ ಅವನು ತಿರುಗಿ ಈ ಲೋಕದಲ್ಲಿ ಜನ್ಮಕ್ಕೆ ಬರುವ ಮೊದಲಿನ ವಾಸಸ್ಥಾನವು, ಆ ಜೀವನು ಈ ಜಗತ್ತಿನಲ್ಲಿ ಸಂಗ್ರಹಿಸಿದ ಸಾಧನಗಳಿಂದ ಮತ್ತು ಈ ಸಾಧನಗಳಿಂದ ಸಾಧ್ಯವಾದ ಫಲಗಳಿಂದ ಪ್ರಾಪ್ತವಾಗಿರುತ್ತದೆ. ಮತ್ತು ಈ ಹೊಸ ಜನ್ಮವು ಪುನಃ ಈ ಜೀವನ ಹೊಸ ಕ್ರಿಯೆಯ ಕ್ಷೇತ್ರವಾಗುತ್ತದೆ. ಈ ರೀತಿಯಿಂದ ಈ ಜನ್ಮ ಮರಣದ ಕಾಲ ಚಕ್ರವು ಜೀವಾತ್ಮನ ಉತ್ಕ್ರಾಂತಿಯ ಒಂದು ಅಂಕಡೊಂಕಾದ ವಕ್ರಮಾರ್ಗವಿರುತ್ತದೆ.

ಜೀವನು ತನ್ನ ದೇಹ, ಪ್ರಾಣ, ಮನಸ್ಸು ಮತ್ತು ಆತ್ಮಾ ಇವುಗಳ ಬೆಳವಣಿಗೆಯನ್ನು ಕ್ರಮವಾಗಿ ಈ ಜಗತ್ತಿನಲ್ಲಿ ಸಾಧಿಸುತ್ತಾನೆಂದು ನಾವು ಹಿಂದೆ ಹೇಳಿದ್ದೇವೆ. ಆದರೆ ಇದರ ಅರ್ಥವು ಅವನಲ್ಲಿ ಮೊದಲು ಇಲ್ಲದ ಈ ತತ್ವಗಳನ್ನು ಅವನು ಉತ್ಪನ್ನಮಾಡುತ್ತಾನೆಂದಲ್ಲ. ಅವನು ತನ್ನಲ್ಲಿ ಬೀಜರೂಪದಿಂದಿದ್ದ ಈ ತತ್ವಗಳನ್ನು ಭೌತಿಕ ನಿಸರ್ಗದ ನಿಯಮಗಳಿಗೆ ಒಳಪಟ್ಟು ಪ್ರಕಟ ಮಾಡುತ್ತಾನೆ. ಈ ಪ್ರಕಟನೆಯಿಂದ ಜೀವಾತ್ಮನ ಮೇಲ್ಭಾಗದಲ್ಲಿ ಒಂದು ಬಹಿರ್ಮುಖ ಕ್ರಿಯಾಶೀಲ ಜ್ಞಾನವುಳ್ಳ ವ್ಯಕ್ತಿತ್ವದ ಕವಚವು ರಚಿಸಲ್ಪಡುತ್ತದೆ. ಜೀವನ ಅಂತರಾತ್ಮವೇ ಈ ಭೌತಿಕ

ವ್ಯವಹಾರದ ನಿಯಮ ಮತ್ತು ಪರಿಸ್ಥಿತಿಯಿಂದುಂಟಾದ ಶಕ್ಯತೆಗಳಿಗನು-ಸರಿಸಿ ಈ ವ್ಯಕ್ತಿತ್ವದಲ್ಲಿ ಪ್ರಕಟವಾಗುತ್ತದೆ. ಈ ಬಗ್ಗೆ ತೈತ್ತಿರೀಯೋಪನಿಷತ್ತಿನಲ್ಲಿ ಹೀಗೆ ಹೇಳಿದೆ. ಮನುಷ್ಯನಲ್ಲಿ ಕೇವಲ ಜಾಗ್ರತ ಜ್ಞಾನವಷ್ಟೇ ಇರದೆ, ಸ್ಥೂಲ ಪ್ರಾಣ, ಸ್ಥೂಲ ಮನಸ್ಸು, ಸ್ಥೂಲ ಅಹಂಕಾರಯುಕ್ತ ವ್ಯಕ್ತಿತ್ವವೂ, ಸೂಕ್ಷ್ಮ ಮನೋಮಯ ಮತ್ತು ಪ್ರಾಣಮಯ ಕೋಶಗಳೂ, ಇವಲ್ಲದೆ, ಸಾಕ್ಷಿರೂಪ ಚೈತನ್ಯವೂ ಇರುತ್ತವೆ. ಇವುಗಳ ಎಲ್ಲ ಅಥವಾ ಬಹುತರ ಎಲ್ಲ ಶಕ್ತಿಯು ಅವನ ಒಳಭಾಗದಲ್ಲಿ ಅಡಗಿರುವದರಿಂದ, ಮೇಲ್ಭಾಗದ ಜಾಗ್ರತ ಜ್ಞಾನಕ್ಕೆ ಅದು ಸಿಲುಕುವದಿಲ್ಲ. ಅವನ ಅಡಗಿದ ಈ ಶಕ್ತಿಗಳನ್ನು ಹೊರಗೆ ತಂದು ತನ್ನ ಜಾಗ್ರತ ಜ್ಞಾನಾವಸ್ಥೆಯಲ್ಲಿ ಅವನ್ನು ಸ್ಥಿರಗೊಳಿಸಬೇಕಾಗುತ್ತದೆ. ಆದರೆ, ಮನುಷ್ಯನ ಈ ಸೂಕ್ಷ್ಮ ಭಾಗಗಳ ಪ್ರತಿಯೊಂದು ಶಕ್ತಿಯ ಸಂಬಂಧವು ಸಜಾತೀಯ ದ್ರವ್ಯದಿಂದ ಯುಕ್ತವಾದ ಆ ಆ ಲೋಕಗಳ ಸಂಗಡ ಇರುತ್ತದೆ. ಉದಾಹರಣಾರ್ಥವಾಗಿ, ಮನುಷ್ಯನ ಸ್ಥೂಲ ಪ್ರಾಣಶಕ್ತಿಯು ಸೂತ್ರವು ಪ್ರಾಣಮಯ ಲೋಕದಲ್ಲಿದ್ದು, ಅಲ್ಲಿಂದ ಆ ಲೋಕದ ಕ್ರಿಯೆಯು ಮನುಷ್ಯನಲ್ಲಿಯ ಪ್ರಾಣಶಕ್ತಿಯ ಮೇಲೆ ಉಂಟಾಗುತ್ತದೆ. ಈ ಮಾರ್ಗದಿಂದಲೇ ಮನುಷ್ಯನ ಸೂಕ್ಷ್ಮ ಭಾಗಗಳು ಗುಪ್ತರೀತಿಯಿಂದ ಮೇಲಿನ ಲೋಕಗಳ ಸಂದೇಶವನ್ನು ಸ್ವೀಕರಿಸುತ್ತಿರುವದರಿಂದ ಅವುಗಳ ಮೇಲೆ ಪರಿಣಾಮವು ಉಂಟಾಗುತ್ತದೆ. ಈ ಕ್ರಿಯೆಯೂ ಅದರ ಪರಿಣಾಮವೂ ನಾವು ಬೆಳವಣಿಗೆಯನ್ನು ಹೊಂದಿದ ಹಾಗೆ ನಮಗೆ ತಿಳಿಯುತ್ತ ಹೋಗುತ್ತವೆ ಆದ್ದರಿಂದ ನಮ್ಮಲ್ಲಿಯ ಈ ಶಕ್ತಿಗಳ ಬೆಳವಣಿಗೆಯ ಪ್ರಕಾರ, ಈ ಲೋಕದಲ್ಲಿ ಜೀವಾತ್ಮನು ಜನ್ಮತಾಳುವ ಮೊದಲಿನ ಸ್ಥಾನವು ಅವನಿಗೆ ಇರಬೇಕೆಂದೂ, ಈ ಸ್ಥಾನವು, ಈ ಲೋಕದಲ್ಲಿ ಅವನು ಪುನಃ ಜನ್ಮತಾಳುವ ಸಲುವಾಗಿಯೂ ಮತ್ತು ಈ ಜನ್ಮದಿಂದುಂಟಾಗುವ ಉತ್ಕ್ರಾಂತಿಯ ಉದ್ದೇಶ ಮತ್ತು ಕ್ರಿಯೆಯ ಸಾಫಲ್ಯಗಳ ದೃಷ್ಟಿಯಿಂದ ಅವಶ್ಯವಾಗಿ ಬೇಕೆಂದೂ ಅನ್ನುವದು ಸಯುಕ್ತಿಕವಾಗಿದೆ. ಜೀವನ ಮರಣೋತ್ತರ ಲೋಕಗಳ ತರಗತಿ ಮತ್ತು ಅಲ್ಲಿಗೆ ಹೋಗಲಿಕ್ಕೆ ಕಾರಣೀಭೂತವಾದ ಪರಿಸ್ಥಿತಿ, ಇವುಗಳ ಕಾರಣ ಮೀಮಾಂಸೆಯು ಸರ್ವಸಾಮಾನ್ಯ ಧಾರ್ಮಿಕರ ತಿಳುವಳಿಕೆಯಲ್ಲಿದ್ದಂತೆ, ಅತಿಸರಳವಾಗಿರದೆ

ಅದೊಂದು ಅತಿ ಜಟಿಲವಾದ ಪ್ರಶ್ನೆಯಾಗಿದೆ. ಆದರೆ, ತತ್ವತಃ ಪುನರ್ಜನ್ಮವು ಜೀವಾತ್ಮನ ಈ ಸ್ಥೂಲದೇಹದಲ್ಲಿಯ ಜೀವನದ ಉಗಮವೂ ಅವನ ಸ್ವಭಾವದ ಅವಶ್ಯವಾದ ಪರಿಣಾಮವೂ ಆಗಿರುವದೆಂದು ನಾವು ಸಾಮಾನ್ಯತಃ ಹೇಳಬಹುದು. ಇದರ ಕಾರ್ಯಕಾರಣ ಪರಂಪರೆಯು ಜೀವನ ಉತ್ಕ್ರಾಂತಿಯಲ್ಲಿಯ ಕ್ರಿಯೆ ಪ್ರತಿಕ್ರಿಯೆಗಳ ಅತಿತೊಡಕಾದ ಜಾಳಿಗೆಯಾಗಿದ್ದು, ಇದು ಜೀವಾತ್ಮನ ಆಂತರಿಕ ಸತ್ಯತೆಯನ್ನು ಪ್ರಕಟಗೊಳಿಸುವದಕ್ಕೋಸ್ಕರ ಜೀವನ ಚೇತನ ಶಕ್ತಿಯಿಂದ ಅನಂತ ಆದ್ಯವಸ್ತುವಿನ ಸಾಂತಕ್ರಿಯೆಯ ನಿಯಮಗಳಿಗನುಸರಿಸಿ ಹೆಣೆಯಲ್ಪಟ್ಟಿರುತ್ತದೆ.

ಪುನರ್ಜನ್ಮ ಮತ್ತು ಜನ್ಮದ ಹಿಂದಿನ ಪರಲೋಕವಾಸ ಇವೆರಡಕ್ಕೂ ನಮ್ಮ ಹಳೇ ವಿಶ್ವಾಸದ ಪ್ರಕಾರ ಮತ್ತೊಂದು ಅರ್ಥವನ್ನು ಮಾಡಬಹುದು. ಪುನರ್ಜನ್ಮದ ಕಡೆಗೆ ನೋಡುವ ಎರಡು ದೃಷ್ಟಿಗಳಿವೆ. ಒಂದು ತಾತ್ವಿಕ ಮತ್ತೊಂದು ನೈತಿಕ. ಮೊದಲಿನದಾದ ತಾತ್ವಿಕ ವಿವೇಚನೆಯನ್ನು ನಾವು ಇಲ್ಲಿಯ ವರೆಗೆ ಮಾಡಿದ್ದೇವೆ ಆಧ್ಯಾತ್ಮಿಕ ಉನ್ನತಿಯ ಅವಶ್ಯಕತೆಯೇ ಈ ವಿವೇಚನೆಯ ದೃಷ್ಟಿ. ಎರಡನೆಯದು ಈ ವಿಶ್ವದಲ್ಲಿಯ ನ್ಯಾಯದೃಷ್ಟಿ, ಅಥವಾ ನೈತಿಕ ಶಿಸ್ತು. ನೈತಿಕ ದೃಷ್ಟಿಯಿಂದ ಜೀವನಿಗೆ ಒಂದು ಸ್ವತಂತ್ರ ಮತ್ತು ಅನಾದಿ ವ್ಯಕ್ತಿತ್ವವು ಇದ್ದು ಅದು ಈ ಜಗತ್ತಿನಲ್ಲಿ ಅಜ್ಞಾನ ಮತ್ತು ಭೋಗೇಚ್ಛೆಗಳ ಮೂಲಕ ಉತ್ಪನ್ನವಾಗುತ್ತದೆ. ಜೀವನು ಭೋಗೇಚ್ಛೆಗೆ ದಣಿದು, ತನ್ನ ಅಜ್ಞಾನವನ್ನು ಬಿಟ್ಟು, ತನ್ನ ನಿಜಸ್ವರೂಪದ ಜ್ಞಾನವನ್ನು ಎಲ್ಲಿಯ ವರೆಗೆ ಮಾಡಿಕೊಳ್ಳುವದಿಲ್ಲವೋ ಅಲ್ಲಿಯ ವರೆಗೆ, ಈ ಲೋಕಕ್ಕೆ ಅವನಿಗೆ ಪುನಃ ಪುನಃ ಬರಬೇಕಾಗುತ್ತದೆ. ಭೋಗೇಚ್ಛೆಯನ್ನು ತೃಪ್ತಿಗೊಳಿಸುವದಕ್ಕೋಸ್ಕರ ಜೀವನಿಗೆ ಯಾವಾಗಲೂ ಹೊಸ ಹೊಸ ಶರೀರಗಳನ್ನು ಧರಿಸಬೇಕಾಗುತ್ತದೆ. ಅವನು ಆತ್ಮಜ್ಞಾನದಿಂದ ಮುಕ್ತನಾಗುವ ವರೆಗೆ ಈ ಜನ್ಮ ಮರಣ ಚಕ್ರದಲ್ಲಿ ಸಿಕ್ಕು ದುಃಖವನ್ನು ಹೊಂದುತ್ತಾನೆ. ಜೀವನು ಈ ಲೋಕದಲ್ಲಿಯೇ ಈ ಎಲ್ಲ ಜನ್ಮಗಳನ್ನು ಹೊಂದದೆ ಕರ್ಮಾನುಸಾರ ಪರಲೋಕಗಳಲ್ಲಿ—ಸ್ವರ್ಗನರಕಗಳಲ್ಲಿ, ಅವನು ಇಲ್ಲಿ ಮಾಡಿದ ಪಾಪಪುಣ್ಯಗಳ ಫಲಭೋಗವನ್ನು ಹೊಂದಿ, ಪುನಃ ಈ ಲೋಕಕ್ಕೆ

ಬರುತ್ತಾನೆ. ಇಲ್ಲಿ ಕರ್ಮಶೇಷದ ಫಲದಿಂದ ಮನುಷ್ಯ, ಪಶುಪಕ್ಷಿ ಅಥವಾ ವನಸ್ಪತಿಗಳ ದೇಹವನ್ನು ಧರಿಸಬಹುದು. ಜೀವನ ಹಿಂದಿನ ಕರ್ಮದಿಂದಲೇ ಅವನು ಇಲ್ಲಿ ಹೊಂದಬೇಕಾದ ಜನ್ಮದ ಸ್ಥಿತಿಯೂ, ಅದರಲ್ಲಿಯ ಸುಖ ದುಃಖಗಳೂ ನಿಶ್ಚಯಿಸಲ್ಪಡುತ್ತವೆ. ಹಿಂದಿನ ಕರ್ಮದ ಫಲಿತವು ಪುಣ್ಯಮಯವಿದ್ದರೆ, ಮೇಲಿನ ಶ್ರೇಣಿಗಳಲ್ಲಿ ಅವನ ಜನ್ಮವಾಗಿ, ಅಲ್ಲಿ ಅವನ ಜೀವಿತವು ಸುಖಕರವೂ, ಉನ್ನತಿದಾಯಕವೂ ಆಗಿ, ಅವನು ಭಾಗ್ಯವಂತನಾಗುತ್ತಾನೆ. ಅದು ಪಾಪಮಯವಿದ್ದರೆ, ಜೀವನ ಜನ್ಮವು ಪಶುಪಕ್ಷ್ಯಾದಿ ನೀಚ ಯೋನಿಗಳಲ್ಲಾಗುತ್ತದೆ. ಮನುಷ್ಯ ಯೋನಿಯಲ್ಲಾದರೆ, ಅವನ ಜೀವಿತವು ದುಃಖಕರವಾಗಿ ಕಷ್ಟ ಮತ್ತು ಅಪಯಶಗಳಿಂದ ಅವನು ದುರ್ಭಾಗಿಯಾಗುತ್ತಾನೆ. ನಮ್ಮ ಹಿಂದಿನ ಕರ್ಮಗಳು ಪಾಪಪುಣ್ಯಗಳಿಂದ ಮಿಶ್ರವಾಗಿದ್ದರೆ ನಿಸರ್ಗವು ಒಂದು ಚತುರ ಗಣಿತಜ್ಞನಂತೆ ಯೋಗ್ಯ ವಿಚಾರಮಾಡಿ ನಮ್ಮ ಸಂಪಾದನೆಯ ದುಷ್ಟಸುಷ್ಟ ಫಲಗಳನ್ನೂ, ಸುಖದುಃಖ, ಯಶಾಪಯಶ, ಊರ್ಜಿತ ಫಲ ಅಥವಾ ತೀಕ್ಷ್ಣವಾದ ಶಿಕ್ಷೆಯನ್ನೂ ವಿಧಿಸುತ್ತದೆ. ಅಥವಾ ನಮ್ಮ ಹಿಂದಿನ ಜನ್ಮದ ಬಲವತ್ತರವಾದ ಆಸೆಯೂ ನಮ್ಮ ಮುಂದಿನ ಜನ್ಮವನ್ನು ನಿಶ್ಚಯಿಸಬಹುದು. ಈ ನಿಸರ್ಗದತ್ತ ಫಲಕ್ಕೆ ಗಣಿತದಲ್ಲಿಯ ಅಚ್ಚುಕಟ್ಟಾದ ನಿಯಮಗಳ ಸ್ವರೂಪವನ್ನು ಕೊಡಬಹುದು. ಯಾಕೆಂದರೆ, ಈ ನಿಯಮಗಳಿಗನುಸರಿಸಿ ನಮ್ಮ ಅಪರಾಧಗಳಿಗೆ—ನಾವು ಎರಡನೆಯವರ ಮೇಲೆ ಉಂಟುಮಾಡಿದ ಸಂಕಟ ಅಥವಾ ದುಃಖಗಳಿಗೆ—ತಕ್ಕಂತೆ ಯೋಗ್ಯ ಶಿಕ್ಷೆಯು—ನಾವು ಉಂಟುಮಾಡಿದ ದುಃಖದಷ್ಟೇ ಪ್ರತಿಫಲವು—ಸಿಗಬೇಕೆಂಬುದು—ಹಲ್ಲಿಗೆ ಹಲ್ಲು, ಕೈಗೆ ಕೈ ಎಂಬ ಅನಿವಾರ್ಯ ನಿಯಮವು ಈ ಜಡನಿಸರ್ಗದ ಕರ್ಮವಿಪಾಕವಾಗಿದೆ. ಈ ನಿಯಮಕ್ಕನುಸರಿಸಿ ವಿಧಿಯು ಗಣಿತದಿಂದ ನಮ್ಮ ಪಾಪಪುಣ್ಯಗಳನ್ನು ತೂಗಿ, ಆ ಆ ಅಪರಾಧಗಳಿಗೆ ಯೋಗ್ಯವಾದ ಶಿಕ್ಷೆಯನ್ನೂ, ಪುಣ್ಯಗಳಿಗೆ ಯೋಗ್ಯ ಪ್ರತಿಫಲವನ್ನೂ ವಿಧಿಸುತ್ತದೆ. ಈ ಪದ್ಧತಿಯ ಪ್ರಕಾರ ನಮಗೆ ಒಂದೇ ಅಪರಾಧಕ್ಕೆ ಎರಡು ಸಾರೆ ಶಿಕ್ಷೆಯನ್ನು ಅನುಭವಿಸಬೇಕಾಗುತ್ತದೆ. ಅಥವಾ ಒಂದೇ ಪುಣ್ಯಕ್ಕೆ ಎರಡು ಸಾರೆ ಫಲಗಳು ಸಿಗುತ್ತವೆ. ಯಾಕೆಂದರೆ, ಪಾಪಿಯು ಮೊದಲು ನರಕದಲ್ಲಿಯ

ದುಃಖವನ್ನು ಅನುಭವಿಸಿ ಪುನಃ ಈ ಲೋಕದ ಜನ್ಮದಲ್ಲಿ ಮತ್ತೆ ಕಷ್ಟಕ್ಕೆ ಈಡಾಗುತ್ತಾನೆ ಮತ್ತು ಪುಣ್ಯವಂತನು ಸ್ವರ್ಗಸುಖವನ್ನು ಅನುಭವಿಸಿ, ಈ ಲೋಕದಲ್ಲಿ ಅದೇ ಪುಣ್ಯದಿಂದ ಮತ್ತೆ ಉನ್ನತ ಸುಖಕಾರಕ ಭೋಗ ಗಳಿಂದ ಯುಕ್ತವಾದ ಜನ್ಮವನ್ನು ಪಡೆಯುತ್ತಾನೆ.

ಇದು ಕರ್ಮಫಲದ ಸಾಮಾನ್ಯ ಜನರ ಕಲ್ಪನೆಯು. ಆದರೆ, ಈ ಕಲ್ಪನೆಯು ತಾತ್ವಿಕ ವಿಚಾರಕ್ಕೆ ಆಸ್ಪದವನ್ನು ಕೊಡುವದಿಲ್ಲ. ಮತ್ತು ಈ ಜೀವಿತದ ಯೋಗ್ಯವಾದ ಅರ್ಥವು ಇದರಿಂದ ಆಗುವದಿಲ್ಲ. ಅನಂತಕಾಲದ ವರೆಗೆ, ಅಜ್ಞಾನದಿಂದ ಜನ್ಮಮರಣ ಚಕ್ರದಲ್ಲಿ ಜೀವನು ತಿರಗಾಡುತ್ತ ಅಂತ್ಯದಲ್ಲಿ ಒಂದು ದಿನ ಈ ಚಕ್ರದಿಂದ ಮುಕ್ತನಾಗುವದಿಷ್ಟೇ, ಇಷ್ಟು ವಿಶಾಲವಾದ ವಿಶ್ವರಚನೆಯ ಉದ್ದೇಶವಿರಲಾರದು. ಮತ್ತು ವಿಶ್ವದಲ್ಲಿಯ ಇಷ್ಟು ವಿವಿಧವಾದ ರಚನೆಯ ಅಸ್ತಿತ್ವದ ಅರ್ಥವು ಇಷ್ಟೇ ಇರಲಾರದು. ಕೇವಲ ಪುಣ್ಯಪಾಪಗಳ ಶಾಲೆಯಂತಿದ್ದ, ಅಥವಾ ಜೀವನು ಮಾಡಿದ ಪುಣ್ಯಪಾಪಗಳಿಗೆ ಸುಖ ಅಥವಾ ದುಃಖಕಾರಕ ಫಲಗಳನ್ನು ವಿಧಿಸಲಿಕ್ಕೆ ಕೇವಲ ಸಾಧನವಾದ ಈ ವಿಶ್ವವು ವಿಚಾರವಂತರ ಬುದ್ಧಿಗೆ ಉತ್ತೇಜನ ವನ್ನು ಕೊಡುವದಿಲ್ಲ. ನಮ್ಮ ಜೀವವು, ಅಥವಾ ಆತ್ಮನು ತತ್ವತಃ ಅಮರ, ಅವ್ಯಯ ಮತ್ತು ಜ್ಞಾನಮಯನಿದ್ದ ಪಕ್ಷಕ್ಕೆ ಅವನು ಈ ಪ್ರಕಾರದ ಗ್ರಾಮ್ಯ ಮತ್ತು ಕಾಡು ಜನರಿಗೆ ಒಪ್ಪುವ ನೈತಿಕ ಶಿಕ್ಷಣದ ವಿಶ್ವಶಾಲೆಯಲ್ಲಿ ಶಿಕ್ಷಣ ಹೊಂದಲಿಕ್ಕೇ ಕಳಿಸಲ್ಪಟ್ಟಿರುವನೆಂದು ಹೇಳಲಿಕ್ಕೆ ಬರುವದಿಲ್ಲ. ಆದರೆ, ವಿಶ್ವರಚನೆಯ ಅಡಿಯಲ್ಲಿದ್ದ ಇದಕ್ಕಿಂತ ಮಹತ್ವದ ಹೇತುವನ್ನು ಕಂಡು ಹಿಡಿದು, ಈ ಅಜ್ಞಾನ ಸ್ಥಿತಿಯಲ್ಲಿಯೇ ಅದನ್ನು ಸಾಕ್ಷಾತ್ಕರಿಸುವ ಉದ್ದೇಶ ದಿಂದ ಈ ಜಗತ್ತಿನಲ್ಲಿ ಅವನ ಅಸ್ತಿತ್ವವು ಇರುವದೆಂದು ತಿಳಿದರೆ ಮಾತ್ರ ಅದು ಬುದ್ಧಿವಂತರ ಬುದ್ಧಿಗೆ ಪ್ರಚೋದನೆಯನ್ನುಂಟು ಮಾಡಬಲ್ಲದು. ಜೀವನು ಈ ವಿಶ್ವದ ಒಂದು ಮಹತ್ತರವಾದ ಹೇತುವನ್ನು ಸಾಧ್ಯಗೊಳಿಸು ವದಕ್ಕೋಸ್ಕರ ತನ್ನ ಅನಾದ್ಯನಂತ ಅವ್ಯಯಸ್ಥಾನದಿಂದ, ಈ ಮರ್ಯಾ ದಿತವಾದ ಅಚೇತನ ಮಹಾಭೂತಗಳಲ್ಲಿ ಮುಳುಗಿ ತನ್ನ ಆತ್ಮದ ನಿಜವಾದ ಸ್ವರೂಪದ ಜ್ಞಾನವನ್ನು ಪ್ರತ್ಯಕ್ಷ ಅನುಭವಕ್ಕೆ ತರುವ ಮಾರ್ಗದಿಂದ

ನಡೆದಿದ್ದರೆ; ಇದೇ ಜೀವನ ಎಲ್ಲ ಕ್ರಿಯೆಯ ನಿಜವಾದ ಅರ್ಥವಿದ್ದರೆ, ಈ ನೈತಿಕ ಮೂಲ್ಯಗಳಿಗಿಂತ— ಅಂದರೆ, ಅಜ್ಞಾನಿಯಾದ ಶಿಶುವನ್ನು ನೀತಿಯ ನಿಯಮಗಳ ಬೆದರಿಕೆಯಿಂದ ಅಥವಾ ಬಲಾತ್ಕಾರದಿಂದ ಸದ್ವರ್ತನೆಗೆ ಹಚ್ಚುವದಕ್ಕಿಂತ ಹೆಚ್ಚು ಮಹತ್ವದ ಅರ್ಥವು ಈ ಕ್ರಿಯೆಗಳಿಗೆ ಇರಬೇಕು. ಜೀವನು ಧರಿಸಿದ ಈಗಿನ ಅಜ್ಞಾನ ಕವಚವನ್ನು ಸಾವಕಾಶ ಕಿತ್ತೊಗೆದು ಅಂತ್ಯದ ಅಮರ ಜ್ಞಾನ-ಶಕ್ತಿ-ಸೌಂದರ್ಯದ ಮತ್ತು ದೈವೀ ಪಾವಿತ್ರ್ಯದ ಆದಿಸ್ಥಾನದ ಕಡೆಗೇ ಅವನ ಗಮನವಿರಬೇಕು. ಈ ಮಹತ್ತರವಾದ ಹೇತುವು ಸಾಧ್ಯವಾಗಬೇಕಾದರೆ, ಈ ನೈತಿಕ ಮೂಲ್ಯಗಳು ಬಾಲಿಶ ಸಾಧನಗಳಾಗಿವೆ. ಜೀವನು ಅಮರತ್ವ ಸಂಪಾದನೆಯ ಉದ್ದೇಶದಿಂದ ಉತ್ಪನ್ನ ಮಾಡಲ್ಪಟ್ಟ ಕೃತಕ ವಸ್ತುವೆಂದು ನಾವು ತಿಳಿದರೂ— ಈ ನಿಸರ್ಗ ದಿಂದ ಪಾಠ ಕಲಿಯುವ ಒಂದು ಶಿಶುವಾಗಿದ್ದರೂ—ಅವನ ಪ್ರಗತಿಯು ಈ ಗ್ರಾಮ್ಯ ಅಥವಾ ಅಸಭ್ಯ ನೈತಿಕ ನಿಯಮಗಳಿಂದಾಗದೆ, ಅದು ಒಂದು ವಿಶಾಲವಾದ ಬೆಳವಣಿಗೆಯ ನಿಯಮಗಳಿಂದಲೇ ಆಗತಕ್ಕದ್ದು. ಕರ್ಮ ವಿಪಾಕವು ಜೀವನ ಅತಿಸಂಕುಚಿತ ಭಾಗವಾದ ಮನಸ್ಸು ಮತ್ತು ಪ್ರಾಣಗಳ ನಿಯಮವಾಗಿದ್ದು, ಅವುಗಳ ಪರಿಮಿತವಾದ ಜೀವಿತಕ್ಕೂ, ಅವುಗಳ ಇಚ್ಛೆ ಅಥವಾ ಅಲ್ಪ ಸುಖದುಃಖಗಳಿಗೂ ಸಂಬಂಧಿಸಿರುತ್ತದೆ. ಈ ಅಲ್ಪ ನಿಯಮ ಗಳು ಆತ್ಮನ ಅಪಾರ ಸಾಮ್ರಾಜ್ಯದಲ್ಲಿ ಕಾರ್ಯಕಾರಿಯಾಗಲಾರವು. ಮೇಲಿನ ವಿಚಾರ ಕ್ಷೇತ್ರಕ್ಕೇರಿದ ಮಾನವನ ಕಲ್ಪನೆಗೆ ಈ ನಿಯಮಗಳು ಗ್ರಾಹ್ಯವಾಗಲಾರವು. ಯಾಕಂದರೆ ಇವು ಮಾನವನ ಅಜ್ಞಾನ ಮುದ್ರೆ ಯಿಂದ ಮುದ್ರಿತವಾಗಿವೆ.

ಆದರೆ, ಈ ಪ್ರಕಾರ ಅಲ್ಪ, ಸಂಕುಚಿತ, ವ್ಯಾವಹಾರಿಕ ಕೊಡ ಕೊಳ್ಳುವ ನಿಯಮಗಳಿಂದ ಬಂಧಿಸಲ್ಪಟ್ಟ ಕರ್ಮ ಮೀಮಾಂಸೆಯನ್ನು ನಾವು ಹೆಚ್ಚು ವ್ಯಾಪಕ ರೀತಿಯಿಂದ, ಹೆಚ್ಚು ಸ್ತುತ್ಯವಾಗುವಂತೆ, ಅಥವಾ ವಿಶ್ವವ್ಯಾಪೀ ನಿಯಮಕ್ಕೆ ಅನುಸಾರವಾಗಿ ವಿವರಿಸಬಹುದು. ಈ ವಿಶ್ವದಲ್ಲಿ ನಾವು ಒಂದು ಅಭೇದ್ಯವಾದ ಕಾರ್ಯಕಾರಣ ಭಾವವನ್ನು ನೋಡುತ್ತೇವೆ. ಪ್ರತಿಯೊಂದು ಕ್ರಿಯೆಗೆ ಅದರ ನಿಸರ್ಗಸಿದ್ಧವಾದ ಪರಿಣಾಮವು ಇರಲಿಕ್ಕೇ ಬೇಕು. ಈ ಜೀವಿತದಲ್ಲಿ ಯಾವದಾದರೊಂದು ಕ್ರಿಯೆಯ ಪರಿಣಾಮವು

ಕಂಡುಬರದಿದ್ದರೆ, ಮುಂದೆ ಎಂದಾದರೂ ಅದರ ಫಲಭೋಗವು ತಪ್ಪಲಾರ ದೆಂಬದು ನಿಶ್ಚಿತ ಪ್ರತಿಯೊಬ್ಬ ವ್ಯಕ್ತಿಯು ತಾನು ಮಾಡಿದ ಕರ್ಮಭೋಗ ವನ್ನು ತಾನೇ ಉಣ್ಣಬೇಕು. ಅವನು ತನ್ನ ಕರ್ಮದಿಂದುಂಟುಮಾಡಿದ ವಂದ್ಯ ಅಥವಾ ನಿಂದ್ಯ ಶಕ್ತಿಯು, ಅಂತ್ಯದಲ್ಲಿ ಅವನನ್ನೇ ಸೇರಬೇಕು. ಈ ಜನ್ಮದಲ್ಲಿ ಕಂಡುಬರದಿದ್ದರೆ, ಅವನ ಮುಂದಿನ ಅವಸ್ಥೆಯಲ್ಲಿ ಅದು ಕಂಡು ಬರಬೇಕು. ಹಾಗೂ ಒಬ್ಬ ವ್ಯಕ್ತಿಯು ಮೃತನಾದ ನಂತರ, ಅವನ ಕ್ರಿಯೆಯ ಪರಿಣಾಮವು ಇಲ್ಲಿ ಅನ್ಯ ವ್ಯಕ್ತಿಗಳ ಮೇಲೂ ಆಗಬಹುದು. ಈ ಪ್ರಕಾರದ ಘಟನೆಯನ್ನು ನಾವು ಯಾವಾಗಲೂ ನೋಡುತ್ತೇವೆ. ಮನುಷ್ಯನು ಜೀವಂತ ಇರುವಾಗ್ಯೂ, ನಾವು ಹಲವು ಸಾರೆ ಅವನ ಕ್ರಿಯೆಯ ಪರಿಣಾಮವು ಇಲ್ಲಿ ಅನ್ಯರ ಮೇಲೆ ಆದದ್ದನ್ನು ನೋಡುತ್ತೇವೆ. ಹೀಗೆ ಯಾಕಾಗುವದೆಂದರೆ, ಈ ವಿಶ್ವವು ಒಂದೇ ಅವಿಭಾಜ್ಯ ವಸ್ತು ವಾಗಿದ್ದು, ನಿಸರ್ಗದಲ್ಲಿಯ ಜೀವಿತನು ಪ್ರವಾಹ ರೂಪವಾಗಿದೆ. ಆದ್ದರಿಂದ ಯಾವ ವ್ಯಕ್ತಿಗೂ ಎರಡನೆಯವರ ಉಪಸರ್ಗವಿಲ್ಲದೆ ಅಥವಾ ಎರಡನೆ ಯವರಿಗೆ ತನ್ನ ಉಪಸರ್ಗ ತಟ್ಟದಂತೆ, ಅವನು ಎಷ್ಟು ಇಚ್ಛಿಸಿದಾಗ್ಯೂ ಇರುವದು ಶಕ್ಯವೇ ಇಲ್ಲ. ಅದೇ ಪ್ರಕಾರ, ಈ ವಿಶ್ವವ್ಯಾಪೀ ಪ್ರವಾಹರೂಪ ಜೀವಿತದ ಹೊರತಾಗಿ, ಜೀವನ ವ್ಯಕ್ತಿತ್ವದ ಅಸ್ತಿತ್ವವು ಪುನರ್ಜನ್ಮದಲ್ಲಿ ಇರುತ್ತಿದ್ದರೆ, ಅಥವಾ ಅವನಿಗೊಂದು ಸಂತತವಾಗಿ ಬೆಳೆಯುತ್ತಿರುವ ವ್ಯಕ್ತಿತ್ವ, ಸ್ವಭಾವ ಅಥವಾ ಅನುಭವವು ಇರತ್ತಿದ್ದರೆ, ಅವನಿಗೂ ಕೂಡ ತನ್ನ ಕ್ರಿಯೆಯ ಫಲದ ಅನುಭವವು ತನ್ನಿಂದ ಚಿರವಾಗಿ ಎಂದಿಗೂ ಮರೆಮಾಚಿರದೆ, ಅದು ತನ್ನ ಒಂದೇ ಒಂದಾದ ಬೆಳೆಯುತ್ತಿರುವ ಜೀವಿತದಲ್ಲಿ, ಎಂದಾದರೂ ಅವಶ್ಯವಾಗಿ ಬರಲೇಬೇಕೆನ್ನುವದೂ ಅಷ್ಟೇ ಸತ್ಯವಾಗಿದೆ. ಮನುಷ್ಯನ ಸ್ಥಿತಿಗತಿ, ಸ್ವಭಾವ, ಜೀವಿತದಲ್ಲಿಯ ಸ್ಥಾನ ಅಥವಾ ವಾತಾವರಣವು ಅವನ ಆಂತರಿಕ ಅಥವಾ ಬಾಹ್ಯ ಕ್ರಿಯೆಯ ಪರಿಣಾಮ ವಾಗಿಯೇ ಇರಬೇಕು. ಇವೆಲ್ಲವೂ ಹೇಳಲಿಕ್ಕೆ ಶಕ್ಯವಿಲ್ಲದ ಅಕಸ್ಮಾತ್ ಉತ್ಪನ್ನವಾದ ಭೋಗವಾಗಲಾರವು. ತಾನು ಹಿಂದೆಮಾಡಿದ ಕೃತ್ಯದ ಫಲವಾಗಿಯೇ ಈ ಜೀವನವು ಉಂಟಾಗುತ್ತದೆ ಈಗಿನ ಜನ್ಮಕ್ಕೆ ಕಾರಣ ವಾದವು ಹಿಂದಿನ ಜನ್ಮಗಳು, ಮುಂದಿನ ಜನ್ಮವನ್ನುಂಟುಮಾಡುವದು

ಈ ಜನ್ಮವು ಪ್ರತಿಯೊಬ್ಬನೂ ತಾನು ಬೆಳೆದದ್ದನ್ನೇ ಉಣ್ಣುತ್ತಾನೆ. ತಾನು ಉಂಟುಮಾಡಿದ ಸುಖವನ್ನೇ ಉಪಭೋಗಿಸುತ್ತಾನೆ. ತಾನು ನಿರ್ಮಿಸಿದ ದುಃಖವನ್ನೇ ಅನುಭವಿಸುತ್ತಾನೆ. ಇದೇ ಕರ್ಮದ ಅಬಾಧಿತ ನಿಯಮ ಅಥವಾ ಸಂಚಿತ, ಪ್ರಾರಬ್ಧ ಮತ್ತು ಕ್ರಿಯಮಾಣ ಕರ್ಮಗಳ ಸರಪಳಿಯು; ನಿಸರ್ಗ ಶಕ್ತಿಯ ಸತತ ಕಾರ್ಯವು ಈ ಸಿದ್ಧಾಂತದಿಂದಲೇ ನಮ್ಮ ಜೀವಿತ, ಸ್ವಭಾವ ಮತ್ತು ಕ್ರಿಯೆಗಳಿಗೆ ಮತ್ತು ಈ ವಿಶ್ವಕ್ಕೆ ನಿಜವಾದ ಅರ್ಥವು ಉಂಟಾಗುತ್ತದೆ. ಬೇರೆ ಯಾವ ಸಿದ್ಧಾಂತವೂ ಇಷ್ಟು ವ್ಯಾಪಕ ವಾದದ್ದಿರುವದಿಲ್ಲ. ಈ ಸಿದ್ಧಾಂತದ ಪ್ರಕಾರ ಮನುಷ್ಯನ ಸಂಚಿತ ಮತ್ತು ಪ್ರಾರಬ್ಧ ಕರ್ಮಗಳು ಮುಂದಿನ ಜನ್ಮ ಅಲ್ಲಿಯ ಕಾರ್ಯಕ್ಷೇತ್ರ ಮತ್ತು ಸುಖದುಃಖಾದಿ ಭೋಗಗಳನ್ನು ಗೊತ್ತುಪಡಿಸುತ್ತವೆಂದು ಸ್ಪಷ್ಟವಾಗುತ್ತದೆ. ಯಾಕಂದರೆ, ಇವೆಲ್ಲವೂ ಅವನ ಕಾರ್ಯಶಕ್ತಿಯಿಂದಲೇ ಉಂಟಾಗಿರುತ್ತವೆ. ಜೀವನ ಹಿಂದಿನ ಸ್ವಭಾವ ಮತ್ತು ಕೃತ್ಯಗಳು ಅವನ ಈಗಿನ ಇರುವಿಕೆಯನ್ನೂ ಭೋಗಗಳನ್ನೂ ರಚಿಸುತ್ತವೆ. ಅವನ ಈಗಿನ ಸ್ವಭಾವ ಮತ್ತು ಕೃತ್ಯಗಳು ಭವಿಷ್ಯತ್ಕಾಲದ ಇರುವಿಕೆಯನ್ನೂ ಭೋಗಗಳನ್ನೂ ರಚಿಸುತ್ತವೆ. ಮನುಷ್ಯನು ತನ್ನ ಉತ್ಪತ್ತಿಗೆ ತಾನೇ ಕಾರಣನಾಗಿರುತ್ತಾನೆ. ತನ್ನ ದೈವದ ಕರ್ತನೂ ಅವನೇ. ಇದು ಬುದ್ಧಿಪ್ರಾಮಾಣ್ಯವಾದಕ್ಕೆ ಪೂರ್ಣ ಹೊಂದುವಂಥ ಅಪವಾದವಿಲ್ಲದ ನಿಯಮವಾಗಿದೆ. ಇದೇ ಕರ್ಮ ವಿಪಾಕವು. ಈ ವಿಶ್ವಯಂತ್ರದ ಅಬಾಧಿತ ನಿಯಮವಾಗಿದೆ. ಯಾಕಂದರೆ, ನಾವು ಹಿಂದೆ ಪ್ರತಿಪಾದಿಸಿದ ಪುನರ್ಜನ್ಮದ ವಿವೇಚನೆಯನ್ನು ಒಪ್ಪಿದರೆ, ಅದರಿಂದ ಈ ನಿಯಮಗಳು ವಾದಕ್ಕೆ ಆಸ್ಪದವಿಲ್ಲದಷ್ಟು ವ್ಯವಹಾರ್ಯ ಮತ್ತು ಸ್ಪಷ್ಟವಾಗುತ್ತದೆ.

ನಾವು ಮೇಲೆ ವಿವೇಚಿಸಿದ ಸಿದ್ಧಾಂತದಿಂದ ಎರಡು ನಿಗಮನವನ್ನು ತೆಗೆಯಬಹುದು ಮೊದಲನೆಯದು : ನಮ್ಮ ಕಾರ್ಯಶಕ್ತಿಯು ಯಾವ ಪ್ರಕಾರದ್ದಿರುವದೋ ಅದೇ ಪ್ರಕಾರದ್ದು ಆದರ ಫಲವಿರಬೇಕು. ಸತ್ಕೃತ್ಯದಿಂದ ಸತ್ಫಲವೂ ದುಷ್ಕೃತ್ಯದಿಂದ ದುಷ್ಟ ಫಲವೂ ಉಂಟಾಗತಕ್ಕದ್ದು. ಎರಡನೆಯದೆಂದರೆ : ಕರ್ಮಫಲವು ನ್ಯಾಯಕ್ಕೆ ಯೋಗ್ಯವಾದದ್ದಿರ

ತಕ್ಕದ್ದು. ಆದ್ದರಿಂದ ಸತ್ಕರ್ಮಗಳ ಫಲವು ಸುಖರೂಪವಾದದ್ದೂ, ಜೀವಿತದಲ್ಲಿ ಸುದೈವ ಸುಖಸಂಪತ್ತಿಗಳನ್ನು ಕೊಡುವಂಥದೂ, ದುಷ್ಟ ಕರ್ಮಗಳ ಫಲವು ದುಃಖರೂಪವಾದದ್ದೂ ದುರ್ದೈವ, ಕಷ್ಟ, ದಾರಿದ್ರ್ಯಾದಿ ಅನಿಷ್ಟಫಲಯುಕ್ತವಾದದ್ದೂ ಇರತಕ್ಕದ್ದು. ಆದರೆ ಈ ಎರಡೂ ನಿಗಮನ ಗಳು ಮೂಲ ಸಿದ್ಧಾಂತದಷ್ಟು ಸಾಮಾನ್ಯ ಸ್ವರೂಪದವೂ ವಿಶ್ವಸನೀಯ ವಾದವೂ ಇದ್ದದ್ದು ಮನುಷ್ಯನ ಸ್ಥೂಲ ವ್ಯವಹಾರದ ಅವಲೋಕನೆಯಿಂದ, ಕಂಡುಬರುವದಿಲ್ಲ. ಯಾಕಂದರೆ, ನಿಜವಾದ ತತ್ವವನ್ನರಿಯದ ವ್ಯಾವ-ಹಾರಿಕರು ಈ ನಿಯಮಗಳನ್ನು ತಮ್ಮ ದೃಷ್ಟಿಯ ಎದುರಿಗಿದ್ದ ಕೆಲವು ಸಂಗತಿಗಳಿಗಷ್ಟೇ ಹಚ್ಚುತ್ತಾರೆ. ಈ ವ್ಯಾವಹಾರಿಕರ ತಿಳುವಳಿಕೆಯಲ್ಲಿ, ಅಂಶತಃ ಸತ್ಯವಿದ್ದಾಗ್ಯೂ, ಅವರಿಗೆ ಈ ತತ್ವದ ಪೂರ್ಣ ಅರ್ಥವಾಗಿರುವ ದಿಲ್ಲ. ಈ ವಿಶ್ವದಲ್ಲ ಎಲ್ಲ ಪ್ರಾಣಿಗಳ ಕರ್ಮವನ್ನು ನಿರೀಕ್ಷಿಸುತ್ತಿರುವ ಒಂದು ಸಮಷ್ಟಿರೂಪ ನ್ಯಾಯಶಕ್ತಿಯಿದ್ದು, ಅದು ಈ ಜೀವಿತದಲ್ಲಿಯ ಎಲ್ಲ ಕ್ರಿಯೆಗಳನ್ನು ಒಂದು ಅಚಿಂತ್ಯ ಪ್ರಕಾರದಿಂದ ನಿಯಮನ ಮಾಡು-ತ್ತದೆ. ಆದರೆ ಈ ಶಕ್ತಿಯ ಸಂಪೂರ್ಣ ಕಾರ್ಯವು ನಮ್ಮ ಸ್ಥೂಲ ದೃಷ್ಟಿಗೆ ಗೋಚರವಾಗುವದಿಲ್ಲ. ವ್ಯಕ್ತಿಯ ಒಂದಕ್ಕೊಂದು ಸಂಬಂಧ ವಿಲ್ಲದ ವಿವಿಧ ಕಾರ್ಯರಾಶಿಯನ್ನು, ಈ ಸಮಷ್ಟಿರೂಪ ಸೂಕ್ಷ್ಮವಾದ ನ್ಯಾಯಶಕ್ತಿಯು ಸ್ಥೂಲದೃಷ್ಟಿಗೆ ಅಗೋಚರವಾದಾಗ್ಯೂ ಒಂದು ಬಲವತ್ತರ ವಾದ ಮತ್ತು ಅಚಲ ಸೂತ್ರದಿಂದ ಬಂಧಿಸುತ್ತದೆ. ಈ ಎಲ್ಲ ದೃಷ್ಟಾದೃಷ್ಟ ಕರ್ಮಗಳ ಫಲವು ಈ ನ್ಯಾಯಶಕ್ತಿಯಿಂದ ನಮಗೆ ಈ ವ್ಯವಹಾರದಲ್ಲಿ ಲಭಿಸುತ್ತಿರುವದರಿಂದ, ಈಗಿನ ನಮ್ಮ ಸ್ಥೂಲ ಕ್ರಿಯೆಗಳ ಮಾನದಿಂದ ನಮ್ಮ ಯಶಾಪಯಶ, ಸುಖದುಃಖ, ಅಥವಾ ಇಷ್ಟಾನಿಷ್ಟ ಫಲಗಳನ್ನು ಅಳೆಯುವದು ಶಕ್ಯವಿಲ್ಲ ಇಲ್ಲಿ ಉದ್ಭವಿಸುವ ಮತ್ತೊಂದು ಪ್ರಶ್ನೆಯೆಂದರೆ, ನಮ್ಮ ಕ್ರಿಯೆಗಳಷ್ಟೇ—ಇಷ್ಟಾನಿಷ್ಟ ಕರ್ಮಗಳಷ್ಟೇ—ಯಾಕೆ ಫಲಗಳನ್ನು ಕೊಡಬೇಕು. ನಮ್ಮ ದುಷ್ಟಹೇತು ಅಥವಾ ಸದಿಚ್ಛೆ, ದುಷ್ಟ ಅಥವಾ ಸುಷ್ಟ ವಿಚಾರಗಳು ಅಥವಾ ಬುದ್ಧಿಯು ಯಾಕೆ ಫಲದ್ರೂಪವಾಗಬಾರದು? ಇದಕ್ಕೆ ಉತ್ತರವೇನಂದರೆ, ಪ್ರತ್ಯಕ್ಷ ಶಾರೀರಿಕ ಕ್ರಿಯೆಯ ಹೊರತಾಗಿ, ಈ ನಮ್ಮ ಮಾನಸಿಕ ಅಥವಾ ಬೌದ್ಧಿಕ ಕ್ರಿಯೆಗಳಿಗೂ ಯೋಗ್ಯವಾದ

ಫಲವು ಅವಶ್ಯವಾಗಿ ಇರಲೇಬೇಕೆಂದು ಹೇಳಬಹುದು, ಆದರೆ ಮನುಷ್ಯನ ಸ್ಥೂಲ ಕ್ರಿಯೆಯು, ಸೂಕ್ಷ್ಮ ಮಾನಸ ಕ್ರಿಯೆಯ ಪರಿಣಾಮವಿರುವದರಿಂದ; ಮನುಷ್ಯನ ಜೀವಿತದಲ್ಲಿ ಶಾರೀರಿಕ ಕ್ರಿಯೆಯೇ ಹೆಚ್ಚು ಪ್ರಮಾಣದಿಂದಿರುವದರಿಂದ; ಮಾನಸಿಕ ಕ್ರಿಯೆಯು ಹೆಚ್ಚಾಗಿ ಇಚ್ಛೆಯ ವಿರುದ್ಧವಾಗಿ ಆಗುತ್ತಿರುವ ಕಾರಣ, ಅದಕ್ಕೆ ವ್ಯಕ್ತಿಯು ಯಾವಾಗಲೂ ಹೊಣೆಗಾರನಿರದ್ದರಿಂದ; ತನ್ನ ಸ್ಥೂಲ ಕ್ರಿಯೆಗೇ ಮನುಷ್ಯನು ಹೆಚ್ಚು ಹೊಣೆಗಾರನಿದ್ದು, ಅದು ಅವನ ಇಚ್ಛೆಯ ಮೇಲೆ ಅವಲಂಬಿಸಿರುವದರಿಂದ; ಮುಖ್ಯತಃ ಕ್ರಿಯೆಯೇ ದೈವವನ್ನು ನಿಶ್ಚಯಿಸುತ್ತದೆ ಮನುಷ್ಯನು ಈಗಿನ ಅಥವಾ ಭವಿಷ್ಯ ಜೀವನವನ್ನು ನಿಶ್ಚಯಿಸುವಲ್ಲಿ ಕರ್ಮವೇ ಬಲವತ್ತರವಾದ ಕಾರಣವಾಗಿರುತ್ತದೆ. ಇದೇ ಪೂರ್ಣ ಕರ್ಮವಿಪಾಕದ ಅರ್ಥವು

ಆದರೆ, ನಾವು ಪ್ರಥಮದಲ್ಲಿ ಲಕ್ಷ್ಯದಲ್ಲಿಡತಕ್ಕ ಸಂಗತಿಯೆಂದರೆ, ಈ ಕಾರ್ಯಕಾರಣಗಳ ಸರಪಳಿಯು ಅಥವಾ ಕರ್ಮನಿಯಮವು ಒಂದು ಸ್ಥೂಲ ಅಚೇತನ ಯಂತ್ರವಾಗಿರುತ್ತದೆ. ಆದ್ದರಿಂದ ಅದೊಂದು ವಿಶ್ವದಲ್ಲಿಯ ಜೀವಗಳ ಜೀವಿತದ ಅಂತಿಮವನ್ನು ವಿಧಿಸುವ ಅಬಾಧಿತವಾದ, ಕೇವಲ ಒಂದೇ ಒಂದಾದ ಸಾರ್ವಭೌಮ ಶಕ್ತಿಯೆಂದು ಹೇಳಲಿಕ್ಕೆ ಬರುವದಿಲ್ಲ. ಹೀಗಿದ್ದ ಪಕ್ಷಕ್ಕೆ ಈ ಎಲ್ಲ ವಿಶ್ವವೂ ಒಂದು ದೊಡ್ಡ ಯಂತ್ರದ ಸ್ವರೂಪದ್ದಾಗುತ್ತಿತ್ತು. ಹಲವು ಜನರು ಈ ವಿಶ್ವವು ಕೇವಲ ಯಾಂತ್ರಿಕ ನಿಯಮ ಮತ್ತು ಕ್ರಿಯೆಯ ಗತಿಯಾಗಿರುವದೆಂದೂ, ಅದರ ಹಿಂದೆ ಅಥವಾ ಅದರಲ್ಲಿ ಚೇತನ ಅಥವಾ ಇಚ್ಛಾಶಕ್ತಿಯು ಇರುವದಿಲ್ಲವೆಂದೂ ಪ್ರತಿಪಾದಿಸುತ್ತಾರೆ. ಹೀಗಿದ್ದ ಪಕ್ಷಕ್ಕೂ ಎಲ್ಲ ಬುದ್ಧಿಪ್ರಾಮಾಣ್ಯವಾದಿಗಳಿಗೆ ಸಮಾಧಾನ ಮಾಡುವಷ್ಟು, ನಮ್ಮ ಸತ್ಯ ಮತ್ತು ನ್ಯಾಯ ಬುದ್ಧಿಯನ್ನು ತೃಪ್ತಿಗೊಳಿಸುವಷ್ಟು ಈ ಕರ್ಮನಿಯಮ ಅಥವಾ ಕರ್ಮಗತಿಯು ಯೋಗ್ಯವಾದದ್ದು ಇದ್ದೇ ಇದೆ. ಈ ಕರ್ಮಮೀಮಾಂಸೆಯಲ್ಲಿ ಎಲ್ಲ ಅಂಗಗಳಿಂದ ಒಪ್ಪುವ ಸತ್ಯತೆಯೂ ಸೌಂದರ್ಯವೂ ಇರುವದಲ್ಲದೆ, ಅದರ ಕಾರ್ಯದಲ್ಲಿ ಗಣಿತಜ್ಞರು ಅಂಕಿಸಂಖ್ಯೆಗಳಿಂದ ಸಿದ್ಧಮಾಡುವಷ್ಟು ಅಚ್ಚುಕಟ್ಟುತನವೂ ಕಂಡುಬರುತ್ತದೆ. ಆದರೆ ಈ ವಿಶ್ವವೆಲ್ಲವೂ ಕೇವಲ ಯಾಂತ್ರಿಕ ಕರ್ಮ

ನಿಯಮಗಳಿಂದ ಬಂಧಿಸಲ್ಪಟ್ಟಿಲ್ಲ. ಚೈತನ್ಯ ಅಥವಾ ಜ್ಞಾನವು ಈ ವಿಶ್ವ-ರಚನೆಯಲ್ಲಿಯ ಒಂದು ಬಲವತ್ತರವಾದ ಶಕ್ತಿಯಾಗಿರುತ್ತದೆ. ವಿಶ್ವ-ಚಾಲನೆಯು ಕೇವಲ ಅಚೇತನ ಯಂತ್ರಶಕ್ತಿಯಿಂದಾಗುತ್ತಿರದೆ, ಅದರ ಹಿಂದಿನ ಚೇತನ ವಸ್ತುವಿನ ಶಕ್ತಿಯು ಅದರಲ್ಲಿದ್ದದ್ದು ಕಂಡುಬರುತ್ತದೆ. ನಿಸರ್ಗ ಮತ್ತು ಅದರಲ್ಲಿಯ ನಿಯಮಗಳಷ್ಟೇ ಪೂರ್ಣ ವಿಶ್ವವಾಗಿರದೆ, ಸಮಷ್ಟಿರೂಪ ಚೈತನ್ಯವೂ ಅದರಲ್ಲಿದೆ. ಸ್ಥೂಲದೇಹ, ಪ್ರಾಣ ಅಥವಾ ಮನಸ್ಸುಗಳ ಕ್ರಿಯೆಯಷ್ಟೇ ಈ ನಿಸರ್ಗದ ಪ್ರಾಣಿಗಳಲ್ಲಿರದೆ, ಜ್ಞಾನಶಕ್ತಿ ಸಂಪನ್ನನಾದ ಜೀವಾತ್ಮನೂ ಅವುಗಳಲ್ಲಿ ವಾಸಿಸುತ್ತಿರುತ್ತಾನೆ. ಹೀಗಿರ ದಿದ್ದರೆ, ಜೀವನ ಪುನರ್ಜನ್ಮಕ್ಕೆ ಅಥವಾ ಕರ್ಮನಿಯಮಗಳಿಗೆ ಅವಕಾಶವು ದೊರೆಯುತ್ತಿರಲಿಲ್ಲ. ನಮ್ಮ ಜೀವಿತದ ಅಂತಿಮ ಸತ್ಯವು ಅಚೇತನ ಯಂತ್ರತುಲ್ಯ ನಿಸರ್ಗದ ನಿಯಮಗಳಿರದೆ, ಆತ್ಮವಿದ್ದುದರಿಂದ, ನಮ್ಮ ಆತ್ಮವೇ—ಅಂದರೆ ನಾವೇ— ನಮ್ಮ ಉತ್ಕ್ರಾಂತಿಯನ್ನು ತತ್ವತಃ ನಿಶ್ಚಯಿಸುವವರಿದ್ದೇವೆ. ಮತ್ತು ಕರ್ಮಗಳ ನಿಯಮವು ನಾವು ನಮ್ಮ ಉತ್ಕ್ರಾಂತಿಯ ಸಲುವಾಗಿ ಉಪಯೋಗಿಸುತ್ತಿರುವ ಒಂದು ಸಾಧನವಾಗಿರುತ್ತದೆ. ನಮ್ಮ ಆತ್ಮ ಅಥವಾ ಜೀವನು ಈ ಕರ್ಮವಿಪಾಕದ ಜಡನಿಯಮಗಳಿಗಿಂತ ಹೆಚ್ಚು ಬಲಶಾಲಿಯಾಗಿದ್ದಾನೆ. ವಿಶ್ವದಲ್ಲಿ ನಿಯಮಗಳಿವೆ; ಅದೇ ಪ್ರಕಾರ ಆತ್ಮನ ಸ್ವಾತಂತ್ರ್ಯವೂ ಇದೆ. ಧರ್ಮವಿಧಿ ಅಥವಾ ಆಚಾರ ಪದ್ಧತಿಯು ನಮ್ಮ ಇರುವಿಕೆಯ ಒಂದು ಪಾರ್ಶ್ವವಾಗಿದ್ದು, ಅವುಗಳ ಸಾಮ್ರಾಜ್ಯವು ನಮ್ಮ ಬಾಹ್ಯದೇಹ, ಪ್ರಾಣ ಮತ್ತು ಬುದ್ಧಿಗಳ ಮೇಲೆಯೇ ಇರುತ್ತದೆ. ಯಾಕಂದರೆ, ಇವೇ ನಿಸರ್ಗಯಂತ್ರದ ನಿಯಮಗಳಿಗೆ ಒಳಪಟ್ಟಿರುತ್ತವೆ ಇವುಗಳಲ್ಲಿಯೂ ನಿಸರ್ಗದ ಯಾಂತ್ರಿಕ ಶಕ್ತಿಯು ಸ್ಥೂಲ ಶರೀರ ಮತ್ತು ಭೌತಿಕ ಪದಾರ್ಥಗಳ ಮೇಲಷ್ಟೇ ಸಂಪೂರ್ಣ ವಾಗಿದ್ದು, ಪ್ರಾಣಮಯ ಕ್ಷೇತ್ರದಲ್ಲಿ ಈ ನಿಯಮಗಳು ಹೆಚ್ಚು ಸಡಿಲಾದವೂ, ದುರ್ಬಲವಾದವೂ ಆಗುತ್ತವೆ ; ಮತ್ತು ಈ ನಿಯಮಗಳ ಕಾರ್ಯ ಪದ್ಧತಿಯು ಅಲ್ಲಿ ಯಾಂತ್ರಿಕ ಕ್ರಿಯಾಪದ್ಧತಿಗಿಂತ ಹೆಚ್ಚು ಸ್ವತಂತ್ರ ವಾದದ್ದೂ ಇರುತ್ತದೆ ಮನೋಮಯ ಕ್ಷೇತ್ರದಲ್ಲಂತೂ ಈ ನಿಯಮಗಳು ಇದಕ್ಕಿಂತ ಹೆಚ್ಚು ಶಿಥಿಲವಾಗುತ್ತವೆ. ಆತ್ಮನ ಸ್ವಾತಂತ್ರ್ಯವು ನಾವು

ಹೆಚ್ಚು ಒಳಪ್ರದೇಶದಲ್ಲಿ ಪ್ರವೇಶಿಸಿದಂತೆ, ಹೆಚ್ಚು ಪ್ರಕಟವಾಗುತ್ತ ನಡೆಯುತ್ತದೆ; ಆತ್ಮನ ವಿಹಾರಶಕ್ತಿಯು ಬೆಳೆಯುತ್ತ ಹೋಗುತ್ತದೆ. ಯಾಕಂದರೆ, ಪ್ರಕೃತಿಯು ಕಾರ್ಯನಿಯಮಗಳ ಕ್ಷೇತ್ರವಾಗಿದ್ದು, ಜೀವಾತ್ಮ ಅಥವಾ ಪುರುಷನು ಈ ನಿಯಮ ಬಂಧನೆಗಳಿಗೆ ಅನುಮತಿಯನ್ನು ಕೊಡುವವನಾಗಿದ್ದಾನೆ. ಮತ್ತು ಸಾಮಾನ್ಯತಃ ಪುರುಷನು ಸಾಕ್ಷಿರೂಪನಾಗಿ ಸೃಷ್ಟಿಯ ಬಂಧನಕ್ಕೆ ಸಮ್ಮತಿಯನ್ನಿತ್ತಿದ್ದರೂ, ಅವನು ಇಚ್ಛಿಸಿದರೆ, ಸೃಷ್ಟಿಯ ಒಡೆಯ ಅಥವಾ ಈಶ್ವರನಾಗಬಲ್ಲನು.

ಜೀವಾತ್ಮನು ಕರ್ಮದ ಕೈಯಲ್ಲಿಯ ಸೂತ್ರದ ಗೊಂಬೆಯಂತೆ ಪರತಂತ್ರನಿರುವನೆಂದು ತಿಳಿಯುವದು ಯೋಗ್ಯವಾಗಲಾರದು. ಪ್ರಾರಬ್ಧ ಕರ್ಮದ ಗುಲಾಮನಂತೆ ಅವನು ವರ್ತಿಸಲಾರನು. ಕರ್ಮ ನಿಯಮಗಳು ಜೀವಾತ್ಮನನ್ನು ಅಷ್ಟು ಮಿಸುಕಾಡದಂತೆ ಬಂಧಿಸಲಾರವು. ಅವನಿಗೆ ಕಲ್ಪಿಸಿದ್ದಕ್ಕಿಂತ ಹೆಚ್ಚು ಸ್ವಾತಂತ್ರ್ಯವಿರುತ್ತದೆ. ಹಿಂದಿನ ಕರ್ಮಗಳ ಕೆಲವು ಪರಿಣಾಮವು ಈ ಜೀವಿತದಲ್ಲಿಯ ನಮ್ಮ ಸ್ಥಿತಿಗತಿಗಳನ್ನು ಗೊತ್ತುಪಡಿಸುತ್ತಿದ್ದರೆ, ಅದು ಐಹಿಕ ಜೀವನದಲ್ಲಿಯ ಅನುಭವಗಳಿಗೆ ಅಧ್ಯಕ್ಷನಾದ ಜೀವನ ಅನುಮತಿಯಿಂದಲೇ ಆಗಿರಬೇಕು. ಮತ್ತು ಈ ಅನುಮತಿಯು ಕೇವಲ ಹೊರಗಿನ ಯಾಂತ್ರಿಕ ಕ್ರಿಯಾಫಲಕ್ಕಷ್ಟೇ ಸಂಬಂಧಿಸಿರದೆ, ಅದು ಆತ್ಮನ ಗುಪ್ತವಾದ ಇಚ್ಛೆಗೂ ಮಾರ್ಗದರ್ಶನಕ್ಕೂ ಸಂಬಂಧಿಸಿರುತ್ತದೆ. ಈ ಗುಪ್ತವಾದ ಇಚ್ಛೆಯು ಯಾಂತ್ರಿಕ ಸ್ವರೂಪದ್ದಿರದೆ, ಅದು ಸ್ವತಂತ್ರ ಆತ್ಮನದು ಇರುತ್ತದೆ. ಜೀವಿತದ ಮಾರ್ಗದರ್ಶನವು, ಚೇತನ ವಸ್ತುವಿನಿಂದ ಆಗುತ್ತಿದ್ದು, ಈ ಮಾರ್ಗದರ್ಶನಕ್ಕೆ ಯಾಂತ್ರಿಕ ಕರ್ಮಫಲವನ್ನು ಆ ವಸ್ತುವು ಸಾಧನವನ್ನಾಗಿ ಉಪಯೋಗಿಸಿಕೊಳ್ಳುತ್ತದೆ. ಆದ್ದರಿಂದ ಈ ಚೈತನ್ಯ ಶಕ್ತಿಯು ಕರ್ಮಫಲದ ಅಧೀನವಾಗಿರಲಾರದು. ಜೀವಾತ್ಮನು ಈ ದೇಹದಲ್ಲಿ ಜನ್ಮತಾಳಿ ಆತ್ಮಸಾಕ್ಷಾತ್ಕಾರವನ್ನು ಮಾಡಿಕೊಳ್ಳಬೇಕೆಂದು ಈ ಜಗತ್ತಿನ ಅನುಭವವನ್ನು ಪಡೆಯಲಿಕ್ಕೆ ಹವಣಿಸುತ್ತಿದ್ದಾನೆ. ಈ ಸಾಕ್ಷಾತ್ಕಾರಕ್ಕೆ ಅವಶ್ಯವಿರುವ ಎಲ್ಲ ಸಾಧನಗಳನ್ನೂ ಅವನು ಸಂಗ್ರಹಿಸುತ್ತಾನೆ. ಈ ಸಾಧನಗಳು, ಅವನ ಈಗಿನ ಪ್ರಯತ್ನದಿಂದುಂಟಾಗಿರದ

ಗತಕರ್ಮಗಳ ಫಲವಾಗಿಯಾಗಲಿ, ಅಥವಾ ತನ್ನ ಧ್ಯೇಯ ಸಾಧನೆಗಾಗಿ ಹಿಂದಿನ ಕರ್ಮಗಳಿಂದ ಅವನೇ ಆರಿಸಿಕೊಂಡದ್ದಾಗಲಿ, ಅಥವಾ ಈ ಜನ್ಮದಲ್ಲಿಯ ಪ್ರಯತ್ನದಿಂದ ಹೊಸದಾಗಿ ಸಂಗ್ರಹಿಸಿದ್ದಾಗಲಿ ಇರಬಹುದು. ಯಾಕಂದರೆ, ಜೀವನ ಮುಖ್ಯ ಉದ್ದೇಶವು ಕೇವಲ ಯಾಂತ್ರಿಕ ನಿಯಮ ಗಳಿಗೆ ಒಳಗಾಗಿ ವರ್ತಿಸುವದಿರದೆ, ಈ ವಿಶ್ವದ ಅನುಭವದಿಂದ ತನ್ನ ಸ್ವಭಾವದ ಉತ್ಕ್ರಾಂತಿಯನ್ನು ಮಾಡಿಕೊಂಡು ಅಂತ್ಯದಲ್ಲಿ ಈ ಅಜ್ಞಾನ ಶೃಂಖಲೆಯಿಂದ ಬಿಡುಗಡೆ ಹೊಂದುವದಿರುತ್ತದೆ. ಅವನ ಈ ಪ್ರಗತಿಯು ಎರಡು ಪ್ರಕಾರಗಳಿಂದ ಸಾಧ್ಯವಾಗುತ್ತದೆ. ಒಂದು ಬದಿಗೆ ಕರ್ಮವಿಧಿಯು ಈ ಉನ್ನತಿಯ ಕೇವಲ ಸಾಧನದಂತೆ ಇದ್ದು ಮತ್ತೊಂದು ಬದಿಗೆ, ಜೀವನ ಜ್ಞಾನ ಮತ್ತು ಇಚ್ಛಾಶಕ್ತಿಗಳು ಮನಸ್ಸು, ಪ್ರಾಣ ಮತ್ತು ದೇಹಗಳ ಮುಖಾಂತರ ಕೆಲಸಮಾಡಿ ಈ ಸಾಧಗಳನ್ನು ಉಪಯೋಗಿಸುತ್ತವೆ. ದೈವವು ಕೇವಲ ಯಾಂತ್ರಿಕ ಸ್ವರೂಪದ್ದಿರಲಿ ಅಥವಾ ನಾವೇ ತಯಾರು ಮಾಡಿದ ಒಂದು ಶೃಂಖಲೆಯಾಗಿರಲಿ, ಅದು ಈ ಜೀವನ ಚರಿತ್ರದಲ್ಲಿಯ ಒಂದು ಘಟಕವಾಗಿದೆ. ಜೀವನ ಜ್ಞಾನ ಮತ್ತು ಇಚ್ಛಾಶಕ್ತಿಗಳು, ಇದಕ್ಕಿಂತ ಪ್ರಬಲವಾದ ಮತ್ತೊಂದು ಘಟಕವಾಗಿದೆ. ಆರ್ಯ ಜ್ಯೋತಿಷದಲ್ಲಿ ಜೀವಿತದಲ್ಲಿಯ ಎಲ್ಲ ಸಂಗತಿಗಳೂ ಗ್ರಹಗಳ ಗತಿಯ ಮೇಲಿಂದ ಸೂಚಿತ ವಾಗುವವೆಂದೂ, ಅವು ಮುಂಚಿತವಾಗಿಯೇ ನಿಶ್ಚಿತವಾಗಿರುವವೆಂದೂ ಹೇಳಿದ್ದಾರೆ; ಇಷ್ಟೇ ಅಲ್ಲ ಮನುಷ್ಯ ಪ್ರಯತ್ನದಿಂದ, ಈ ಮುಂಚಿತ ವಾಗಿಯೇ ನಿಶ್ಚಿತವಾದ ಸಂಗತಿಗಳನ್ನು ಬದಲಿಸಬಹುದೆಂದೂ ಅಥವಾ ಈ ವಿಧಿಲಿಖಿತದಲ್ಲಿಯ ಅತಿ ಪ್ರಬಲ ಅಥವಾ ಅತ್ಯವಶ್ಯ ಭಾಗಗಳನ್ನು ಬಿಟ್ಟು, ಬಹುತಾಂಶವನ್ನು ನಮ್ಮ ಪ್ರಯತ್ನದಿಂದ ನಷ್ಟಗೊಳಿಸಬಹುದೆಂದೂ ಹೇಳ ಲಾಗಿದೆ ಇದು ಸಮತೋಲಾದ ವಿಚಾರಸರಣಿಯು. ಆದರೆ, ಈ ವಿಧಿ ಲಿಖಿತವನ್ನು ಗಣನೆ ಮಾಡಬೇಕಾದರೆ ಅವಶ್ಯವಾಗಿ ಲಕ್ಷದಲ್ಲಿಡತಕ್ಕ ಸಂಗತಿಯೇನಂದರೆ, ಅದೊಂದು ಸುಲಭವಾದ ಗಣಿತವಲ್ಲದೆ, ಒಂದು ಅತಿ ಜಟಿಲವಾದ ಕಠಿಣ ಸಮಸ್ಯೆಯು ಅದು ಆಗಿದೆ. ನಮ್ಮ ಸ್ಥೂಲ ಶರೀರ ಅಥವಾ ಮಾನಸ ಕ್ರಿಯೆಯನ್ನು ನಿಯಮಿಸುತ್ತಿರುವ ವಿಧಿಯು, ಅದಕ್ಕಿಂತ ಹೆಚ್ಚಿನ ಬಲವತ್ತರವಾದ ನಿಯಮಕ್ಕೆ ಅವಕಾಶವಿಲ್ಲದಿದ್ದರೇ, ತನ್ನ

ಪರಿಣಾಮವನ್ನು ತೋರಿಸುತ್ತದೆ. ಅದಕ್ಕೆ ಅವಕಾಶ ದೊರೆತಲ್ಲಿ ಈ ವಿಧಿಯು ಪರಿಣಾಮವು ಕುಂಠಿತವಾಗುತ್ತದೆ. ನಮ್ಮ ಪ್ರತಿಯೊಂದು ಕ್ರಿಯೆಯು ನಮ್ಮ ಸ್ಥೂಲ ಶರೀರಕ್ಕೆ ಸಂಬಂಧಿಸಿರುತ್ತದೆ. ನಮ್ಮ ಸ್ಥೂಲ ಅಸ್ತಿತ್ವದಿಂದ ನಮ್ಮ ಕ್ರಿಯೆಯು ಹೊರಬೀಳುತ್ತಿದ್ದು, ಈ ಸ್ಥೂಲ ಮೇಲ್ಭಾಗದ ಅಸ್ತಿತ್ವದ ಹಿಂದೆ, ಹೆಚ್ಚು ಸ್ವತಂತ್ರವಾದ ಜೀವನ ಶಕ್ತಿ ಇರುತ್ತದೆ. ಅದರಲ್ಲಿ ಹೆಚ್ಚು ಸ್ವತಂತ್ರವಾದ ಮನಸ್ಸು ಇದ್ದು ಅದು ತನ್ನ ಹೆಚ್ಚು ಬಲಾಢ್ಯವಾದ ಸ್ವತಂತ್ರ ಶಕ್ತಿಯಿಂದ ಬೇರೊಂದು ವಿಧಿಲಿಖಿತವನ್ನು ಬರೆದು ಮೊದಲಿನ ಸ್ಥೂಲ ಲಿಖಿತವನ್ನು ತಿದ್ದಿಬಿಡುತ್ತದೆ ಜೀವನು ಬುದ್ಧಿ ಪ್ರಾಣಗಳ ಮೇಲೆ ಮತ್ತು ಇಂದ್ರಿಯಗಳ ಮೇಲೆ ತನ್ನ ಸತ್ತೆಯನ್ನು ಪ್ರಸ್ಥಾಪಿಸುವದರಿಂದ ನಾವು ದಿವ್ಯ ಜ್ಞಾನವನ್ನೂ ಶಕ್ತಿಯನ್ನೂ ಸಂಪಾದಿಸಿ ನಮ್ಮ ಸ್ಥೂಲ ವಿಧಿಲಿಖಿತವನ್ನು ಪೂರ್ಣ ಬದಲಿಸಬಹುದು ಅಥವಾ ಅದರ ಪುನರಚನೆಯನ್ನು ಮಾಡ ಬಹುದು. ಆದ್ದರಿಂದ, ಪ್ರಾಕ್ತನವು— ಅಥವಾ ಕರ್ಮದ ಸ್ಥೂಲ ನಿಯಮ ಗಳಷ್ಟೇ ನಮ್ಮ ಜನ್ಮದ ಅಥವಾ ನಮ್ಮ ಉತ್ಕ್ರಾಂತಿಯ ಅಂತಿಮವನ್ನು ನಿಶ್ಚಯಿಸುವ ಕಾರಣಗಳೆಂದು ಹೇಳಲಿಕ್ಕೆ ಬರುವದಿಲ್ಲ

ವಿಧಿಘಟನೆಯ ಬಗ್ಗೆ ಇದ್ದ ವ್ಯಾವಹಾರಿಕ ಕಲ್ಪನೆಗಳಲ್ಲಿ ಕಂಡು ಬರುವ ದೋಷಗಳು ಇಷ್ಟರಿಂದಲೇ ತೀರುವದಿಲ್ಲ. ಈ ವಿಶ್ವವ್ಯಾಪೀ ನಿಯಮವನ್ನು, ಅತಿ ಸುಲಭಮಾಡಿ ಸ್ವಲ್ಪದರಲ್ಲಿ ಹೇಳುವಾಗ್ಗೆ ಹಲವು ದೋಷಗಳು ಉಂಟಾಗುತ್ತವೆ. ಅಥವಾ ಈ ನಿಯಮದ ಮರ್ಯಾದೆಯು ಇಂಥಲ್ಲಿಯೇ ತೀರೀತೆಂದು ನಿಶ್ಚಯಿಸುವಾಗಲೂ ಹಲವು ಸಾರೆ ತಪ್ಪಾಗು ತ್ತದೆ. ಕ್ರಿಯೆಯು ಜೀವಶಕ್ತಿಯ ಪರಿಣಾಮವು ಆದರೆ ಈ ಜೀವಶಕ್ತಿಯು ಒಂದೇ ಪ್ರಕಾರದ್ದಿರುವದಿಲ್ಲ. ಜೀವನ ಕ್ರಿಯಾಶಕ್ತಿಯು ನಾನಾಪ್ರಕಾರ ದಿಂದ ಪ್ರಕಟವಾಗುತ್ತದೆ. ಜೀವನ ಒಳಭಾಗದಲ್ಲಿ ಮಾನಸಕ್ರಿಯೆಗಳೂ, ಇವಕ್ಕೂ ಸ್ಥೂಲವಾದ ಪ್ರಾಣಕ್ರಿಯೆಗಳೂ ಇವೆ. ಬೇರೆ ಬೇರೆ ಪ್ರಕಾರದ ವಾಸನೆಗಳು, ಭೋಗೇಚ್ಛೆ, ರಾಗದ್ವೇಷ, ಸ್ವಭಾವ ಇವೆಲ್ಲವೂ ಈ ಕ್ರಿಯೆ ಗಳಲ್ಲಿ ಅಂತರ್ಭಾವವಾಗುತ್ತವೆ. ಇವುಗಳಿಗಿಂತ ಸ್ಥೂಲವಾದ ಇಂದ್ರಿಯಗಳ ಕ್ರಿಯೆ ಮತ್ತು ಎಲ್ಲಕ್ಕೂ ಹೊರಗಿನ ಪ್ರತ್ಯಕ್ಷ ಕಾಣುವ ಈ ಸ್ಥೂಲ ದೇಹದ

ಕ್ರಿಯೆ, ಹೀಗೆ ಅನೇಕ ಕ್ರಿಯೆಗಳ ಪ್ರಕಾರಗಳು ಉಂಟಾಗುತ್ತವೆ. ಈ ಕ್ರಿಯೆಗಳ ಉದ್ದೇಶಗಳೂ ಹಲವು ಪ್ರಕಾರದ್ದಾಗಬಹುದು. ಸತ್ಯಸಾಧನೆ, ಜ್ಞಾನಸಂಪಾದನೆ, ಸೌಂದರ್ಯಾಭಿವೃದ್ಧಿ, ನೈತಿಕ ಅಥವಾ ಅನೈತಿಕ ವ್ಯವಹಾರ, ಅಧಿಕಾರ ಸ್ಥಾಪನೆ, ಪ್ರೀತಿ, ವೈರ, ಸಂಪತ್ತಿ, ಜಯಾಪಜಯ, ಸಂಚಾರ ವಿಹಾರ ಮುಂತಾದ ಅನೇಕ ಧ್ಯೇಯಗಳು ಕ್ರಿಯೆಯ ಉದ್ದೇಶ ವಾಗಬಹುದು. ಅದೇ ಪ್ರಕಾರ ವೈಯಕ್ತಿಕ ಅಥವಾ ಸಾಮಾಜಿಕ ಧ್ಯೇಯ-ಗಳೂ ಬೇರೆ ಬೇರೆಯಾಗಿರಬಹುದು. ಆರೋಗ್ಯ, ಶಕ್ತಿಸಂಪಾದನೆ, ಎಲ್ಲ ಪ್ರಕಾರದ ಕ್ರಿಯಾಸಾಮರ್ಥ್ಯ, ಭೌತಿಕ ಸುಖಸಮಾಧಾನ ಮುಂತಾದ ಹೇಳಲಿಕ್ಕೆ ಸಾಧ್ಯವಿಲ್ಲದಷ್ಟು ಪ್ರಕಾರಗಳಿರುತ್ತವೆ. ಮನುಷ್ಯನ ಜೀವಿತದಲ್ಲಿ ಇವೆಲ್ಲವೂ ವಿಚಿತ್ರವಾದ ಸಂಸ್ಕಾರಗಳನ್ನೂ ಮತ್ತು ಅವುಗಳಿಂದುಂಟಾ ಗುವ ಹಲವು ವಿಧದ ಕ್ರಿಯೆಗಳನ್ನೂ ನಿರ್ಮಿಸಿ, ಕಾರ್ಯಕಾರಣಗಳ ಅಸಂಖ್ಯ ಪ್ರಕಾರಗಳ ಪರಂಪರೆಯನ್ನು ಉಂಟುಮಾಡುತ್ತವೆ, ಈ ಎಲ್ಲ ಕ್ರಿಯೆಗಳ ಪ್ರಕಾರಗಳನ್ನು ಒಂದೇ ಕಾರ್ಯನಿಯಮದ ವ್ಯಾಖ್ಯೆಯಲ್ಲಿ ಪೋಣಿಸುವದು ಅಶಕ್ಯವಾಗಿದೆ. ಅಥವಾ ಇವೆಲ್ಲವನ್ನೂ ನೀತಿಯ ಯೋಗ್ಯಾ-ಯೋಗ್ಯ ವಿಭಾಗಗಳಲ್ಲಿ ಹಂಚುವದೂ ಸಂಭವನೀಯವಿಲ್ಲ. ಆದ್ದರಿಂದ ವಿಶ್ವರಚನೆಯ ವ್ಯಾಪಕ ಉದ್ದೇಶದಲ್ಲಿ ಕೇವಲ ಮನುಷ್ಯನ ಸ್ಥೂಲ ಮನಸ್ಸಿಗೆ ಸಮ್ಮತವಿರುವ ನೀತಿಯ ಪರಿಪಾಲನೆ ಅಥವಾ ಕರ್ಮಗಳಿಗನು ಸಾರವಾಗಿ ಇಷ್ಟಾನಿಷ್ಟ ಫಲಗಳನ್ನು ಹಂಚುವಿಕೆಯಷ್ಟೇ ಇರಬೇಕೆಂದು ತಿಳಿಯುವದು ಯೋಗ್ಯವಾಗಲಾರದು. ನಾವು ಯಾವ ಪ್ರಕಾರದ ಕಾರ್ಯದಲ್ಲಿ ನಮ್ಮ ಶಕ್ತಿಯನ್ನು ಉಪಯೋಗಿಸುತ್ತೇವೋ, ಅದೇ ಪ್ರಕಾರದ ಫಲವು ನಮಗೆ ಸಿಗತಕ್ಕದ್ದೆಂಬ ನಿಯಮವು ಸತ್ಯವಿದ್ದ ಪಕ್ಷಕ್ಕೆ ನಮ್ಮ ಈ ನಾನಾವಿಧ ಕಾರ್ಯ, ಆಕಾಂಕ್ಷೆಗಳಲ್ಲಿ ತೊಡಗಿಸಿದ ನಾನಾವಿಧ ಶಕ್ತಿಗಳನ್ನು ನಾವು ಗಣನೆಗೆ ತರತಕ್ಕದ್ದು; ಮತ್ತು ಆ ಪ್ರಕಾರ ಅವುಗಳ ಪರಿಣಾಮಗಳೂ ಅತ್ಯಂತ ಭಿನ್ನ ಭಿನ್ನವಾಗಿಯೇ ಆಗತಕ್ಕದ್ದೆಂಬದನ್ನು ಲಕ್ಷದಲ್ಲಿಡಬೇಕು. ನಾವು ಸತ್ಯ ಅಥವಾ ಜ್ಞಾನ ಸಂಶೋಧನೆಯಲ್ಲಿ ನಮ್ಮ ಶಕ್ತಿಯ ಉಪಯೋಗ ಮಾಡಿದಲ್ಲಿ ಸತ್ಯಸಂಪಾದನೆ ಅಥವಾ ಜ್ಞಾನಾಭಿ-ವೃದ್ಧಿಯೇ ಅದರ ನೈಸರ್ಗಿಕವಾದ ಪರಿಣಾಮ—ಅಥವಾ ಪ್ರತಿಫಲವೆಂದು

ಹೇಳಬಹುದು. ಕಪಟ ವ್ಯವಹಾರದಲ್ಲಿ ಉಪಯೋಗಿಸಿದರೆ, ಕಪಟ ಸ್ವಭಾವವೇ ಬೆಳೆದು ಹೆಚ್ಚು ಅಜ್ಞಾನದಲ್ಲಿ ಮುಳುಗುವದೇ ಅದರ ಪ್ರತಿಫಲ. ಸೌಂದರ್ಯೋಪಾಸನೆಯಿಂದ ಸೌಂದರ್ಯದ ಅಭಿರುಚಿಯು ಬೆಳೆದು ಸೌಂದರ್ಯಸುಖ ಸಿಗಬೇಕು ಅಥವಾ ಹಾಗೆ ಕೋರಿಕೆಯನ್ನು ಮಾಡಿದಲ್ಲಿ, ಸೌಂದರ್ಯ ಮತ್ತು ಸ್ವಾರಸ್ಯಪೂರ್ಣ ಸ್ವಭಾವವನ್ನು ನಾವು ಪಡೆಯಬಹುದು. ದೇಹದ ಬಲವನ್ನು ಬೆಳೆಸುವಲ್ಲಿ ಶಕ್ತಿಯ ವ್ಯಯವಾದರೆ, ಅದು ಒಬ್ಬ ಪ್ರಖ್ಯಾತ ಮಲ್ಲನನ್ನಾಗಲಿ ಅಥವಾ ಕ್ರೀಡಾಪಟುವನ್ನಾಗಲಿ ಉಂಟುಮಾಡಬಹುದು. ನೀತಿಸಾಧನೆ ಮಾಡಿದಲ್ಲಿ ಸದ್ಗುಣಗಳ ಅಭಿವೃದ್ಧಿಯಾಗಿ ಸಮಾಜದ ಸೌಖ್ಯವು ಉಕ್ಕೇರಬೇಕು. ಇದರ ವಿರುದ್ಧ ದುರ್ಗುಣಗಳ ಬೆನ್ನು ಹತ್ತಿದರೆ, ಅದರಿಂದ ಕಷ್ಟಪರಂಪರೆ, ವಿಷಮತೆ, ನಿಸರ್ಗದ ವಿರೋಧ ಇವು ತಲೆದೋರಿ, ಅಂತಿಮದಲ್ಲಿ ಅಧೋಗತಿಯು ತಪ್ಪದು. ಅಧಿಕಾರಲಾಲಸೆಯಿಂದ ಅಥವಾ ಪ್ರಾಣಶಕ್ತಿಯನ್ನು ಬೆಳೆಸುವದರಿಂದ ಅಧಿಕಾರಪ್ರಾಪ್ತಿ ಅಥವಾ ಅಲೌಕಿಕ ಶಕ್ತಿಯ ಸಂಪಾದನೆಯೇ ಇದರ ಪರಿಣಾಮವಾಗತಕ್ಕದ್ದು. ಇದು ನಿಸರ್ಗದಲ್ಲಿಯ ಸರ್ವಸಾಮಾನ್ಯ ನಿಯಮವೇ ಇದ್ದು, ನಾವು ನಿಸರ್ಗದಿಂದ ನ್ಯಾಯದ ಅಪೇಕ್ಷೆಯನ್ನು ಮಾಡುವದೇ ಆದರೆ, ನಾವು ಯಾವ ಪ್ರಕಾರದ ಕಾರ್ಯದಲ್ಲಿ ನಮ್ಮ ಶಕ್ತಿಯನ್ನು ಉಪಯೋಗಿಸುವೆವೋ, ಅದೇ ಪ್ರಕಾರದ ಪರಿಣಾಮವು ನಮ್ಮ ಪಾಲಿಗೆ ಬರಬೇಕೆನ್ನುವದು ನಿಶ್ಚಯವಾಗಿ ನ್ಯಾಯವೇ ಆಗಿದೆ. ಶರ್ಯತ್ತಿನಲ್ಲಿ ದ್ರುತಗತಿಯವರಿಗೆ, ಕಾಳಗದಲ್ಲಿ ಶೌರ್ಯ, ಬಲ ಮತ್ತು ಜಾಣತನವುಳ್ಳವರಿಗೆ, ಜ್ಞಾನಸಂಪಾದನೆಯಲ್ಲಿ ಕುಶಲಬುದ್ಧಿ ಜ್ಞಾನಲಾಲಸೆಯುಳ್ಳವರಿಗೆ ಯಶದೊರೆಯಬೇಕೆಂಬುವದು ನಿಸರ್ಗದ ನಿಯಮವೇ ಆಗಿದೆ. ಸೋಮಾರಿತನ, ದುರ್ಬಲತೆ, ಕೆಲಸದಲ್ಲಿ ಚಾತುರ್ಯದ ಅಭಾವ ( ಮದಡುತನ ) ತಿಳಿಗೇಡಿತನ ಮುಂತಾದ ದುರ್ಗುಣಗಳ ತವರಮನೆಯೇ ಆದವನಿಗೆ, ಅವನು ಕೇವಲ ಸನ್ಮಾನ್ಯನೆಂದಾಗಲಿ, ಒಳ್ಳೆಯವನೆಂದಾಗಲಿ ನಿಸರ್ಗದೇವತೆಯು ಜಯಮಾಲೆಯನ್ನು ಹಾಕಲಾರಳು. ಜೀವನದಲ್ಲಿಯ ಈ ಬೇರೆ ಬೇರೆ ಮಾರ್ಗಗಳಲ್ಲಿ ಯಶಪ್ರಾಪ್ತಿಯನ್ನು ಕೋರುವವನಿಗೆ ಅವಕ್ಕೆ ತಕ್ಕ ಗುಣಗಳನ್ನು ಸಂಪಾದಿಸಿ ಯೋಗ್ಯ ಪ್ರಯತ್ನವನ್ನು ಮಾಡಲೇ

ಬೇಕು. ಈ ವಿಶಿಷ್ಟ ಗುಣಗಳಿಂದ ಕೂಡಿದವನಿಗೆ ಜಯಪ್ರಾಪ್ತಿಯಾಗ ದಿದ್ದರೆ ಮಾತ್ರ ನಾವು ನಿಸರ್ಗಕ್ಕೆ ಹೆಸರಿಡಬಹುದು—ದೋಷಕೊಡ ಬಹುದು. ಆದರೆ, ಈ ಕಾರ್ಯಕಾರಣ ನಿಯಮಗಳನ್ನು ನಿರ್ಮಿಸಿದ ನಿಸರ್ಗದ ಮೇಲೆ ದೋಷಾರೋಪಣೆಯನ್ನು ಮಾಡುವದಾಗಲಿ, ಅಥವಾ ತನ್ನ ನಿಷ್ಕ್ರಿಯ ಒಳ್ಳೇತನದ ಬಗ್ಗೆ ಅಥವಾ ಸನ್ಮಾನ್ಯತೆಯ ಬಗ್ಗೆ ಮುಂದಿನ ಜನ್ಮದಲ್ಲಿ ಒಂದು ಸಾಮಾಜಿಕ ಉನ್ನತಸ್ಥಾನವನ್ನಾಗಲಿ, ಅಪಾರ ಸಂಪತ್ತಿಯನ್ನಾಗಲಿ, ಸುಖಸಮಾಧಾನದಿಂದ ಕೂಡಿದ ಜೀವಿತವನ್ನಾಗಲಿ, ತನ್ನ ನಿಷ್ಕ್ರಿಯ ಸದ್ಗುಣಗಳ ನೈಸರ್ಗಿಕ ಪರಿಣಾಮವೆಂದು ಬೇಡುವದು ಯೋಗ್ಯವಾಗಲಾರದು. ಪುನರ್ಜನ್ಮದ ಉದ್ದೇಶವು ಇಷ್ಟು ಸಂಕುಚಿತ ವಾದದ್ದು ಅಥವಾ ವಿಶ್ವದ ಕಾರ್ಯಕಾರಣ ನಿಯಮವು ಇಂಥ ಕ್ಷುದ್ರ ಉದ್ದೇಶದಿಂದ ನಿರ್ಮಿತವಾದದ್ದು ಇರಲಾರದು.

ನಮ್ಮ ಈಗಿನ ಪ್ರಯತ್ನಕ್ಕೆ ಪ್ರತಿಫಲ ಸಿಗಬೇಕಾದರೆ, ಅದರಲ್ಲಿ ಅದೃಷ್ಟದೈವದ ಕೈವಾಡವೂ ಇರುವದೆಂಬದರಲ್ಲಿ ಸಂಶಯವಿಲ್ಲ ಆದರಿಂದ ಪ್ರಯತ್ನಕ್ಕೆ ತಕ್ಕ ಫಲವು ಸಿಗದೆ ಇರುವದು ಅಥವಾ ಅಯೋಗ್ಯರಿಗೆ ಮತ್ತು ಫಲಕ್ಕೆ ತಕ್ಕಷ್ಟು ಪ್ರಯತ್ನಮಾಡದೆ ಇರುವವರಿಗೆ ಫಲದೊರೆಯುವದು— ಇಂಥ ಶಂಗತಿಗಳು ಕಂಡುಬರುತ್ತವೆ. ಈ ದೈವದ ವಿಷಮತೆಯ ಕಾರಣಕ್ಕ, ಸುದೈವ ಅಥವಾ ದುರ್ದೈವದ ಬೀಜಗಳು ಬಹುವಿಧವಾಗಿವೆ. ಅಂಶತಃ, ಇದರ ಕಾರಣವು ನಮ್ಮ ಹಿಂದಿನ ಕರ್ಮದಲ್ಲಿ ಇರುವದೇನೋ ನಿಜ. ಆದರೆ, ಸುದೈವವು ನಮ್ಮ ಹಿಂದಿನ ಪಾಪಕೃತ್ಯಗಳ ಫಲವೆಂದೇ ನಿಃಸಂದೇಹ ವಾಗಿ ಹೇಳಲಿಕ್ಕೆ ಬರುವದಿಲ್ಲ. ನಾವು ಒಬ್ಬ ದೃಢಸತ್ಯವ್ರತನಾದ ಸಜ್ಜನನು ಇಲ್ಲಿ ಕಷ್ಟಕ್ಕೆ ಗುರಿಯಾದದ್ದನ್ನು ಕಾಣುತ್ತಿದ್ದರೆ, ಈ ಮಾದರಿಯ ಸದ್ವೃತ್ತಿಯುಳ್ಳ ಮನುಷ್ಯನು ಹಿಂದಿನ ಜನ್ಮದಲ್ಲಿ ಅತಿ ದುಷ್ಟನಾಗಿದ್ದು, ಹೊಸ ಜನ್ಮದಿಂದ ಅವನ ಸಂಪೂರ್ಣ ಬದಲಾವಣೆಯಾದಾಗ್ಯೂ, ಇನ್ನೂ ಅವನು ತನ್ನ ಹಿಂದಿನ ದುಷ್ಕೃತ್ಯಗಳ ಫಲವನ್ನೇ ಉಣ್ಣುತ್ತಿರುವನೆಂದು ವಿಶ್ವಾಸವಿಡುವದು ಕಠಿಣವಾಗಿದೆ. ಅಥವಾ ಇದರ ವಿರುದ್ಧವಾಗಿ ಒಬ್ಬ ನೀಚನು ಇಲ್ಲಿ ಸುಖಬಡುತ್ತಿದ್ದರೆ, ಅವನು ಹಿಂದಿನ ಜನ್ಮದಲ್ಲಿ ಸಂತ-

ನಾಗಿದ್ದು, ಈ ಜನ್ಮದಲ್ಲಿ ಅಡ್ಡದಾರಿಯನ್ನು ಹಿಡಿದಿದ್ದರೂ, ಅವನು ತನ್ನ ಹಿಂದಿನ ಸತ್ಕೃತ್ಯಗಳ ಫಲವನ್ನು ಈಗೂ ಉಣ್ಣುತ್ತಿರುವನೆಂದು ಕೂಡಲೇ ತಿಳಿಯುವದು ಶಕ್ಯವಿಲ್ಲ. ಎರಡು ಜನ್ಮಗಳಲ್ಲಿಯು ಈ ಪ್ರಕಾರದ ವ್ಯತ್ಯಾಸವು ಕೆಲವುಸಲ ಆಗಬಹುದಾದರೂ, ಅದು ಸರ್ವಸಾಮಾನ್ಯ ನಿಯಮವಾಗಿ ಕಂಡುಬರುವದಿಲ್ಲ. ಆದ್ದರಿಂದ ಈಗಿನ ಚರಿತ್ರಕ್ಕೆ ವಿರುದ್ಧವಾದ ಸುಖೋಪಭೋಗವನ್ನು ಅಥವಾ ಕಷ್ಟವನ್ನು ಅನುಭವಿಸುತ್ತಿದ್ದ ದುರ್ಜನ ಅಥವಾ ಸಜ್ಜನನ ಮೇಲೆ ಹಿಂದಿನ ಕರ್ಮಭೋಗದ ಭಾರವನ್ನೇ ಇನ್ನೂ ಹೊಸಿಸುವದೆಂದರೆ, ಜೀವನಿಗೆ ಒಂದು ಯಾಂತ್ರಿಕ, ನಿರ್ಹೇತುಕ ನಿಯಮದಲ್ಲಿ ಬಂಧಿಸಿಟ್ಟಂತೆ ಆಗುತ್ತದೆ. ಈ ಅಥವಾ ಇಂಥ ಪ್ರಕಾರದ ಹಲವು ಆರೋಪಗಳು ಈ ಸುಲಭವಾದ ಕರ್ಮನಿಯಮದ ಮೇಲೆ ಬರುತ್ತವೆ. ಆದ್ದರಿಂದ ಪ್ರಾಣಿಗಳ ಸುಖದುಃಖಗಳ ಮೀಮಾಂಸೆಯನ್ನು ಮಾಡುವಾಗ್ಗೆ ಕರ್ಮಗಳ ಕಾರ್ಯಕಾರಣಗಳ ಈ ಪ್ರಕಾರದ ತರ್ಕವು ಅಷ್ಟು ಬಲವತ್ತರವಾಗಿರುವದಿಲ್ಲ. ಈ ನಿಸರ್ಗದಲ್ಲಿ ಅಥವಾ ವ್ಯಕ್ತಿಯ ಜೀವಿತದಲ್ಲಿ ಕಂಡುಬರುವ ಅನ್ಯಾಯದ ಬಗ್ಗೆ ಮುಯ್ಯಕ್ಕೆ ಮುಯ್ಯ ತೀರಿಸುವ ಇಂಥ ಕರ್ಮನಿಯಮವನ್ನು ಇಡುವದು ಅಷ್ಟು ಸುಲಭವಾದ ಸಿದ್ಧಾಂತವಾಗುವದೆಂದು ಅನಿಸುವದಿಲ್ಲ, ಯಾಕಂದರೆ, ಈ ವ್ಯಾಪಕ ಸೃಷ್ಟಿಯ ನಿಯಮವು ಮನುಷ್ಯನ ಒಂದು ಮೇಲುಮೇಲಿನ ಭಾವನೆಯ ಮೇಲೆ ಅಥವಾ ಸದೋಷ ನ್ಯಾಯಬುದ್ಧಿಯ ಮೇಲೆ ಅವಲಂಬಿಸಿರುವದೆಂದು ತಿಳಿದಂತಾಗುವದು. ಈ ತಿಳುವಳಿಕೆಯು ಮನುಷ್ಯನ ಸ್ಥೂಲ ಮನಸ್ಸಿನ ಒಂದು ಸದೋಷ ತರ್ಕದಿಂದಲೇ ಉಂಟಾಗಿದೆ. ಆದ್ದರಿಂದ, ಸೃಷ್ಟಿಯ ನಿರ್ದೋಷವಾದ ಕರ್ಮ-ನಿಯಮವು ಇದಕ್ಕಿಂತ ಹೆಚ್ಚು ವ್ಯಾಪಕವಾದ ಮತ್ತು ನಿರಪವಾದವಾದ ನಿಯಮದ ಮೇಲೆ ಅವಲಂಬಿಸಿರತಕ್ಕದ್ದು.

ಇಲ್ಲಿಯೂ ನಾವು ಇತರ ಸೂಕ್ಷ್ಮ ಆಧ್ಯಾತ್ಮಿಕ ಪ್ರಶ್ನೆಗಳಲ್ಲಿ ಮಾಡುತ್ತಿದ್ದಂತೆ ನಮ್ಮ ಸಂಕುಚಿತ ಮಾನುಷತರ್ಕ ಬುದ್ಧಿಯಿಂದ ರಚಿಸಿದ ನಿಯಮಗಳನ್ನೇ ಈ ವಿಶಾಲವಾದ ಸ್ವತಂತ್ರ ವಿಶ್ವಚಾಲಕ ಬುದ್ಧಿಯ ಕಾರ್ಯನಿಯಮಗಳಿಗೆ ಹಚ್ಚುವ ತಪ್ಪನ್ನು ಮಾಡುತ್ತಿದ್ದೇವೆ. ನಿಸರ್ಗ

ದಲ್ಲಿದ್ದ ವ್ಯಾಪಕ ಕರ್ಮನಿಯಮಗಳಲ್ಲಿ ಕೇವಲ ಎರಡೇ ನಿಯಮಗಳನ್ನು ಆರಿಸಿ—ನೈತಿಕ ಹಿತಾಹಿತಕ್ಕೆ ಕಾರಣವಾದ ಪಾಪಪುಣ್ಯ ಮತ್ತು ಬಾಹ್ಯ ಇಂದ್ರಿಯಗಳಿಗೆ ಅಥವಾ ದೇಹಕ್ಕೆ ಹಿತಾಹಿತವಾದ ಇಂದ್ರಿಯಜನ್ಯ ಸುಖ ದುಃಖ, ಐಶ್ವರ್ಯ, ದಾರಿದ್ರ್ಯ ಮುಂತಾದವು—ಇವುಗಳಲ್ಲಿ ನಮ್ಮ ಕಲ್ಪನೆಯ ಪ್ರಕಾರ ನೈತಿಕ ಹಿತಾಹಿತ-ಪುಣ್ಯಪಾಪಗಳ ಫಲವು ಬಾಹ್ಯ ಸ್ಥೂಲದೇಹದ ಇಂದ್ರಿಯಜನ್ಯ ಸುಖದುಃಖಗಳೆಂದು ಸಮೀಕರಣದ ಲೆಕ್ಕವನ್ನು ನಾವು ಹಚ್ಚುತ್ತಿದ್ದೇವೆ. ನೈತಿಕ ಪಾಪದ ಫಲವು ದೈಹಿಕ ದುಃಖವೆಂದೂ, ಪುಣ್ಯದ ಫಲವು ಸುಖವೆಂದೂ, ಅಂಗಡಿಕಾರನ ತಕ್ಕಡಿಯನ್ನು ಹಿಡಿದು ನಾವು ತೂಗುತ್ತಿದ್ದೇವೆ. ಮತ್ತು ಈ ಕೊಡಕೊಳ್ಳುವ ವ್ಯಾವಹಾರಿಕ ನ್ಯಾಯವೇ ನಿಸರ್ಗದ ಅಂತಿಮ ಸತ್ಯದಲ್ಲಿ ಸಮ್ಮತವಾಗಿರುವ ನಿಯಮವೆಂದು ನಾವು ತಿಳಿಯುತ್ತೇವೆ. ಈ ನಮ್ಮ ಸಮೀಕರಣವು ನಮ್ಮ ನೈತಿಕ ಮತ್ತು ಶಾರೀರಿಕ ಮೂಲ್ಯಗಳಿಂದ ರಚಿತವಾಗಿರುವದೆಂಬದು ಸ್ಪಷ್ಟವಾಗಿದೆ. ಯಾಕಂದರೆ, ಸುಖ ಮತ್ತು ಸುದೈವವು ಒದಗಬೇಕೆಂಬ ಆಕಾಂಕ್ಷೆಯೂ, ದುಃಖ ಮತ್ತು ದುರ್ದೈವವು ಒದಗಬಾರದೆಂಬ ಹೆದರಿಕೆಯೂ ನಮ್ಮ ಸ್ಥೂಲ ಮನಸ್ಸಿನ ಭಾಗವಾಗಿದೆ. ಈ ಮನಸ್ಸು ತನ್ನ ಮೇಲಿನ ನೈತಿಕ ಹೊಣೆಯನ್ನು ಸ್ವೀಕರಿಸುವಾಗ, ಆತ್ಮಸಂಯಮನ, ಇಂದ್ರಿಯ ನಿಗ್ರಹ ಮುಂತಾದ ಗುಣಗಳನ್ನು ಸಾಧಿಸುವಾಗ, ಮತ್ತು ಎಡಡನೆಯವರ ಕಲ್ಯಾಣ ವನ್ನು ಬಯಸಬೇಕೆಂದು ಪ್ರಯತ್ನಮಾಡುತ್ತಿರುವಾಗ ಒಂದು ಕೊಡ ಕೊಳ್ಳುವ ವ್ಯವಹಾರವನ್ನು ಮಾಡುತ್ತಿರುತ್ತದೆ. ಈ ನೈತಿಕ ನಿಯಮಗಳ ಸಾಧನೆಯಲ್ಲಿ ಉಂಟಾಗುವ ಕಷ್ಟವು ಪುಣ್ಯಕರವಾದದ್ದೆಂದೂ, ಆದ್ದರಿಂದ ಅದರ ಪ್ರತಿಫಲವು ಇಂದ್ರಿಯಜನ್ಯ ಸುಖ ಮತ್ತು ಐಶ್ವರ್ಯಗಳಿಂದ ಸಿಗಬೇಕೆಂದೂ ; ಇದಕ್ಕೆ ವಿರುದ್ಧವಾದ ಆಚರಣೆಯಿಂದ, ಅದಕ್ಕೆ ತಕ್ಕ ಶಿಕ್ಷೆಯು ಐಹಿಕ ದುಃಖ ದುರ್ದೈವಗಳಲ್ಲಾಗುವದೆಂದೂ ಕಲ್ಪಿಸಿ ನಮ್ಮ ಮನಸ್ಸು ನೈತಿಕ ಸದಾಚರಣೆಗೆ ಸಹಾಯವನ್ನು ನೀಡುತ್ತಿದೆ. ಆದರೆ, ನಿಜವಾದ ನೈತಿಕ ಜೀವನಕ್ಕೆ ಈ ಪ್ರಕಾರದ—ಸತ್ಯಮಾರ್ಗವನ್ನನುಸರಿಸಿದ ಬಗ್ಗೆ ಸಂಭಾವನೆಯ ಅಥವಾ ದುಷ್ಟಮಾರ್ಗವನ್ನು ಅನುಸರಿಸಿದ ಬಗ್ಗೆ ಶಿಕ್ಷೆಯ— ಫಲದಾಶೆಯು ಇರುವದಿಲ್ಲ. ನಿಜವಾದ ಧಾರ್ಮಿಕನಿಗೆ

ಸದಾಚರಣೆಯ ಫಲವು ಸದಾಚರಣೆಯೇ ಆಗಿದ್ದು, ಪಾಪಾಚರಣೆಯ ಶಿಕ್ಷೆಯೆಂದರೆ, ತನ್ನ ಸ್ವಭಾವಸಿದ್ಧವಾದ ಸದಾಚರಣೆಯನ್ನು ಬಿಡುವದೇ ಆಗಿದೆ. ಇದೇ ನಿಜವಾದ ನೈತಿಕ ಮೂಲ್ಯವು. ಇದರ ವಿರುದ್ಧವಾಗಿ, ನಮ್ಮ ಕರ್ಮಗಳಿಗೆ ಸಂಭಾವನೆ ಅಥವಾ ಶಿಕ್ಷೆಯನ್ನು ವಿಧಿಸುವ ಪದ್ಧತಿಯಲ್ಲಿ ನೈತಿಕ ಸನ್ಮಾರ್ಗದ ಬೆಲೆ ಕಡಿಮೆಯಾಗಿ, ಸದ್ಗುಣವು ಒಂದು ಸ್ವಾರ್ಥವಾಗುತ್ತದೆ. ಅದೊಂದು ಸ್ವಾರ್ಥಸಾಧನೆಯ ಕೊಡಕೊಳ್ಳುವ ವ್ಯವಹಾರವಾಗುತ್ತದೆ. ಮತ್ತು ದುಷ್ಟ ಪ್ರವೃತ್ತಿಯನ್ನು ತಡೆಯುವ ಉನ್ನತ ಉದ್ದೇಶದ ಬದಲಾಗಿ, ಒಂದು ಕೀಳ ಪ್ರವೃತ್ತಿಯ ಉದ್ದೇಶವನ್ನು ನಮ್ಮೆದುರಿಗೆ ಇದರಿಂದ ಇಟ್ಟಂತಾಗುತ್ತದೆ ಮನುಷ್ಯನು ಈ ಸಂಭಾವನೆ-ಶಿಕ್ಷೆಗಳ ಪದ್ಧತಿಯನ್ನು ಸಮಾಜಕ್ಕೆ ವಿಘಾತಕವಾಗುವ ಕೆಲಸಗಳಲ್ಲಿ ಜನರ ಪ್ರವೃತ್ತಿಯಾಗಬಾರದೆಂದೂ, ಸಮಾಜದ ಏಳಿಗೆಗೆ ಸಹಾಯಕರವಾದ ಕೃತ್ಯಗಳಲ್ಲಿ ಜನರು ತೊಡಗಲಿಕ್ಕೆ ಅವಶ್ಯವಾದ ಒಂದು ಹಿತಕರವಾದ ಆಚಾರವೆಂದೂ ನಿರ್ಮಿಸಿದ್ದಾನೆ. ಆದರೆ, ಮನುಷ್ಯನ ಈ ಸಾಮಾಜಿಕ ಉಪಾಯವನ್ನು ಸೃಷ್ಟಿಯ ನಿಯಮವೆಂದಾಗಲಿ ಅಥವಾ ಈಶ್ವರ ಪ್ರಣೀತ ಧರ್ಮವೆಂದಾಗಲಿ ಅಥವಾ ಮನುಷ್ಯನ ಅಸ್ತಿತ್ವದ ಸರ್ವಶ್ರೇಷ್ಠ ತತ್ವವೆಂದಾಗಲಿ ಗಣನೆ ಮಾಡುವದು ಸರಿಯಾಗಲಾರದು. ವಿಶ್ವದ ವ್ಯಾಪಕವಾದ ಮತ್ತು ಬಹು ತೊಡಕಾದ ಕೃತ್ಯಗಳಿಗೆ ಅಥವಾ ಸತ್ಯಜ್ಞಾನಮಯನಾದ ಪರಮೇಶ್ವರನು ನಮ್ಮ ಸೂಕ್ಷ್ಮವಾದ ಅಸ್ತಿತ್ವದಲ್ಲಿ ಒಂದು ಆಧ್ಯಾತ್ಮಿಕ ಶಕ್ತಿಯನ್ನುಂಟುಮಾಡಿ, ಅದರ ಅದೃಶ್ಯ ಕ್ರಿಯೆಯಿಂದ ನಮ್ಮನ್ನು ತನ್ನ ಕಡೆಗೆ ಎಳೆದುಕೊಳ್ಳುತ್ತಿರುವ ಸೂಕ್ಷ್ಮ ಕೃತ್ಯಕ್ಕೆ, ನಮ್ಮ ಅಜ್ಞಾನದಿಂದುತ್ಪನ್ನವಾದ ಈ ಸಂಕುಚಿತ ಮತ್ತು ಅಲ್ಪ ಉಪಾಯಗಳ ಬಣ್ಣಬಳಿಯುವದೆಂದರೆ ಮನುಷ್ಯಸ್ವಭಾವದ ಒಂದು ಹುಡುಗಾಟಿಕೆಯ ಕೆಲಸವಾಗಿದೆ. ಪರಮೇಶ್ವರನು ಪ್ರಾಣಿಗಳ ಹೃದಯದಲ್ಲಿ ನಿಂತು ಯಂತ್ರಗಳಂತೆ ಎಲ್ಲ ಭೂತಗಳ ನಿಯಮನವನ್ನು ಮಾಡುತ್ತಿರುವ ಈ ಸೂಕ್ಷ್ಮ ಸೂತ್ರಚಾಲನವು, ನಮ್ಮ ಸ್ಥೂಲ ಮನಸ್ಸನ್ನು ಪ್ರತಿಫಲದಿಂದ ಮೋಹಗೊಳಸಿ ಸತ್ಕಾರ್ಯದ ಕಡೆಗೆ ಜಗ್ಗುತ್ತಿರುವ ಈ ಆಮಿಷಾಯುಕ್ತ ಮಾನವ ನಿಯಮದ ಕಾರ್ಯಕ್ಕಿಂತ ಭಿನ್ನವಾಗಿದೆ. ಅನೇಕ ವಿಧದ ಅನುಭವದಿಂದ ಜೀವಾತ್ಮನು

ಉತ್ಕ್ರಾಂತಿಯ ಮಾರ್ಗವನ್ನು ಕ್ರಮಿಸುತ್ತಿದ್ದರೆ, ಮತ್ತು ಈ ವಿಧದ ಅನುಭವಕ್ಕೆ ಕರ್ಮನಿಯಮವು ಅನುಗುಣವಾಗಿ ಸಹಾಯವಾಗುತ್ತಿದ್ದರೆ, ಈ ಕರ್ಮನಿಯಮವು ಅಷ್ಟೇ ವಿವಿಧ ಪ್ರಕಾರದ್ದೂ, ಕೊಡಕಾದದ್ದೂ ಇರಲಿಕ್ಕೆ ಬೇಕು. ಅದೊಂದು ಕೊಂಚ ಸಾಮಗ್ರಿಗಳಿಂದ ತಯಾರಿಸಿದ ಸರಳ ಮತ್ತು ಬಿರುಸಾದ— ಅಲ್ಪ ಪರಿಣಾಮವನ್ನುಂಟು ಮಾಡುವ ನಿಯಮವಿರಲಾರದು.

ಈ ಪ್ರಾಕೃತ ಜನರ ವ್ಯಾವಹಾರಿಕ ಕರ್ಮಕಲ್ಪನೆಗೆ ಒಂದು ಉನ್ನತವಾದ ತಾತ್ವಿಕ ಸ್ಥಾನವು ಪ್ರಾಪ್ತವಾಗದಿದ್ದರೂ, ಅದರಲ್ಲಿಯ ವಸ್ತುಸ್ಥಿತಿಯ ಸತ್ಯವನ್ನು ಕೆಲಮಟ್ಟಿಗೆ ಒಪ್ಪಬೇಕಾಗುತ್ತದೆ. ಯಾಕಂದರೆ, ಎರಡು ನಿಯಮಗಳ ಕಾರ್ಯಕ್ಷೇತ್ರವು ಬೇರೆ ಬೇರೆ ಮತ್ತು ಸ್ವತಂತ್ರವಿದ್ದಾಗ್ಯೂ ಅವು ಒಂದಕ್ಕೊಂದು ಹೊಂದಿಕೊಂಡಾಗಿಯಾಗಲಿ ಅಥವಾ ಒಂದು ಮತ್ತೊಂದರ ಮೇಲೆ ಪರಿಣಾಮವನ್ನುಂಟು ಮಾಡಿಯಾಗಲಿ ಕೆಲಸ ಮಾಡಬಹುದು. ಆದರೆ, ಈ ಎರಡು ನಿಯಮಗಳಲ್ಲಿ ಕಾರ್ಯಕಾರಣದ ಹೊಂದಿಕೆಯ ಭಾವವು ಕಂಡುಬರಲಾರದು. ನಿಸರ್ಗದ ಬೇರೆ ಬೇರೆಯಾದ ಎರಡು ಶಕ್ತಿಗಳ ಕೆಲಸಕ್ಕೆ ತುಸು ಸಮಾನವಾದ ಹೊಂದಿಕೆಯ ಕಾರ್ಯಕ್ಷೇತ್ರವು ಕಂಡುಬಂದರೂ, ಸ್ಥೂಲ ಇಂದ್ರಿಯಗಳ ಹಿತಾಹಿತ ಮತ್ತು ಸೂಕ್ಷ್ಮ ನೈತಿಕ ಹಿತಾಹಿತ ಇವುಗಳಲ್ಲಿ ಕೆಲಮಟ್ಟಿಗೆ ಹೊಂದಿಕೆಯ ವ್ಯವಹಾರವು ಕಂಡುಬಂದರೂ, ಅವುಗಳಲ್ಲಿ ಅಭೇದ್ಯವಾದ ಕಾರ್ಯಕಾರಣ ಸಂಬಂಧವಿರುತ್ತದೆಂದು ಹೇಳಲಿಕ್ಕೆ ಬರುವದಿಲ್ಲ. ನಮ್ಮ ಬೇರೆಬೇರೆಯಾದ ಶಕ್ತಿಗಳೂ, ಇಚ್ಛೆಗಳೂ, ಕ್ರಿಯೆಗಳೂ ಒಂದರಮೇಲೊಂದು ಕೂಡಿ ಕೆಲಸಮಾಡಿ ಒಂದು ಮಿಶ್ರ ಪರಿಣಾಮವನ್ನುಂಟು ಮಾಡಬಹುದು. ನಮ್ಮ ಸದ್ವೃತ್ತಿ, ಜ್ಞಾನ ಅಥವಾ ಪ್ರತಿಯೊಂದು ಬೌದ್ಧಿಕ ಅಥವಾ ದೈಹಿಕ ಪ್ರಯತ್ನ ಇವುಗಳ ಬಗ್ಗೆ ನಮ್ಮ ಅಂತರಾತ್ಮವು ಪ್ರತಿಫಲವನ್ನು ಇಚ್ಛಿಸುತ್ತದೆ. ಹಾಗೂ ಪಾಪಕೃತ್ಯ ಅಥವಾ ಅಜ್ಞಾನ ಇವುಗಳ ಬಗ್ಗೆ ಯೋಗ್ಯವಾದ ಶಿಕ್ಷೆಯನ್ನೂ ನಾವು ಬಯಸುತ್ತೇವೆ. ಅಥವಾ ಈ ಬಗ್ಗೆ ನಮ್ಮ ಶ್ರದ್ಧೆಯೂ ಇದೆ. ಈ ಶ್ರದ್ಧೆಯು ಯೋಗ್ಯ ಪ್ರತಿಫಲವನ್ನು ಉತ್ಪನ್ನ ಮಾಡಬಹುದು.

ಅಥವಾ ವಿಶ್ವದಲ್ಲಿ ಇದಕ್ಕೆ ಸದೃಶವಾದ ಕಾರ್ಯಪಾತಳಿಯಲ್ಲಿ ಅದಕ್ಕೆ ತಕ್ಕ ಉತ್ತರವೂ ದೊರೆಯಬಹುದು. ಯಾಕಂದರೆ, ನಿಸರ್ಗವು ಪ್ರತಿಯೊಬ್ಬನ ಶ್ರದ್ಧೆಗೆ ತಕ್ಕಂತೆ ಉತ್ತರವನ್ನಿತ್ತು, ಅವನಿಗೆ ಕೆಲವುಟ್ಟಿಗೆ ಅನುಕೂಲ ವಾಗುವಂತೆ ವರ್ತಿಸುತ್ತದೆ ( ये यथा मां प्रपद्यंते तांस्तथैव भजाम्यहम् ) ಒಂದು ಅದೃಶ್ಯವಾದ ವಿಶ್ವಶಕ್ತಿಯ ಪರಿಣಾಮವು ಯಾವಾಗಲೂ ನಮ್ಮ ಮೇಲೆ ಆಗುತ್ತದೆಂಬದನ್ನು ನಾವು ಕಂಡುಹಿಡಿದರೆ, ನಮ್ಮ ಜೀವನ ಶಕ್ತಿಗೆ ಸದೃಶವಾದ ಒಂದು ವಿಶ್ವಶಕ್ತಿಯೂ ಇರಬೇಕೆಂಬುದು ಸಿದ್ಧವಾಗುತ್ತದೆ. ಅದೇ ಪ್ರಕಾರ ನಮ್ಮ ಸ್ಥೂಲ ಮನಸ್ಸಿನ ಕ್ರಿಯಾಶಕ್ತಿಗೆ ಸದೃಶವಾದ, ಅದೇ ಪಾತಳಿಯಲ್ಲಿ ಕೆಲಸಮಾಡುವ ವಿಶ್ವಶಕ್ತಿಯೂ ಇರಬೇಕು. ಈ ಶಕ್ತಿಯು ನಮ್ಮ ತಾತ್ವಿಕ ತಳಹದಿಗೆ ತಕ್ಕಂತೆ ಕೆಲಸಮಾಡುತ್ತದೆ. ಉದಾಹರಣಾರ್ಥವಾಗಿ ಹೇಳುವದಂದರೆ, ಯಾವನಾದರೊಬ್ಬ ಅಹಂಕಾರಯುಕ್ತ ವ್ಯಕ್ತಿಯು ತನ್ನ ಪ್ರತಿಷ್ಠೆಯನ್ನೇ ಬೆಳೆಸುವದಕ್ಕೋಸ್ಕರ, ತನ್ನ ಆಜ್ಞೆಯ ಅಥವಾ ಇಚ್ಛೆಯ ವಿರುದ್ಧವಾಗಿ ವರ್ತಿಸುವ ಎಲ್ಲರನ್ನೂ ತಡೆ ಅಥವಾ ಸಂದೇಹವಿಲ್ಲದೆ, ತಿರಸ್ಕರಿಸಿ, ಬಲಾತ್ಕಾರದಿಂದ ತುಳಿಯುತ್ತ ಹೋದರೆ, ಆ ವ್ಯಕ್ತಿಯು ತನ್ನ ವಿರುದ್ಧ ಒಂದು ಪ್ರಬಲವಾದ ಪ್ರತಿಕ್ರಿಯೆಯನ್ನು ಇಲ್ಲಿ ಉಂಟುಮಾಡುತ್ತದೆಂಬದನ್ನು ನಾವು ನೋಡುತ್ತೇವೆ ಈ ತಿರಸ್ಕಾರಯುಕ್ತ ಅಥವಾ ವೈರಭಾವದಿಂದ ಪ್ರೇರಿತವಾದ ಚಟುವಟಿಕೆಯ ಪರಿಣಾಮವು ತತ್ಕಾಲವಾಗಲಿ ಅಥವಾ ಕಾಲಾಂತರದಿಂದಾಗಲಿ ಆಗಿಯೇ ತಿರುತ್ತದೆ. ಈ ವಿಶ್ವದ ಪ್ರತಿಕ್ರಿಯೆಯಿಂದ ಅದು ಹೆಚ್ಚು ಭಯಂಕರವಾಗಿ ಪರಿಣಮಿಸು ವದು. ಈ ವ್ಯಕ್ತಿಯು ಸ್ವಾರ್ಥಸಾಧನಕ್ಕಾಗಿ ಉಪಯೋಗಿಸಿಕೊಂಡ ವಿಶ್ವ ಶಕ್ತಿಯ ಅಥವಾ ಅನುಕೂಲತೆಯ ದುರುಪಯೋಗದಿಂದ, ನಿಸರ್ಗದ ತಾಳ್ಮೆಯು ನಷ್ಟವಾಗಿ, ಈ ಸ್ವಾರ್ಥಸಾಧುವು ತಗ್ಗ ಕೃತ್ಯಕ್ಕೆ ಬಲಾತ್ಕಾರ ದಿಂದ ಹಿಡಿದು ಉಪಯೋಗಿಸಿದ ನಿಸರ್ಗ ಶಕ್ತಿಯೇ ಬಂಡನ್ನೆಬ್ಬಿಸಿ ಅವನ ವಿರುದ್ಧವೇ ತಿರುಗುತ್ತದೆ. ಯಾರು ಆ ವ್ಯಕ್ತಿಯಿಂದ ತಿರಸ್ಕರಿಸಿ ತುಳಿಯಲ್ಪಟ್ಟಿದ್ದರೋ ಅಂಥ ಅವನ ಪ್ರತಿಪಕ್ಷಿಗಳು ಬಲವನ್ನು ಪಡೆದು, ಆ ಅಹಂಕಾರಯುಕ್ತ ವ್ಯಕ್ತಿಯ ನಾಶಕ್ಕೆ ಕಾರಣರಾಗುತ್ತಾರೆ. ಮನುಷ್ಯನ ಈ ಸೊಕ್ಕಿನ ಅಥವಾ ಔದ್ಧತ್ಯದ ಶಕ್ತಿಯು ವಿಶ್ವರಕ್ಷಣೆಯ ಅವಶ್ಯಕತೆಯ

ಬಂಡೆಗೆ ಅಪ್ಪಳಿಸಿ ಪುಡಿಪುಡಿಯಾಗುತ್ತದೆ. ಇಲ್ಲಿಯ ವರೆಗೆ ವಿಜಯಶಾಲಿಯಾದ ಅಪರಾಧಿಯು ಅಂತ್ಯದಲ್ಲಿ ಯೋಗ್ಯ ಶಾಸನವನ್ನು ಹೊಂದುತ್ತಾನೆ. ಅವನ ಈ ದುಷ್ಟ ಶಕ್ತಿಯ ಪ್ರತಿಕ್ರಿಯೆಯು ಅವನ ಮೇಲೆ ಕೂಡಲೇ ಆಗದೆ ಅನ್ಯ ಜನ್ಮದಲ್ಲಿಯೂ ಆಗಬಹುದು. ಅವನು ಹಿಂದೆಮಾಡಿದ ಸ್ವೇಚ್ಛಾಚಾರದ ವಿಹಾರಗಳಿಂದುಂಟಾದ ಪ್ರತಿಫಲದ ಗಂಟನ್ನು ಅವನು ಮುಂದೆ ಉಣ್ಣಬಹುದು. ಅವನ ಸಣ್ಣಪುಟ್ಟ ಎಲ್ಲ ಅಪರಾಧಗಳಿಗೂ ಪ್ರತಿಕ್ರಿಯೆಯು ಉಂಟಾಗಬಹುದು. ಕಾರ್ಯನಿಯಮವು ಎಲ್ಲ ಕ್ಷೇತ್ರದಲ್ಲಿಯೂ ಒಂದೇ ಪ್ರಕಾರದ್ದಿರುತ್ತದೆ. ನಿಸರ್ಗವು ನಮ್ಮ ಉಪಯೋಗಕ್ಕೆ ಕೊಟ್ಟ ಶಕ್ತಿಗಳ ದುರುಪಯೋಗಮಾಡಿ, ಯಶಪ್ರಾಪ್ತಿಗಾಗಿ ಹೆಣಗುತ್ತಿರುವ ನಮ್ಮ ಅಹಂಕಾರವೃತ್ತಿಯು ಪುನಃ ಈ ಶಕ್ತಿಗಳ ಹೊಡೆತಕ್ಕೆ ಸಿಕ್ಕು ಅಪಯಶ, ಸೋಲು, ದುಃಖ ಮುಂತಾದ ಕಷ್ಟತರವಾದ ಪ್ರತಿಕ್ರಿಯೆಯನ್ನು ಅನುಭವಿಸುತ್ತದೆ ಆದರೆ, ವಿಶ್ವದ ಕೆಳಪಾತಳಿಯ ಈ ನಿಯಮವನ್ನು ವಿಶ್ವದಲ್ಲಿಯ ಅಬಾಧಿತ ಮತ್ತು ಅಪರಿಹಾರ್ಯವಾದ ನಿಯಮದ ಸ್ಥಾನಕ್ಕೇರಿಸುವದಾಗಲಿ, ಅಥವಾ ಇದೇ ಪರಮಾತ್ಮನಿಂದ ನಿರ್ಮಿತವಾದ ಈ ಸೃಷ್ಟಿಯ ಒಂದೇ ಒಂದಾದ ಕಟ್ಟಳೆಯೆಂದು ವಾದಿಸುವದಾಗಲಿ ಯೋಗ್ಯವಾಗಲಾರದು. ಆದ್ದರಿಂದ ಈ ಪ್ರತಿಫಲದ ಆಮಿಷವು ಅಥವಾ ಶಿಕ್ಷೆಯ ಹೆದರಿಕೆಯು, ಜೀವನ ಉತ್ಕ್ರಾಂತಿಯಲ್ಲಿಯ ಮಧ್ಯಸ್ಥಿತಿಯಲ್ಲಿ ಕಾರ್ಯಕ್ಷಮವಾದ— ವಸ್ತುಗಳ ಅಂತಿಮ ಸತ್ಯದ ಮತ್ತು ಭೌತಿಕ ಜಗತ್ತಿನ ನಿಷ್ಪಕ್ಷಪಾತಿ ಯಾಂತ್ರಿಕ ಕಾರ್ಯಪದ್ಧತಿಯ ಮಧ್ಯಭೂಮಿಯಲ್ಲಿ ಕಂಡುಬರುವ ಒಂದು ನಿಯಮವೆಂದು ಹೇಳಬೇಕಾಗುತ್ತದೆ.

ಅದೇನೇ ಇದ್ದರೂ ನಿಸರ್ಗದ ಪ್ರತಿಕ್ರಿಯೆಯು ತತ್ವತಃ ಮನುಷ್ಯನ ಸದಾಚಾರ ಅಥವಾ ದುರಾಚಾರಗಳಿಗೆ ಪ್ರತಿಫಲವೆಂದು ಉಂಟಾಗುವದಿಲ್ಲ. ಅದೊಂದು ಕಾರ್ಯಕಾರಣಭಾವದ ನೈಸರ್ಗಿಕ ಸಂಬಂಧವಿದ್ದು, ಅದು ವ್ಯಾವಹಾರಿಕ ಕೊಡಕೊಳ್ಳುವ ಸ್ವರೂಪದ ಪ್ರತಿಫಲವಾಗಲಾರದು. ಜೀವನ ಆಧ್ಯಾತ್ಮಿಕ ಉನ್ನತಿಯ ದೃಷ್ಟಿಯಿಂದ ಅವನ ಸುಖದುಃಖದ ಅನುಭವಗಳು ಈ ವಿಶ್ವಶಾಲೆಯಲ್ಲಿಯ ಪಾಠಗಳಂತೆ ಇವೆ. ನಾವು ಬೆಂಕಿಯನ್ನು

ಮುಟ್ಟಿದರೆ ಅದು ಸುಡುತ್ತದೆ. ಆದರೆ ಈ ಕಾರ್ಯಕಾರಣ ಸಂಬಂಧದಲ್ಲಿ ಶಿಕ್ಷೆಯ ಹೇತುವಿರಲಾರದು ಅದು ಕಾರ್ಯಕಾರಣಭಾವದ ಜ್ಞಾನಮಾಡಿ ಕೊಡುವ ಒಂದು ಅನುಭವವಾಗಿರುತ್ತದೆ. ಅದೇ ಪ್ರಕಾರ ನಿಸರ್ಗದ ಸಂಗಡ ನಾವು ಮಾಡುತ್ತಿರುವ ವ್ಯವಹಾರದಲ್ಲಿ ವಸ್ತುವಿನ ಗುಣಧರ್ಮಗಳ ಜ್ಞಾನವು ನವನಾಗಿ ನಮ್ಮ ಅನುಭವವು ಬೆಳೆಯುತ್ತದೆ. ವಿಶ್ವಶಕ್ತಿಯ ಕ್ರಿಯೆಯು ನಾನಾವಿಧವಾದ್ದಿರುತ್ತದೆ. ಹಾಗೂ ಒಂದೇ ಕ್ರಿಯೆಯ ಪರಿಣಾಮವು ಪರಿಸ್ಥಿತಿಯ ಪ್ರಕಾರ ಅನೇಕ ವಿಧವಾಗಿ ಆಗಬಹುದು; ಜೀವನ ಅವಶ್ಯಕತೆಯಂತೆ ಅಥವಾ ವಿಶ್ವಶಕ್ತಿಯ ಇಚ್ಛೆಯಂತೆ ಪರಿಣಾಮ ದಲ್ಲಿ ವಿವಿಧತೆಯು ಉಂಟಾಗಬಹುದು. ನಮ್ಮ ಜೀವಿತದ ಮೇಲೆ ನಮ್ಮ ಕ್ರಿಯೆಯ ಪರಿಣಾಮವಷ್ಟೇ ಆಗದೆ, ಇತರರ ಕ್ರಿಯೆಯ ಅಥವಾ ನಿಸರ್ಗ ಶಕ್ತಿಯ ಪರಿಣಾಮವೂ ಆಗುತ್ತದೆ. ಅದ್ದರಿಂದ, ಈ ಎಲ್ಲ ಶಕ್ತಿಗಳ ಸಂಮಿಶ್ರವಾದ ಕ್ರಿಯೆಗಳ ಪರಿಣಾಮವನ್ನು, ಕೇವಲ ನಮ್ಮ ನೀತಿಯ ಮೂಲ್ಯದಿಂದಾಗಲಿ, ಅಥವಾ ನಮ್ಮ ಪಾಪ–ಪುಣ್ಯಕರ ಕೃತ್ಯಗಳ ಪರಿಣಾಮ ದಿಂದಾಗಲಿ ಅಳೆಯುವದು ಅಸಮಂಜಸವಾಗಿದೆ. ಆದ್ದರಿಂದ ಮನುಷ್ಯನ ಜೀವನದಲ್ಲಿಯ ಸುದೈವದುರ್ದೈವ, ಸುಖದುಃಖ, ಆನಂದಕಷ್ಟಗಳ ದ್ವಂದ್ವಗಳು ಪ್ರಾಣಿಗಳನ್ನು ಸನ್ಮಾರ್ಗಕ್ಕೆ ಪ್ರೇರೇಪಿಸಬೇಕೆಂದೇ, ಅಥವಾ ದುಷ್ಟಮಾರ್ಗದಿಂದ ಪರಾವೃತ್ತ ಮಾಡಬೇಕೆಂಬ ಒಂದೇ ಉದ್ದೇಶದ ಸಲುವಾಗಿ ಇರುವವೆಂದು ಹೇಳಲಿಕ್ಕೆ ಬರುವದಿಲ್ಲ. ಇಲ್ಲಿಯ ಜೀವನದ ಅನುಭವದಿಂದ ಜೀವಾತ್ಮನು ತನ್ನ ಆಧ್ಯಾತ್ಮಿಕ ಬೆಳವಣಿಗೆಯಾಗಬೇಕೆಂದು ಜನ್ಮವನ್ನು ಪುನಃ ಪುನಃ ತಾಳುತ್ತಾನೆ. ಮತ್ತು ಈ ಜೀವನದಲ್ಲಿಯ ಸುಖದುಃಖಗಳು ಅವನ ಅನುಭವದ ಒಂದು ಭಾಗವಾಗಿವೆ. ಅವನ ಆಧ್ಯಾತ್ಮಿಕ ಉನ್ನತಿಯ ಹಲವು ಸಾಧನಗಳಲ್ಲಿ ಇದೊಂದಾಗಿದೆ. ಜೀವಾ ತ್ಮನು ದಾರಿದ್ರ್ಯ, ಕಷ್ಟನಷ್ಟಗಳನ್ನು ತನ್ನ ಬೆಳವಣಿಗೆಗೆ ಸಹಾಯಕರ ವೆಂದಾಗಲಿ, ಅಥವಾ ಇಂಥ ಸ್ಥಿತಿಯಲ್ಲಿ ಅಧ್ಯಾತ್ಮಿಕ ಬೆಳವಣಿಗೆಯು ದ್ರುತ ಗತಿಯಿಂದ ಆಗುವದೆಂದಾಗಲಿ, ಸ್ವಸಂತೋಷದಿಂದ ಸ್ವೀಕಾರ ಮಾಡ ಬಹುದು. ಸಿರಿವಂತಿಕೆ, ಉತ್ಕರ್ಷ, ಯಶಾದಿಗಳು ತನ್ನ ಆಧ್ಯಾತ್ಮಿಕ ಸಾಧನಕ್ಕೆ ಅಡ್ಡಬರಬಹುದೆಂದು ಅವನ್ನು ತ್ಯಜಿಸಬಹುದು. ಆತ್ಮೀಯ

ಸಮಾಧಾನವನ್ನುಂಟು ಮಾಡುವ ಸುಖಯಶಾದಿಗಳು ಮನುಷ್ಯನಿಗೆ ಅವಶ್ಯವಾಗಿ ಬೇಕು. ಯಾಕಂದರೆ, ಇವು ಮನುಷ್ಯನ ಅಂತಿಮ ಧ್ಯೇಯ ವಾದ ಪರಮಸುಖದ ಪ್ರತಿಬಿಂಬವಾಗಿರುತ್ತವೆ ಆದರೆ, ಮೇಲೆ ಮೇಲೆ ಕಂಡುಬರುವ ಇಂದ್ರಿಯಜನ್ಯ ಸುಖ ಅಥವಾ ಆಧಿಭೌತಿಕ ಉತ್ಕರ್ಷ ಇವು ನಮ್ಮ ಸ್ಥೂಲ ಜೀವನಕ್ಕೆ ಎಷ್ಟೇ ಅವಶ್ಯವಿದ್ದರೂ, ಅವುಗಳ ಸಾಧನೆಯೇ ನಮ್ಮ ಅಸ್ತಿತ್ವದ ಮುಖ್ಯವಾದ ಧ್ಯೇಯವಾಗಲಾರದು. ಇವೇ ನಮ್ಮ ಜೀವಿತದ ಮುಖ್ಯ ಉದ್ದೇಶವಾಗಿದ್ದರೆ, ಈ ಜಗತ್ತಿನಲ್ಲಿಯ ನಮ್ಮ ಜೀವಿತದ ರಚನೆಯು ಬೇರೆ ಪ್ರಕಾರದಿಂದ ಆಗುತ್ತಿತ್ತು. ಜೀವಗಳ ಪುನರ್ಜನ್ಮದ ರಹಸ್ಯವು ಇದಕ್ಕಿಂತ ಹೆಚ್ಚಿನ ಒಂದು ಅತ್ಯಂತ ಮಹತ್ವವಾದ ಅಂತಿಮ ಗುರಿಯಲ್ಲಿದೆ ಜೀವನ ಉತ್ಕ್ರಾಂತಿಗೆ ಅನುಕೂಲವಾದ ಅನುಭವವನ್ನು ಸಂಗ್ರಹಿಸಿ ಆತ್ಮೋನ್ನತಿಯನ್ನು ಮಾಡಿಕೊಳ್ಳುವದೇ ಈ ಜೀವನದ ಮಹತ್ವದ ಗುರಿಯು. ಇತರ ಧ್ಯೇಯಗಳು ಈ ಮುಖ್ಯ ಅವಶ್ಯಕತೆಯ ಪೂರಕವಾಗಿರುತ್ತವೆ ಈ ವಿಶ್ವವು ತನ್ನಲ್ಲಿಯ ಪ್ರತಿಯೊಬ್ಬ ವ್ಯಕ್ತಿಗೆ ನ್ಯಾಯವನ್ನು ಕೊಡುವದಕ್ಕೋಸ್ಕರ ರಚಿತವಾದ ಒಂದು ಆಡಳಿತೆಯ ಪದ್ಧತಿ ಅಥವಾ ನ್ಯಾಯಾಲಯವಾಗಿರುವದಿಲ್ಲ. ಪರಮೇಶ್ವರನು ಈ ನ್ಯಾಯಾಲಯದಲ್ಲಿ ಸ್ಥಾನಾಪನ್ನನಾಗಿ ಅಥವಾ ಈ ವಿಶ್ವದ ಅಧಿಕಾರ ಸೂತ್ರವನ್ನು ವಹಿಸಿ ಜೀವಗಳ ಕೇವಲ ಪಾಪಪುಣ್ಯಗಳಿಗನುಸರಿಸಿ ಸಂಭಾವನೆ ಅಥವಾ ಶಿಕ್ಷೆಗಳನ್ನು ವಿಧಿಸುತ್ತಿರುವದಿಲ್ಲ. ಪ್ರಥಮದಲ್ಲಿ ನಮಗೆ ಈ ವಿಶ್ವವು ಸೃಷ್ಟಿಯ ಅಚೇತನ ಶಕ್ತಿಯಲ್ಲಿ ಗೋಚರವಾಗುತ್ತದೆ. ಅರ್ಥಾತ್, ಈಶ್ವರನ ಚೇತನ ಶಕ್ತಿಯು ಸೃಷ್ಟಿಯ ಅಚೇತನ ಶಕ್ತಿಯ ಕ್ರಿಯೆಯಲ್ಲಿ ಅಡಗಿರುತ್ತದೆ. ಮುಂದೆ ಆತ್ಮನ ಈ ಚೇತನ ಶಕ್ತಿಯು ಸೃಷ್ಟಿಯ ಅಚೇತನ ಶಕ್ತಿಯ ಕ್ರಿಯೆಯಲ್ಲಿ ತಲೆದೋರಿ ತನನ್ನು ತಾನೇ ಪ್ರಕಟಗೊಳಿಸುವ ಅಥವಾ ತನ್ನ ಶಕ್ತಿಯ ಬೆಳವಣಿಗೆಯನ್ನು ಮಾಡಿಕೊಳ್ಳ ಬೇಕೆಂಬ ಪ್ರಯತ್ನದಲ್ಲಿ ತೊಡಗಿದಂತೆ ಕಂಡುಬರುತ್ತದೆ. ಸೃಷ್ಟಿಯ ಆದ್ಯ ಜೀವಜಂತುಗಳಲ್ಲಿ ಈ ಶಕ್ತಿಯು ಉಂಟಾಗುತ್ತದೆ. ಈ ಬೆಳವಣಿಗೆಯ ಅಥವಾ ಉತ್ಕ್ರಾಂತಿಯ ರೇಷೆಯಲ್ಲಿ ಮುಂದುವರಿದಂತೆ, ಜೀವಗಳ ಜನ್ಮ ಮರಣಗಳ ಚಕ್ರವು ಜಂತುಗಳನ್ನು ಆವರಿಸುತ್ತದೆ. ಈ ಚಕ್ರದಲ್ಲಿ ಸಿಕ್ಕು

ತಿರುಗುತ್ತಿರುವ ಜೀವಗಳಲ್ಲಿ, ಒಂದು ಮಾನಸಿಕ ಜೀವನವೂ, ಅದರಲ್ಲಿ ಒಂದು ಅವಿನಾಶಿಯಾದ ವ್ಯಕ್ತಿತ್ವವೂ, ಉತ್ಕ್ರಾಂತಿಯ ಮುಂದಿನ ಹೆಜ್ಜೆಗೆ ಅವಶ್ಯವಿರುವ ಎಲ್ಲ ಸಾಧನಗಳೂ ಈ ಆತ್ಮನ ಬೆಳವಣಿಗೆಯ ಮಾರ್ಗದಲ್ಲಿ ರಚಿತವಾಗುತ್ತವೆ. ಅಥವಾ ಜೀವನ ಬೆಳವಣಿಗೆಯ ಸಲುವಾಗಿ ಪರಮೇಶ್ವರನ ಅಚಿಂತ್ಯ ಜ್ಞಾನಶಕ್ತಿಯಿಂದ, ಅಥವಾ ಸರ್ವಜ್ಞಾನಮಯ ಸಮಷ್ಟಿಪುರುಷನಿಂದ ತಯಾರಿಸಲ್ಪಡುತ್ತವೆ. ಹೊಸ ಜನ್ಮಧಾರಣೆಗಾಗಿ ಭೂತ ಮತ್ತು ವರ್ತಮಾನ ಕಾಲಗಳ ಗತಿಯಿಂದ ಉಂಟಾದ ನಾನಾವಿಧ ಅನುಭವಗಳೊಳಗಿಂದ ಆರಿಸಿದ ಜ್ಞಾನಮಯ ವ್ಯಕ್ತಿತ್ವವು ಜೀವನ ಮೇಲ್ಭಾಗದಲ್ಲಿ ರಚಿತವಾಗುತ್ತದೆ. ಹೀಗೆ ಜೀವಾತ್ಮನ ಮುಂದಕ್ಕೆ ಹೋಗುವ, ಹಿಂದೆ ಬೀಳುವ, ಅಥವಾ ವರ್ತುಳಾಕಾರ ತಿರುಗಿ ಅದೇ ಸ್ಥಾನಕ್ಕೆ ಬರುವ, ನಾನಾವಿಧ ಗತಿಗಳಲ್ಲಿ ಜೀವನು ವಿಕಾಸ ಹೊಂದುತ್ತಿರು-ವದು ಕಂಡುಬರುತ್ತದೆ.

ಇಲ್ಲಿ ಪುನರ್ಜನ್ಮದಲ್ಲಿಯ ಮತ್ತೊಂದು ಸರ್ವಸಾಮಾನ್ಯ ಜನರ ಕಲ್ಪನೆಯ ಊಹಾಪೋಹ ಮಾಡುವದು ಅವಶ್ಯವಾಗಿದೆ. ಈ ಕಲ್ಪನೆಯ ಪ್ರಕಾರ, ಮನುಷ್ಯನ ಹೊರಭಾಗದ ವ್ಯಕ್ತಿತ್ವವೇ ಜೀವವಿದ್ದು, ಅದೇ ಒಂದು ಜನ್ಮದಿಂದ ಮತ್ತೊಂದು ಜನ್ಮದಲ್ಲಿ ಅಥವಾ ಈ ಜನ್ಮಮರಣಗಳ ಸಂಸ್ಕೃತಿಯಲ್ಲಿ ಯಾವ ಪ್ರಕಾರದಿಂದಲೂ ಬದಲಾಗದೆ, ಅದೇ ವ್ಯಕ್ತಿತ್ವವು ಜನ್ಮಜನ್ಮಾಂತರಗಳಲ್ಲಿಯೂ ವ್ಯಕ್ತವಾಗುತ್ತದೆ ಈ ಕಲ್ಪನೆಯು ಶುದ್ಧ ತಾರ್ಕಿಕ ವಿಚಾರದ ಮಾಲಿಕೆಯಲ್ಲಿ ಇಡಲಿಕ್ಕೆ ಯೋಗ್ಯವಾದದ್ದಿರುವದಿಲ್ಲ ವೆಂದು ಹೇಳಬೇಕಾಗುತ್ತದೆ. ಇದೊಂದು ನಮ್ಮ ಸ್ಥೂಲ ಮನಸ್ಸಿನ ಮೋಹಕ ಅಸತ್ಕಲ್ಪನೆಯಾಗಿರುತ್ತದೆ. ಈ ಮೇಲು ಮೇಲಿನ ಸರಳವಾದ ಜೀವ ಮತ್ತು ವ್ಯಕ್ತಿತ್ವದ ಕಲ್ಪನೆಯು ನಮ್ಮ ಸ್ಥೂಲ ಮನಸ್ಸಿಗೆ, ತನ್ನ ರಚನೆಯ ಹಿಂದೆ ಇದ್ದ ವಸ್ತುಸ್ಥಿತಿಯ ಕಡೆಗೆ ನೋಡುವ ಅಸಮರ್ಥತೆ ಯಿಂದ ಉಂಟಾಗಿದೆ. ಈ ಕಲ್ಪನೆಯ ಪ್ರಕಾರ ಪುನಃ ಜನ್ಮತಾಳುವ ಜೀವವು ತನ್ನ ಹಿಂದಿನ ಆತ್ಮೀಯ ವ್ಯಕ್ತಿತ್ವವನ್ನು ಕಾದುಕೊಳ್ಳುವದಷ್ಟೇ ಅಲ್ಲದೇ, ಅದು ತನ್ನ ಹಿಂದಿನ ಜನ್ಮದಲ್ಲಿದ್ದ ಸ್ವಭಾವ ಘಟನೆಯನ್ನೂ ಹಾಗೆಯೇ

ಇಟ್ಟುಕೊಳ್ಳುತ್ತದೆ. ದೇಹವು ಬದಲಾಗುತ್ತದೆ. ಪರಿಸ್ಥಿತಿಯು ಭಿನ್ನವಾಗುತ್ತದೆ. ಆದರೆ ಜೀವಘಟಿತ ಸಾಮುಗ್ರಿಗಳು— ಮನಸ್ಸು, ಸ್ವಭಾವ, ಗುಣಧರ್ಮ, ಪ್ರಕೃತಿ, ಬೇರೆ ಬೇರೆ ಮನೋವೃತ್ತಿಗಳು ಇವೆಲ್ಲವೂ— ಮೊದಲಿನವೇ ಇರುತ್ತವೆ ಹಿಂದಿನ ಜನ್ಮದಲ್ಲಿಯ ದೇವದತ್ತನು ಈಗಿನ ಜನ್ಮದಲ್ಲಿಯೂ ಹಾಗೆಯೇ ಇರುತ್ತಾನೆ ಎಂಬುದೇ ಅವರ ಆಶಯವಾಗಿದೆ. ಹೀಗಿದ್ದ ಪಕ್ಷಕ್ಕೆ ಪುನರ್ಜನ್ಮದ ಕಲ್ಪನೆಯಲ್ಲಿ ಆಧ್ಯಾತ್ಮಿಕ ಉಪಯುಕ್ತತೆಯು ಏನೂ ಕಂಡುಬರುವದಿಲ್ಲ. ಪುನರ್ಜನ್ಮಕ್ಕೆ ಯಾವ ಅರ್ಥವೂ ಇಲ್ಲದಂತಾಗುತ್ತದೆ. ಯಾಕಂದರೆ, ಕಾಲದ ಅಂತ್ಯದವರೆಗೂ ಜೀವನ ಅದೇ ಚಿಕ್ಕ ಅಹಂಭಾವ, ಅದೇ ಮಾನಸಿಕ ರಚನೆಯು ಇರುತ್ತದೆ. ಈ ಮೂರ್ತಸ್ವರೂಪವನ್ನು ಧಾರಣಮಾಡಿದ ಜೀವನು ತನ್ನ ಆಧ್ಯಾತ್ಮಿಕ ಸತ್ಯಸ್ವರೂಪದ ವರೆಗೆ ಬೆಳೆಯಬೇಕಾದರೆ, ಹೊಸ ಅನುಭವವಷ್ಟೇ ಅಲ್ಲದೆ, ಹೊಸ ವ್ಯಕ್ತಿತ್ವದ ಅವಶ್ಯಕತೆಯೂ ಅವನಿಗೆ ಇರುತ್ತದೆ. ಅದೇ ವ್ಯಕ್ತಿತ್ವದ ಪುನರಾವೃತ್ತಿಯು ಆ ವ್ಯಕ್ತಿತ್ವದಲ್ಲಿ ಅಪೂರ್ಣತೆಯಿರುವ ವರೆಗೆ ಉಪಯುಕ್ತವಾಗಬಹುದು. ಅದೇ ವ್ಯಕ್ತಿಯು ಒಂದೇ ತರಗತಿಯ ಅನುಭವದಲ್ಲಿ ಇನ್ನೂ ಕುಂದುಕೊರತೆಗಳು ಕಂಡುಬಂದರೆ ಮಾತ್ರ, ಯಾವದೊಂದು ಜೀವನ ಮನೋರಚನೆಯಲ್ಲಿ ಇನ್ನೂ ಅಪೂರ್ಣತೆಯು ಇದ್ದರೆ, ಅಥವಾ ಅದರ ಶಕ್ತಿಯು ಇನ್ನೂ ಪೂರ್ಣ ಕಾರ್ಯಕ್ಷಮವಿರದಿದ್ದರೆ ಮಾತ್ರ ಅವುಗಳ ಪೂರ್ಣತೆಯು ಸಲುವಾಗಿ, ಅದೇ ವ್ಯಕ್ತಿಯು ಪುನಃ ಜನ್ಮ ತಾಳಬಹುದು. ಇದರ ಹೊರತು, ಸರ್ವಸಾಮಾನ್ಯತಃ ಈ ಪ್ರಕಾರದ ಪುನರ್ಜನ್ಮವು ನಿರುಪಯುಕ್ತವಾದದ್ದು. ದೇವದತ್ತನೆಂಬ ಹೆಸರಿನಿಂದ ಏವಂಗುಣ ವಿಶಿಷ್ಟನಾದ ವ್ಯಕ್ತಿಯು ಸತತ ದೇವದತ್ತನಾಗಿ ಇರುವದರಿಂದ ಏನನ್ನೂ ಅವನು ಹೊಸದಾಗಿ ಸಂಪಾದಿಸಲಾರನು. ಅಥವಾ ಬೆಳವಣಿಗೆಯನ್ನು ಹೊಂದಲಾರನು. ಬೆಳವಣಿಗೆಯು ಅದೇ ಸ್ವಭಾವ, ಅದೇ ಚಿಂತೆ, ಅದೇ ಉದ್ಯೋಗ ಅಥವಾ ಅದೇ ಪ್ರಕಾರದ ಒಳಹೊರಗಿನ ಚಲನವಲನವು ಇರುವದರಿಂದ ಆಗಲಾರದು. ಹೀಗಿದ್ದಪಕ್ಷಕ್ಕೆ ನಮ್ಮ ಜೀವಿತ ಅಥವಾ ಪುನರ್ಜನ್ಮವು, ಆವೃತ್ತದಶಾಂಶದಂತೆ ಪ್ರಗತಿಯಿಲ್ಲದ್ದಾಗುವದು. ಅದು ಉತ್ಕ್ರಾಂತಿಯಾಗದೆ, ಒಂದು ಅರ್ಥಶೂನ್ಯವಾದ ಶಾಶ್ವತ

ಪುನರಾವೃತ್ತಿಯಾಗುತ್ತದೆ. ನಮ್ಮ ಈಗಿನ ವ್ಯಕ್ತಿತ್ವಕ್ಕೆ ಅಂಟಿಕೊಂಡಿರುವದರಿಂದ ಯಾವ ಮಹತ್ವದ ಉದ್ದೇಶವೂ ಸಾಧ್ಯವಾಗಲಾರದು. ದೇವ-ದತ್ತನು ನಿರಂತರ ದೇವದತ್ತನಾಗಿಯೇ—ಅವನ ಎಲ್ಲ ಗುಣದೋಷಗಳಿಂದ ಸಹಿತನಾಗಿಯೇ—ಇರಬಯಸುತ್ತಿದ್ದರೆ, ಈ ಬಯಕೆಯು ಕೇವಲ ಅವನ ಅಜ್ಞಾನಮೂಲಕವಾಗಿದ್ದು, ಈ ಬಯಕೆಯ ತೃಪ್ತಿಯಿಂದ ಅವನ ಜೀವನದಾಶೆಯು ಪೂರ್ಣತೆ ಹೊಂದದೆ, ಆಶಾಭಂಗವೇ ಆಗುತ್ತದೆ. ಆದ್ದರಿಂದ ನಮ್ಮ ಬಾಹ್ಯ ವ್ಯಕ್ತಿತ್ವದಲ್ಲಿ ಬದಲಾವಣೆಯಾಗುವದರಿಂದಲೇ—ನಮ್ಮ ಸ್ವಭಾವದ ಪುರೋವೃದ್ಧಿಯಿಂದಲೇ—ಅಂತರಾತ್ಮನ ವಿಕಾಸವಾಗಿ ನಮ್ಮ ಅಸ್ತಿತ್ವದ ಸಾಫಲ್ಯವಾಗುತ್ತದೆ

ನಮ್ಮ ಬದಲಾಗುತ್ತಿರುವ ಈ ಬಾಹ್ಯ ಮನೋಮಯ, ಪ್ರಾಣಮಯ ಮತ್ತು ಅನ್ನಮಯ ವ್ಯಕ್ತಿತ್ವವನ್ನು ತ್ರಿಕಾಲಾಬಾಧಿತನಾದ ಜ್ಞಾನಪುರು-ಷನು ಉಡಿಗೆಯಂತೆ ಮೇಲ್ಭಾಗದಲ್ಲಿ ಕಾಲಕಾಲಕ್ಕೆ ಧಾರಣಮಾಡುತ್ತಾನೆ. ಈ ಬಾಹ್ಯ ವ್ಯಕ್ತಿತ್ವವೇ ಈ ಪುರುಷನ ಸತ್ಯವಾದ—ಬದಲಾಗದ ಸ್ವರೂಪವಲ್ಲ. ಈ ಲೋಕದಲ್ಲಿ ಪುನರಾವೃತ್ತಿಯನ್ನು ಹೊಂದುವಾಗ ಜೀವಾತ್ಮನು ತನ್ನ ಬಾಹ್ಯ ವ್ಯಕ್ತಿತ್ವದ ತೊಡಿಗೆಯನ್ನು ಹೊಸದಾಗಿ ತಯಾರಿಸುವನು. ಹೊಸ ಅನುಭವಕ್ಕೆ ಯೋಗ್ಯವಾಗುವಂತೆ, ತನ್ನ ಆತ್ಮತ್ವದ ಮುಂದಿನ ಬೆಳವಣಿಗೆಗೆ ಅನುಕೂಲವಾಗುವಂತೆ ತನ್ನ ಬಾಹ್ಯ ವ್ಯಕ್ತಿತ್ವದ ತೊಡಿಗೆಯನ್ನು ತೊಡುವನು. ಈ ಸ್ಥೂಲದೇಹದಿಂದ ಹೊರಗೆ ಹೋಗುವಾಗ, ಅವನ ಮನೋಮಯ ಮತ್ತು ಪ್ರಾಣಮಯ ತೊಡಿಗೆಯು ಇದ್ದರೂ, ಅವನ ಮೂಲಭೂತ ಆಕಾರವು ಅಥವಾ ಗಟ್ಟಿಯಾದ ಮೂರ್ತಸ್ವರೂಪವು ಕರಗುತ್ತದೆ. ಆದರೆ, ಅದರಲ್ಲಿ ಭೂತಕಾಲದ ಎಲ್ಲ ಸಂಸ್ಕಾರಗಳು ಬೀಜರೂಪವಾಗಿ ಉಳಿದುಕೊಳ್ಳುವವು. ಮುಂದಿನ ಜನ್ಮದಲ್ಲಿ ಇವುಗಳಲ್ಲಿಯ ಕೆಲವನ್ನು ಮಾತ್ರ ಜೀವನು ಉಪಯೋಗಿಸಬಹುದು; ಉಳಿದವುಗಳನ್ನು ಉಪಯೋಗಿಸಲಿಕ್ಕಿಲ್ಲ ಭೂತಕಾಲದಲ್ಲಿಯ ವ್ಯಕ್ತಿತ್ವದ ಮಹತ್ವದ ಭಾಗವು ಅವನ ಹೊಸ ವ್ಯಕ್ತಿತ್ವದ ಹಲವು ಪ್ರಕಾರಗಳಲ್ಲಿ ಒಂದಾಗಿ ಉಳಿಯಬಹುದು. ಒಂದೇ ಪುರುಷನ ಅನೇಕ ವ್ಯಕ್ತಿತ್ವಗಳಲ್ಲಿ ಅವನ ಹಿಂದಿನ

ವ್ಯಕ್ತಿತ್ವವು ಒಂದಾಗಬಹುದು. ಆದರೆ, ಅದು ಅವನ ಮನೋಮಯ, ಪ್ರಾಣಮಯ ಮತ್ತು ಅನ್ನಮಯ ಬಾಹ್ಯರಚನೆಯ ತೆರೆಗಳ ಹಿಂಭಾಗದಲ್ಲಿ ಉಳಿದು, ಅದು ಅಲ್ಲಿಂದಲೇ ಅವನಿಗೆ ತನ್ನಿಂದ ಹೊಸರಚನೆಗೆ ಅವಶ್ಯ ವಿರುವದನ್ನಷ್ಟೇ ಪೂರೈಸುವದು. ಆದರೆ, ಅದೇ ಪೂರ್ಣವಾದ ಹೊಸ ರಚನೆಯಾಗಲಾರದು. ಅಥವಾ ಅದೇ ಹಿಂದಿನ ಬದಲಾಗದ ಸ್ವಭಾವ ವಾಗಲಾರದು. ಇಷ್ಟೇ ಅಲ್ಲ, ನೂತನವಾಗಿ ರಚಿತವಾದ ಈ ವ್ಯಕ್ತಿತ್ವದಲ್ಲಿ, ಹಿಂದಿನ ಸ್ವಭಾವಕ್ಕೆ ಪೂರ್ಣ ವಿರುದ್ಧವಾದ ಸ್ವಭಾವವನ್ನೂ, ಪ್ರಕೃತಿ ಯನ್ನೂ, ಹೊಸ ಸಾಮರ್ಥ್ಯವನ್ನೂ ಮನೋವೃತ್ತಿಯನ್ನೂ ಅದು ವ್ಯಕ್ತ ಮಾಡಬಹುದು. ಯಾಕಂದರೆ, ಅವನಲ್ಲಿಯ ಹಿಂದಿನ ಕೆಲವು ಸುಪ್ತವಾದ ಶಕ್ತಿಗಳು ಈಗಿನ ಹೊಸ ಪರಿಸ್ಥಿತಿಯಲ್ಲಿ ಜಾಗ್ರತವಾಗಬಹುದು. ಅಥವಾ ಅವನ ಹಿಂದಿನ ಜನ್ಮದಲ್ಲಿಯೇ ಕಾರ್ಯಕ್ಷಮವಾದ ಆದರೆ, ಅನುಕೂಲ ತೆಯ ಅಭಾವದಿಂದ ಕಾರ್ಯಾರಂಭಕ್ಕೆ ಪ್ರೋತ್ಸಾಹನೆ ಸಿಗದ ಸಂಸ್ಕಾರ ಗಳು, ಈಗ ಅವಕ್ಕೆ ಅನುಕೂಲವಾದ ಹಲವು ಪರಿಸ್ಥಿತಿಗಳು ಒಟ್ಟುಗೂಡಿ ದಲ್ಲಿ, ಫಲದ್ರೂಪವಾಗಬಹುದು. ಭೂತಕಾಲದ ಎಲ್ಲ ಸಂಸ್ಕಾರಗಳೂ ಈಗ ಏಕೀಕೃತವಾಗಿಯೇ ವರ್ತಮಾನ ಕಾಲದಲ್ಲಿ ಇರುವವು. ಅವು ಭವಿಷ್ಯತ್ಕಾಲವನ್ನು ತಯಾರಿಸಲಿಕ್ಕೆ ತಮ್ಮ ತಮ್ಮ ಶಕ್ತಿ ಮತ್ತು ಶಕ್ಯತೆ ಗಳಿಂದ ಕೂಡಿರುತ್ತವೆ. ಆದರೆ, ಅವೆಲ್ಲವೂ ಎದ್ದು ಕಾಣುವಷ್ಟು ಸುಸ್ಪಷ್ಟವಾಗಿರುವದಿಲ್ಲ. ಹಿಂದಿನ ಸಂಸ್ಕಾರಗಳು ಎಷ್ಟು ವಿವಿಧವಿರುವವೋ ಮತ್ತು ಅವನ್ನು ಉಪಯೋಗಕ್ಕೆ ತರುವ ಅನುಕೂಲತೆ ಮತ್ತು ಶಕ್ಯತೆಯು ಎಷ್ಟು ಇರುವದೋ, ಅಷ್ಟು ವಿವಿಧ ಅನುಭವಗಳ ಮತ್ತು ವಿಪುಲ ಶಕ್ತಿ ಸಂಪನ್ನವಾದ ರಚನೆಯು ನಮ್ಮ ಬಾಹ್ಯ ವ್ಯಕ್ತಿತ್ವದಲ್ಲಿ ಬರುತ್ತದೆ. ಇದರಿಂದ ವ್ಯಕ್ತಿಯ ಜ್ಞಾನಶಕ್ತಿ, ಕ್ರಿಯಾಶಕ್ತಿ ಮತ್ತು ಸ್ವಭಾವ ಇವು ಸಮಷ್ಟಿಯ ಕ್ರಿಯೆಗೆ ಅನುಕೂಲವಾಗುವಂತೆ ಬದಲಾಗಿ ಹೊಸಜನ್ಮದಲ್ಲಿ ಸುಸಂಬದ್ಧವಾದ ಸ್ವಭಾವ ರಚನೆಯು ಉಂಟಾಗುತ್ತದೆ ಈ ಹಿಂದಿನ ಮಾನಸಿಕ, ಪ್ರಾಣಮಯ ಮತ್ತು ಸೂಕ್ಷ್ಮ ಪಂಚಭೂತಾತ್ಮಕ ದೇಹಗಳ ಮೇಲಿನ ಸಂಸ್ಕಾರಗಳ ವಿವಿಧತೆಯು ಬಾಹ್ಯವ್ಯಕ್ತಿಯನ್ನು ಯಾವ ಮಾನದಿಂದ ಸುಸಮೃದ್ಧಗೊಳಿಸುವವೋ ಆ ಮಾನದಿಂದ ಈ ಹೊರಗಿನ

ವ್ಯಕ್ತಿಯು ಗುಣಸಂಪನ್ನನೂ ಮತ್ತು ಬಾಹ್ಯ ವ್ಯಕ್ತಿತ್ವದ ಇಕ್ಕಟ್ಟಾದ ಇರುವಿಕೆಯನ್ನು ದಾಟಿ, ಉತ್ಕ್ರಾಂತಿಯ ಮಾರ್ಗದಲ್ಲಿ ಮುಂದಿನ ಹೆಜ್ಜೆಯನ್ನು ಇಡಲಿಕ್ಕೆ ಸಮರ್ಥನೂ ಆಗುತ್ತಾನೆ. ಒಂದೇ ಮಧ್ಯವರ್ತೀ ವ್ಯಕ್ತಿಯಲ್ಲಿ ಈ ಪ್ರಕಾರದ ಅನೇಕ ವಿವಿಧತೆಯುಳ್ಳ ಅನೇಕ ವ್ಯಕ್ತಿತ್ವದ ಸಂಗ್ರಹವು ಆ ವ್ಯಕ್ತಿಯ ಉತ್ಕ್ರಾಂತಿಯಲ್ಲಿಯ ಉಚ್ಚಸ್ಥಾನವನ್ನು ತೋರಿಸುತ್ತದೆ. ಈ ಸ್ಥಿತಿಯಲ್ಲಿ ಒಬ್ಬ ಬಲಸಂಪನ್ನನಾದ ವ್ಯಕ್ತಿಯು ತನ್ನಲ್ಲಿಯ ವಿವಿಧಗುಣಗಳನ್ನು ಒಟ್ಟಾಗಿ ಹಿಡಿದು ತನ್ನ ಸ್ವಭಾವದ ಬಹುಮುಖದಿಂದ ಹೊರಡುವ ವೃತ್ತಿಗಳನ್ನು ತನ್ನ ಆಧೀನದಲ್ಲಿಟ್ಟುಕೊಂಡು, ಚತುರ ಸಾರಥಿಯಂತೆ, ಅತಿ ಸುಂದರವಾದ ತಾಲಬದ್ಧವಾದ ಜೀವನ ರಥವನ್ನು ನಡೆಸುತ್ತಾನೆ. ಆದರೆ, ಈ ಪ್ರಕಾರ ತನ್ನ ಹಿಂದಿನ ಹಲವು ಸಂಸ್ಕಾರಗಳ ಉಪಯುಕ್ತತೆಯನ್ನು, ಈ ಜೀವನದಲ್ಲಿ ಮಾಡಿಕೊಳ್ಳುವ ದೆಂದರೆ, ಅದು ಹಿಂದಿನ ಜೀವನದ ಅಥವಾ ವ್ಯಕ್ತಿತ್ವದ ಪುನರಾವೃತ್ತಿಯಲ್ಲ. ಅದೊಂದು ಸ್ವತಂತ್ರವಾದ ಹೊಸ ರಚನೆಯು—ಹಿಂದಿನ ಜನ್ಮದ ಪೂರ್ತತೆಯು. ಇದರ ಮೇಲಿಂದ ಪುನರ್ಜನ್ಮದ ಉದ್ದೇಶವು ಹಿಂದಿನ ವ್ಯಕ್ತಿತ್ವವನ್ನೇ ಮುಂದುವರಿಸುವದಿರದೆ, ಜೀವನ ತಾತ್ವಿಕ ಸ್ವರೂಪವಾದ ಆತ್ಮನ ಕ್ರಮಬದ್ಧ ಪ್ರಕಟನೆ, ಅರ್ಥಾತ್ ಉತ್ಕ್ರಾಂತಿಯಾಗಬೇಕೆಂಬದೇ ಇರುತ್ತದೆಂಬದು ಸ್ಪಷ್ಟವಾಗುತ್ತದೆ.

ಈ ಪ್ರಕಾರದ ಪುನರ್ಜನ್ಮದ ಈಶ್ವರೀ ಯೋಜನೆಯಲ್ಲಿ ಹಿಂದಿನ ಜನ್ಮಗಳ ಸ್ಮರಣಕ್ಕೆ ವಿಶೇಷವಾದ ಮಹತ್ವವು ಇರಲಾರದೆಂದು ಒಮ್ಮೆಲೇ ಕಂಡುಬರಬಹುದು. ಪುನರ್ಜನ್ಮದ ಉದ್ದೇಶವು ಪುಣ್ಯಪಾಪಗಳಿಗೆ ಯೋಗ್ಯವಾದ ಪ್ರತಿಫಲ ಅಥವಾ ಶಿಕ್ಷೆಗಳನ್ನು ವಿಧಿಸಿ ಈ ದೇಹಧಾರಣ ಮಾಡಿದ ಮನುಷ್ಯಪ್ರಾಣಿಗೆ ನೀತಿಯ ಪಾಠಗಳನ್ನು ಕಲಿಸುವದಷ್ಟೇ ಇದ್ದ ಪಕ್ಷಕ್ಕೆ, ಅಥವಾ ನಾವು ಮೇಲೆ ವರ್ಣಿಸಿದಂತೆ ಆತ್ಮೋನ್ನತಿಯೇ ಕರ್ಮಫಲದ ನಿಜವಾದ ಉದ್ದೇಶವಿರದೆ, ಅದೊಂದು ಯಾಂತ್ರಿಕ ನೀತಿಪಾಠ ಕಲಿಸುವ ಸಾಲೆಯಾಗಿದ್ದ ಪಕ್ಷಕ್ಕೆ ಜೀವನಿಗೆ ತನ್ನ ಹಿಂದಿನ ಜನ್ಮಗಳ ಮತ್ತು ಅದರಲ್ಲಿಯ ಕರ್ಮಗಳ ಸ್ಮರಣವು ಇರದೇ ಇರುವದು ಮೂರ್ಖತನದ್ದಾ

ಅನ್ಯಾಯವದ್ದೂ ಆಗುತ್ತಿತ್ತು. ಯಾಕಂದರೆ, ಪುನರ್ಜನ್ಮ ತಾಳಿದ ಜೀವನಿಗೆ ತನ್ನ ಹಿಂದಿನ ಜನ್ಮಗಳಲ್ಲಿ ಮಾಡಿದ ಯಾವ ಸತ್ಕೃತ್ಯಗಳ ಬಗ್ಗೆ ಈಗಿನ ಸುಖಪ್ರಾಪ್ತಿಯೂ, ಯಾವ ದುಷ್ಕೃತ್ಯಗಳ ಬಗ್ಗೆ ದುಃಖವೂ ಪ್ರಾಪ್ತವಾಗಿರುತ್ತದೆಂಬದನ್ನು ತಿಳಿದುಕೊಳ್ಳುವ ಸಾಧನೆಯೇ ಈ ವಿಸ್ಮರಣದಿಂದ ಉಳಿಯುವದಿಲ್ಲ. ಅಥವಾ ಈ ಜನ್ಮದಲ್ಲಿದ್ದ ತನ್ನ ಸುದೈವ ಅಥವಾ ದುರ್ದೈವಗಳ ಕಾರಣವೇನೆಂಬದು ಅವನಿಗೆ ತಿಳಿಯುವದೇ ಇಲ್ಲ. ಆದರೆ, ಇದರ ವಿರುದ್ಧವಾಗಿ ಈ ಜೀವನದಲ್ಲಿ ಸಜ್ಜನರು ತಮ್ಮ ಸದ್ವರ್ತನದ ಬಗ್ಗೆ ಕಷ್ಟಗಳಿಗೆ ಗುರಿಯಾದದ್ದನ್ನೂ, ದುಷ್ಟರು ತಮ್ಮ ದುಷ್ಕೃತ್ಯಗಳಿಂದ ಸುಖಿಯಾಗಿ ಬಾಳುವದನ್ನೂ ಅವನು ಪ್ರತ್ಯಕ್ಷ ನೋಡುತ್ತಿರುವ ಕಾರಣ ಈ ವಿರುದ್ಧವಾದ ಕಾರ್ಯಕಾರಣ ಸಂಬಂಧವನ್ನು ಅವನು ಊಹಿಸಬಹುದು. ಯಾಕಂದರೆ, ಅವನ ಹಿಂದಿನ ಜನ್ಮದ ಕೃತ್ಯಗಳ ನೆನಪು ಅವನಿಗಿಲ್ಲದ್ದರಿಂದ, ವಿಶಿಷ್ಟ ಕಾರ್ಯದ ಪರಿಣಾಮವು ವಿಶಿಷ್ಟ ಪ್ರಕಾರದಿಂದಲೇ ಆಗುತ್ತದೆಂಬ ಅನುಭವಜನ್ಯ ಜ್ಞಾನವು ಅವನಿಗಿರದ್ದರಿಂದ, ಈಗ ಸದಾಚಾರಿಯಾದವನ ದುಃಖವು ಹಿಂದಿನ ಜನ್ಮಗಳ ಪಾಪಗಳ ಪರಿಣಾಮವಾಗಿಯೂ, ಈಗ ದುಷ್ಟಕೃತ್ಯಗಳಲ್ಲಿ ತೊಡಗಿರುವವನ ಸುಖವು ಹಿಂದಿನ ಪುಣ್ಯದ ಪರಿಣಾಮವಾಗಿಯೂ ಇರುವದೆಂದು ತಿಳಿದುಕೊಳ್ಳುವದಕ್ಕೆ ಸಾಧನವಾದ ಹಿಂದಿನ ಜನ್ಮದ ಸ್ಮರಣೆಯು ಇಲ್ಲದಿರುವದು ಅನ್ಯಾಯವಾಗುವದು. ಆದ್ದರಿಂದ ಅಂತ್ಯದಲ್ಲಿ ಸತ್ಕೃತ್ಯಕ್ಕೇ ಜಯವೆಂಬದನ್ನೂ, ಸತ್ಯವೇ ವಿಚಾರಶೀಲನಾದವನಿಗೆ—ಶೀಲವೇ ವಿವೇಕಿಗೆ ನಿಜವಾದ ಆಧಾರವೆಂಬದನ್ನೂ ತಿಳಿಯುವದು ಅಸಾಧ್ಯವಾಗುತ್ತದೆ. ನಮ್ಮ ಅಂತರಾತ್ಮನಿಗೆ ಇವೆಲ್ಲವುಗಳ ಜ್ಞಾನವು ಇರುವದೆಂದು ನಾವು ವಾದಿಸಬಹುದು. ಆದರೆ, ಈ ಗುಪ್ತಜ್ಞಾನದ ಉಪಯೋಗವು ನಮ್ಮ ಬಾಹ್ಯ ವ್ಯವಹಾರದಲ್ಲಿ ಕ್ವಚಿತ್ತಾಗಿಯೇ ಆಗುವದು. ಜೀವನು ಈ ಸ್ಥೂಲದೇಹದಿಂದ ಉತ್ಕ್ರಮಣ ಹೊಂದಿ ವಿದೇಹ ಸ್ಥಿತಿಯಲ್ಲಿರುವಾಗ ತನ್ನ ಹಿಂದಿನ ಕರ್ಮಗಳ ಪರಿಣಾಮವನ್ನು ನೆನಿಸಿ, ಹಿಂದಿನ ಅನುಭವವನ್ನು ಪರಿಶೀಲಿಸಿ, ಅದನ್ನು ಪೈಗೂಡಿಸಿಕೊಳ್ಳುವನೆಂದು ನಾವು ಹೇಳುವದಾದರೆ ಈ ಮಧ್ಯಸ್ಥಿತಿಯ ನೆನಪು ಮುಂದಿನ ಜನ್ಮದಲ್ಲಿ ಬಹಳ ಉಪಯೋಗಕ್ಕೆ ಬರುವದಿಲ್ಲವೆಂದು ಕಂಡು

ಬರುತ್ತದೆ. ಯಾಕೆಂದರೆ, ನಮ್ಮಲ್ಲಿಯ ಹಲವರು ಪಾಪಕೃತ್ಯಗಳನ್ನು ಮಾಡುವದರಲ್ಲಿಯೇ ಪುನಃಪುನಃ ಪ್ರವೃತ್ತರಾಗುತ್ತಿದ್ದು, ಅವರು ಹಿಂದಿನ ಅನುಭವದ ಪಾಠಗಳಿಂದ ಏನೂ ಲಾಭಹೊಂದಿದ್ದು ಕಂಡುಬರುವದಿಲ್ಲ.

ಆದರೆ, ಈ ವಿಶ್ವದ ಬೆಳೆಯುವ ಅನುಭವದಿಂದ, ಜೀವಾತ್ಮನ ಬೆಳವಣಿಗೆಯೇ ಪುನರ್ಜನ್ಮದ ಅರ್ಥವಾಗಿದ್ದರೆ, ಮತ್ತು ಹೊಸ ಜನ್ಮದಲ್ಲಿ ಹೊಸ ವ್ಯಕ್ತಿತ್ವವನ್ನು ರಚಿಸುವದೇ ಇದಕ್ಕೆ ಸಾಧನವಾಗಿದ್ದರೆ, ಹಿಂದಿನ ಜನ್ಮಗಳ ಪೂರ್ಣ ಅವ್ಯಾಹತವಾದ ಸ್ಮರಣವು ಒಂದು ಬಂಧನವೇ ಆಗಿ, ಅದು ಮುಂದಿನ ಪ್ರಗತಿಗೆ ಅಡ್ಡಬರುತ್ತಿತ್ತು. ಈ ಸ್ಮರಣವು ಹಿಂದಿನ ಪ್ರಕೃತಿ, ಸ್ವಭಾವ ಅಥವಾ ಸಂಸರ್ಗಗಳನ್ನೇ ಮುಂದುವರಿಸುವ ಶಕ್ತಿಯಾಗಿ ಹೊಸ ವ್ಯಕ್ತಿತ್ವದ ಬೆಳವಣಿಗೆಯ ಮಾರ್ಗದಲ್ಲಿ ಒಂದು ದೊಡ್ಡ ಗುಡ್ಡವೇ ಆಗುತ್ತಿತ್ತು. ಹಾಗು ಅದರ ಹೊಸ ಅನುಭವದ ಸಂಗ್ರಹಕ್ಕೆ ವಿಘ್ನವನ್ನುಂಟು ಮಾಡುತ್ತಿತ್ತು. ಹಿಂದಿನ ಜನ್ಮಗಳ ಸ್ಪಷ್ಟವಾದ ಮತ್ತು ಸಣ್ಣಪುಟ್ಟ ಎಲ್ಲ ಸಂಗತಿಗಳ ಸ್ಮರಣವು—ಹಿಂದಿನ ದ್ವೇಷಾನುರಾಗ, ಅಸೂಯೆ, ಅನುರಕ್ತಿ, ಪರಸ್ಪರ ಬಂಧುತ್ವ, ಸಂಬಂಧ ಇವೆಲ್ಲವೂ—ಒಂದು ಅಲಂಘ್ಯವಾದ ತೊಂದರೆಯನ್ನುಂಟುಮಾಡುತ್ತಿದ್ದವು. ಯಾಕಂದರೆ, ಹೊಸ ಜನ್ಮವನ್ನು ತಾಳಿದ ಜೀವನ ಈ ಜಾಗ್ರತವಾದ ಹಿಂದಿನ ಜನ್ಮಗಳ ಸ್ಮರಣವು ಅವನ ಮೇಲ್ಭಾಗದ ಜೀವನಕ್ಕೆ ಅಂಟಿಕೊಂಡು, ಅದೇ ನಿರುಪಯುಕ್ತ ಹಳೇ ಚರಿತ್ರದ ಪುನರಾವೃತ್ತಿಯನ್ನುಂಟು ಮಾಡುತ್ತಿತ್ತು ಜೀವನ ಉತ್ಕ್ರಾಂತಿಯಲ್ಲಿ ಬೌದ್ಧಿಕ ವಸ್ತುಜ್ಞಾನಕ್ಕೇ ಮಹತ್ವದ ಸ್ಥಾನ ಕೊಟ್ಟಿದ್ದರೆ—ಅದೇ ಉತ್ಕ್ರಾಂತಿಯ ಮಾರ್ಗವಾಗಿದ್ದರೆ, ಹಿಂದಿನ ಜನ್ಮದ ಸ್ಮರಣೆಗೆ ಮಹತ್ವವು ಬರಬಹುದಾಗಿತ್ತು. ಆದರೆ, ಉತ್ಕ್ರಾಂತಿಯೆಂದರೆ, ಈ ಪ್ರಕಾರದ ಬಾಹ್ಯ ಅಲಂಕಾರಗಳ ಹೆಚ್ಚುವಿಕೆಯಿರದೆ ಆ ವ್ಯಕ್ತಿಯ ಆತ್ಮತ್ವದ ಬೆಳವಣಿಗೆಯೇ ಆಗಿರುತ್ತದೆ ; ನಮ್ಮ ಅಂತರಾತ್ಮದಲ್ಲಿ ಬಾಹ್ಯ ಅನುಭವಗಳಿಂದುಂಟಾದ ಜ್ಞಾನವನ್ನು ಅರಗಿಸಿಕೊಂಡು ಆತ್ಮಗುಣಗಳನ್ನು ಬೆಳೆಸುವದು, ಅಥವಾ ಹಿಂದಿನ ಅನುಭವಗಳಿಂದುಂಟಾದ ಸಾರಾಂಶ ಜ್ಞಾನದಿಂದ ಮುಂದಿನ ಪ್ರಗತಿಯನ್ನು ಮಾಡುವದಿರುವದರಿಂದ, ಇಂಥ ಉತ್ಕ್ರಾಂತಿಯಲ್ಲಿ ಹಿಂದಿನ ಜನ್ಮಸ್ಮರಣದ ಮಹತ್ವವು ಬಹಳವಿರುವ

ದಿಲ್ಲ. ಗಿಡವು ಬಿಸಿಲು, ಮಳೆ, ಗಾಳಿ ಇವುಗಳನ್ನು ಒಂದು ಸುಪ್ತಮಾನಸ ಕ್ರಿಯೆಯಿಂದ ಪಚನಮಾಡಿಕೊಂಡು ಮತ್ತು ಭೂಮಿಯ ಅಂಶವನ್ನು ಆತ್ಮಸಾತ್ ಮಾಡಿಕೊಂಡು ಬೆಳೆಯುತ್ತಿರುತ್ತದೆ. ಅದೇ ಪ್ರಕಾರ, ಜೀವನು ಸುಪ್ತವಾದ ಒಳಗಿನ ಸೂಕ್ಷ್ಮ ಮಾನಸಿಕ ಕ್ರಿಯೆಯಿಂದ ಹಿಂದಿನ ಅನುಭವಗಳ ಸಂಸ್ಕಾರಗಳ ಅನುಕೂಲ ಅಂಶಗಳನ್ನು ಆತ್ಮಸಾತ್ ಮಾಡಿಕೊಂಡು ಮುಂದಿನ ತನ್ನ ಇರುವಿಕೆಯ ಅಥವಾ ಜನ್ಮದ ಸಿದ್ಧತೆಯನ್ನು ಮಾಡುತ್ತಿರುತ್ತಾನೆ. ಆದ್ದರಿಂದ ಹಿಂದಿನ ಜನ್ಮಗಳ ಸ್ಮರಣವನ್ನು ಇಲ್ಲದಂತೆ ಮಾಡುವ ವಿಸ್ಮರ್ತನ ಕ್ರಿಯೆಯು ಜಾಣತನದ್ದೇ ಆಗಿದ್ದು, ಅದು ಈ ಉತ್ಕ್ರಾಂತಿಯ ಮಾರ್ಗಕ್ಕೆ ಸಹಾಯಕರವೇ ಆಗಿದೆ; ಅಪಾಯಕರವಾದದ್ದಿರುವದಿಲ್ಲ.

ಹಿಂದಿನ ಜನ್ಮಗಳ ವಿಸ್ಮರಣೆಯು ಅಥವಾ ಮರೆವು ಪುನರ್ಜನ್ಮದ ಅಸತ್ಯತೆಯನ್ನು ಸಿದ್ಧಮಾಡುವ ಒಂದು ಬಲವತ್ತರವಾದ ಪ್ರಮಾಣವೆಂದು ಕುತರ್ಕಿಗಳು ತಪ್ಪುತಿಳುವಳಿಕೆಯಿಂದ ಪ್ರತಿಪಾದಿಸುತ್ತಾರೆ. ಇದೇ ಜನ್ಮದಲ್ಲಿಯ ಹಿಂದಿನ ಎಲ್ಲ ಸಂಗತಿಗಳನ್ನು ಲಕ್ಷದಲ್ಲಿಡುವದು ಶಕ್ಯವಿಲ್ಲವೆಂಬದನ್ನು ನಾವು ನೋಡುತ್ತೇವೆ. ಅವು ಹಲವು ಸಾರೆ ಮನಸ್ಸಿನ ಹಿಂಭಾಗದಲ್ಲಿ ಅಡಗಿ ಇರಬಹುದು ಅಥವಾ ಪೂರ್ಣವಾಗಿ ವಿಸ್ಮರಣೆಯನ್ನು ಹೊಂದಬಹುದು. ನಮ್ಮ ಬಾಲ್ಯದ ನೆನಪು ನಮಗೆ ಇರುವದಿಲ್ಲ ಆದರೂ ನಾವು ಬಾಲ್ಯದಿಂದ ಬೆಳೆದು ದೊಡ್ಡವರಾಗುತ್ತೇವೆ. ಮತ್ತು ಬಾಲ್ಯಾವಸ್ಥೆಯ ನಾವೇ ಪ್ರೌಢಾವಸ್ಥೆಯಲ್ಲಿ ಇರುತ್ತೇವೆ. ಹಿಂದಿನ ಕೃತ್ಯಗಳು ಕೆಲವು ಸಾರೆ, ಪೂರ್ಣ ವಿಸ್ಮರಣೆಯನ್ನು ಹೊಂದಿದ್ದರೂ, ಆಗಿನ ಅನುಭವ ಪಡೆದ ವ್ಯಕ್ತಿಯು ಈಗೂ ತಾನೇ ಇರುವೆನೆಂಬ ಬಗ್ಗೆ ನಿಶ್ಚಿತವಾದ ಸ್ಮರಣ ವಿರುವದಿಲ್ಲ. ಇಂಥ ವಿಸ್ಮೃತವಾದ ಸಂಗತಿಗಳು ಕೆಲವು ಸಾರೆ ನಮ್ಮ ಸ್ಮರಣಕ್ಕೆ ಒಮ್ಮೆಲೇ ಪುನಃ ಬರುತ್ತವೆ ಇದರ ಮೇಲಿಂದ ಅದೇ ವ್ಯಕ್ತಿಯೇ ಈಗೂ ಇರುವನೆಂಬದು ಸಿದ್ಧವಾಗುತ್ತದೆ. ಈ ಜೀವಿತದಲ್ಲಿಯೇ ಮನುಷ್ಯನ ಸ್ಮರಣಶಕ್ತಿಯು ಇಷ್ಟು ದುರ್ಬಲವಾಗಿರವಲ್ಲಿ, ಪರಲೋಕಗಳಲ್ಲಿ ಕೆಲವು ಕಾಲ ವಾಸಮಾಡಿ ಪುನರ್ಜನ್ಮದಿಂದ ನಮಗೆ ಹೊಸದಾದ ದೇಹವೂ ಬಾಹ್ಯವ್ಯಕ್ತಿತ್ವವೂ ಪ್ರಾಪ್ತವಾಗುವಂಥ ಮೂಲಭೂತವಾದ ಜೀವನದ

ವ್ಯತ್ಯಾಸವು ಆಗುತ್ತಿರುವಾಗ, ಮೇಲ್ಭಾಗದ ಮಾನಸಿಕ ಸ್ಮರಣಶಕ್ತಿಯು ನಷ್ಟವಾಗುವದೆಂಬದರಲ್ಲಿ ಆಶ್ಚರ್ಯವಿಲ್ಲ. ಆದರೂ, ಈ ಬದಲಾವಣೆಯಿಂದ, ಜೀವಾತ್ಮನ ಏಕತ್ವವು ನಷ್ಟವಾಗುವದಿಲ್ಲ. ಅವೇ ಸಂಸ್ಕಾರ, ಅಥವಾ ಅನುಭವ—ಬೀಜಗಳಿಂದ ಕೂಡಿದ ಕೇವಲ ಅಹಂಕಾರಯುಕ್ತ ಸಂಜ್ಞಾನವು ಉಳಿಯುವದು; ಜನ್ಮಜನ್ಮಾಂತರಗಳಲ್ಲಿಯೂ ಅದು ಒಂದೇ ಆಗಿರುವದು. ಈ ಒಂದೇ ಆದ ಜೀವಪುರುಷನ ಬಾಹ್ಯ ವ್ಯಕ್ತಿತ್ವದಲ್ಲಿ ಆದ ವ್ಯತ್ಯಾಸದಿಂದ—ಜೀವಾತ್ಮನ ಹೊರಗಿನ ಜ್ಞಾನಕ್ಕೆ ಸಾಧನಗಳಾದ ಮನಸ್ಸು, ಪ್ರಾಣ, ದೇಹಗಳು ಪುನಃ ರಚಿಸಲ್ಪಟ್ಟು ನೂತನತೆಯನ್ನು ಪಡೆಯುವದರಿಂದ ಹೊರಗಿನ ಮನಸ್ಸಿನ ಸ್ಮರಣಶಕ್ತಿಯು ನಷ್ಟವಾಗಲಿಕ್ಕೇ ಬೇಕು. ಹಿಂದಿನ ಜನ್ಮದಲ್ಲಿಯ ಮಿದುಳು ನಷ್ಟವಾಗಿ ಹೊಸ ಮಿದುಳು ಪ್ರಾಪ್ತವಾದರೂ, ಅದೇ ಹಿಂದಿನ ಅನುಭವದಲ್ಲಿಯ ಸಂಬಂಧಗಳೂ, ರೂಪಗಳೂ ಹೊಸ ಮಿದುಳಿನಲ್ಲಿರಬೇಕೆನ್ನುವದು ಶಕ್ಯವಿಲ್ಲ. ಹೊಸ ಜೀವಿತ, ಹೊಸ ಮನಸ್ಸುಗಳು ಹಿಂದಿನ ಮನಸ್ಸಿನ ಮೇಲಾದ ನಾಮರೂಪಗಳ ಅಚ್ಚನ್ನು ಲಕ್ಷ್ಯದಲ್ಲಿಡಲಾರವು. ಹಿಂದಿನ ನಾಮರೂಪಗಳ ಅನುಭವವನ್ನು ಪಡೆದ ಮನಸ್ಸು ಈಗ ಕರಗಿ ನಷ್ಟವಾಗಿರುತ್ತದೆ. ಅದರ ಸಂಗಡವೇ, ಹಳೇ ನಾಮರೂಪಗಳ ಜ್ಞಾನವೂ ನಷ್ಟವಾಗುತ್ತದೆ. ಈ ಸ್ಥೂಲ ಮನಸ್ಸಿನ ಹಿಂದಿನ ಸೂಕ್ಷ್ಮ ಮನಸ್ಸು ಇವೆಲ್ಲವನ್ನು ನೆನಪಿನಲ್ಲಿಡಬಹುದು. ಯಾಕಂದರೆ, ಅದಕ್ಕೆ ಬಾಹ್ಯ ಮನಸ್ಸಿನ ವ್ಯತ್ಯಾಸದ ಸಂಪರ್ಕವಿರುವದಿಲ್ಲ. ಆದರೆ, ಹಿಂದಿನ ಸಂಗತಿಗಳನ್ನು ಸ್ಪಷ್ಟವಾಗಿ ನೆನಪಿನಲ್ಲಿಡಬಹುದಾದ ಸೂಕ್ಷ್ಮ ಮನಸ್ಸು ಬಾಹ್ಯ ಮನಸ್ಸಿನಿಂದ ದೂರವಾಗಿಡಲ್ಪಟ್ಟಿರುತ್ತದೆ. ಈ ಪ್ರಕಾರ ಬಾಹ್ಯ ಮನಸ್ಸು ದೂರ ಉಳಿಯುವದರಿಂದ ಹಿಂದಿನ ಅನುಭವದ ಪ್ರತ್ಯಕ್ಷ ಜ್ಞಾನದ ಸಹಾಯವಿಲ್ಲದೆ ಒಂದು ಹೊಸದಾದ ವ್ಯಕ್ತಿತ್ವವನ್ನು ಜೀವನಿಗೆ ರಚಿಸಲಿಕ್ಕೆ ಅನುಕೂಲವಾಗುತ್ತದೆ. ಈ ದೇಹದಲ್ಲಿಯ ಇತರ ಸ್ಥೂಲ ಸಾಧನಗಳ ರಚನೆಯಂತೆಯೇ ಈ ಬಾಹ್ಯ ವ್ಯಕ್ತಿತ್ವವೂ ಅದರ ಹಿಂದಿನ ಸೂಕ್ಷ್ಮ ಸಾಮಗ್ರಿಯಿಂದಲೇ ತಯಾರಾಗಿರುತ್ತದೆ. ಆದರೆ ಬಾಹ್ಯ ವ್ಯಕ್ತಿಗೆ ಇದರ ಜ್ಞಾನವಿರುವದಿಲ್ಲ. ಅದಕ್ಕೆ ತಾನು ಸ್ವಯಂಭೂ

ಇದ್ದಂತೆ, ತನ್ನಿಂದ ತಾನೇ ಉತ್ಪನ್ನವಾದಂತೆ, ಅಥವಾ ಒಂದು ಅಜ್ಞಾತ ನಿಸರ್ಗದ ಕ್ರಿಯೆಯಿಂದ ಉಂಟಾದಂತೆ ಕಾಣುತ್ತದೆ.

ಹಿಂದಿನ ಜನ್ಮಗಳ ಸ್ಮರಣವು ಈ ಜನ್ಮದಲ್ಲಿ ಉಂಟಾಗಲಿಕ್ಕೆ ಇಷ್ಟು ದುಸ್ತರವಾದ ವಿಘ್ನಗಳು ಇದ್ದರೂ, ಕೆಲವು ಸಾರೆ ಹಿಂದಿನ ಜನ್ಮದಲ್ಲಿಯ ಅಲ್ಪಸ್ವಲ್ಪ ಸಂಗತಿಗಳು ಕೆಲವರಿಗೆ ಈ ಸ್ಥೂಲ ಮನಸ್ಸಿನ ಸ್ಮರಣದಲ್ಲಿ ಇಳಿಯುತ್ತವೆ. ಕೆಲವು ಬಾಲಕರ ಮನಸ್ಸಿನಲ್ಲಿ ಆಶ್ಚರ್ಯಕರವಾದ ಗತಜನ್ಮದ ನೆನಪು ಇದ್ದಕ್ಕಿದ್ದಂತೆ ಉಳಿದ ಉದಾಹರಣೆಗಳೂ ಇವೆ. ಜೀವನ ಕೆಲವು ವಿಶಿಷ್ಟ ಯೋಗಿಕ ಸ್ಥಿತಿಯಲ್ಲಿ ಒಳಗಿನ ಸೂಕ್ಷ್ಮ ಸಾಮಗ್ರಿಗಳ ಪ್ರಾಬಲ್ಯವು ಸ್ಥೂಲ ಭಾಗಗಳ ಮೇಲೆ ಆಗಿ ಹಿಂದಿನ ಬೀಜಭೂತ ಅನುಭವವು ಮೂರ್ತಸ್ವರೂಪವನ್ನು ಧಾರಣಮಾಡುತ್ತದೆ. ಕೆಲವೊಂದು ಅಜ್ಞಾತ ಸ್ಥಾನದಿಂದ ಹೊರಗೆ ಉಕ್ಕೇರುವಂತೆ ಗತಸಂಗತಿಗಳು ಹೊರ-ಚಿಮ್ಮುತ್ತವೆ. ಪುನರ್ಜನ್ಮದಲ್ಲಿ ಹೊಸ ವ್ಯಕ್ತಿತ್ವವನ್ನು ಪಡೆದ ಸ್ಥೂಲ ಮನಸ್ಸು ಮತ್ತು ದೇಹ ಇವುಗಳ ಉತ್ಪತ್ತಿಗೆ ಕಾರಣವಾದ ಹಿಂದಿನ ಸೂಕ್ಷ್ಮ ವ್ಯಕ್ತಿತ್ವದ ರಚನಾಸಾಮಗ್ರಿ ಮತ್ತು ಶಕ್ತಿ ಇವುಗಳ ಗ್ರಹಿಕೆಯು ತುಸು ಪ್ರಯತ್ನದಿಂದ ಎಲ್ಲರಿಗೂ ಸಾಧ್ಯವಾಗಬಹುದು. ಆದರೆ, ಹಿಂದಿನ ಸಂಗತಿಗಳ ಸ್ಪಷ್ಟವಾದ ವಿವರಗಳು ಜ್ಞಾಪಕಕ್ಕೆ ಬರುವದು ಹೆಚ್ಚು ಕಠಿಣವಾಗಿದೆ. ಇವುಗಳಲ್ಲಿಯು ಕೆಲವು ಸಂಗತಿಗಳು ತಾವಾಗಿಯೇ ಹಲವು ಸಾರೆ ತಿಳಿದುಬರುತ್ತವೆ. ನಮ್ಮ ಹಿಂದಿನ ಸೂಕ್ಷ್ಮ ಭಾಗಗಳನ್ನು, ಏಕಾಗ್ರ ಧ್ಯಾನದಿಂದ ಗ್ರಹಿಸಿ, ಅದರಲ್ಲಿಯ ಸಂಜ್ಞಾನ ಶಕ್ತಿಯನ್ನು ಜಾಗ್ರತಗೊಳಿಸಿ, ಹಿಂದಿನ ಸಂಗತಿಗಳನ್ನು ನಾವು ತಿಳಿದುಕೊಳ್ಳಬಹುದು. ಆದರೆ, ಈ ಪ್ರಕಾರದ ಗತಜನ್ಮಗಳ ಸಣ್ಣಪುಟ್ಟ ಸಂಗತಿಗಳ ಜ್ಞಾನವು ಅಥವಾ ಸ್ಮರಣವು, ನಿಸರ್ಗದ ಉತ್ಕ್ರಾಂತಿಯ ಉದ್ದೇಶ ಸಾಧನೆಗೆ ಮಹತ್ವವಾದದ್ದಿರುವದಿಲ್ಲ. ಆದ್ದರಿಂದ, ಸೃಷ್ಟಿಯ ರಚನೆಯಲ್ಲಿ ಪುನರ್ಜನ್ಮ ತಾಳಿದ ಜೀವನಿಗೆ ಹಿಂದಿನ ಜನ್ಮಗಳ ಸ್ಮರಣೆ ಇರುವ ಬಗ್ಗೆ ವ್ಯವಸ್ಥೆ ಆಗಿರುವದಿಲ್ಲ. ಆದರೆ, ಕ್ವಚಿತ್ತಾಗಿ ನಿಸರ್ಗತಃ ಇದು ಉಂಟಾದದ್ದು ಕಂಡುಬರಬಹುದು. ಅಥವಾ ಈ ಸ್ಮರಣವನ್ನು ವಿಶಿಷ್ಟ ಯೋಗಿಕ ಪ್ರಯತ್ನದಿಂದ ಜಾಗ್ರತಗೊಳಿಸಬಹುದು. ನಿಸರ್ಗದ ಹೆಚ್ಚಿನ ಲಕ್ಷ್ಯವು

ಜೀವನ ಆಧ್ಯಾತ್ಮಿಕ ಉನ್ನತಿಯ ಕಡೆಗೇ ಇರುತ್ತದೆ. ಆದ್ದರಿಂದ ಅದು ಭೂತಕಾಲದ ಜ್ಞಾನವನ್ನು ಮರೆಗಿಟ್ಟು—ಪಡದೆಯ ಹಿಂದೆ ಮುಚ್ಚಿಟ್ಟು—ವರ್ತಮಾನ ಮತ್ತು ಭವಿಷ್ಯ ಜೀವನಗಳ ರಚನೆಗೆ ಅವಶ್ಯವಾದ ಒಂದು ಗುಪ್ತನಿಧಿಯಂತೆ ಅದರ ಉಪಯೋಗವನ್ನು ಮಾಡಿಕೊಳ್ಳುತ್ತದೆ.

ಈ ಪ್ರಕಾರ ಈ ಸ್ಥೂಲ ದೇಹದಿಂದ ಹಿಡಿದು ಮನೋಮಯ ದೇಹದ ವರೆಗಿನ ಎಲ್ಲ ವ್ಯಕ್ತಿತ್ವವು ಪ್ರತಿಜನ್ಮದಲ್ಲಿ ಬದಲಾಗುತ್ತಿದ್ದರೂ—ವಿಕಾರವನ್ನು ಹೊಂದುತ್ತಿದ್ದರೂ—ಇವೆಲ್ಲವುಗಳಿಗೂ ಹಿಂದೆ, ಅವಿಕಾರಿಯಾದ, ಅವಿನಾಶಿಯಾದ ಪುರುಷನ ವ್ಯಕ್ತಿತ್ವವು ಅಚ್ಚಳಿಯದೇ ಎಲ್ಲ ಜನ್ಮಗಳಿಗೂ ಸರಿಸಮಾನವಾಗಿ ಇದ್ದೇ ಇರುತ್ತದೆಂಬ ಸಂಗತಿಯು ಸ್ಪಷ್ಟವಾಯಿತು. ಏವಂಗುಣ ವಿಶಿಷ್ಟಪುರುಷ ಮತ್ತು ಪುರುಷತ್ವವನ್ನು ನಾವು ಒಪ್ಪಿದರೆ, ಈ ಕಲ್ಪನೆಯಿಂದ ನಮ್ಮ ಜೀವಾತ್ಮನ ಅಮರತ್ವದ ಬಗ್ಗೆ ಇದ್ದ ಈಗಿನ ವಿಚಾರವನ್ನು ಬದಲಿಸಬೇಕಾಗುವದು. ಯಾಕಂದರೆ, ನಾವು ಜೀವನ ನಾಶಹೊಂದದ ಅಸ್ತಿತ್ವವನ್ನು ಪ್ರತಿಪಾದಿಸುವಾಗ, ನಮ್ಮ ಈಗಿನ ಬಾಹ್ಯ ವ್ಯಕ್ತಿತ್ವಕ್ಕೇ ಸನಾತನವಾದ, ತ್ರಿಕಾಲದಲ್ಲಿಯೂ ಬದಲಾಗದ, ಸ್ಥಿರವಾದ ಅಸ್ತಿತ್ವವನ್ನು ಅಂಟಿಸುತ್ತಿದ್ದೇವೆ. ಆದರೆ ನಾವು ಈಗ ಯಾವ ವ್ಯಕ್ತಿತ್ವಕ್ಕೆ ಈ ಪ್ರಕಾರದ ಹಕ್ಕನ್ನು ಕೇಳುತ್ತಿರುವೆವೋ ಆ ವ್ಯಕ್ತಿತ್ವವು ನಮ್ಮ ಅಹಂಕಾರದ ಒಂದು ತಾತ್ಪೂರ್ತಿಕವಾದ ವಿಕಾರೀ ರೂಪವಾಗಿದ್ದು, ನಿಸರ್ಗವು ಅದನ್ನು ಚಿರಕಾಲ ಕಾದಿಡಲಿಕ್ಕೆ ಅಯೋಗ್ಯವಾದ ಹೊರಗಿನ ಒಂದು ವೇಷವೆಂದು ತಿಳಿಯುತ್ತದೆ ಕಾರಣ, ಈ ಬಾಹ್ಯ ವ್ಯಕ್ತಿತ್ವಕ್ಕೆ ಈ ಪ್ರಕಾರದ ಅಯೋಗ್ಯವಾದ ಹಕ್ಕು ಎಂದಿಗೂ ಸಿಗಲಾರದು. ಈ ಹೊರಗಿನ ವ್ಯಕ್ತಿತ್ವವು ಅಥವಾ “ ನಾನು ” ಕಾಲಕಾಲಕ್ಕೆ ಯೋಗ್ಯವಾದ ಬದಲಾವಣೆಯನ್ನು ಸ್ವೀಕರಿಸಲಿಕ್ಕೆ ಸಮ್ಮತಿಯನ್ನಿತ್ತರೆ ಮಾತ್ರ, ಅದು ತನ್ನ ಈಗಿನ ಸಂಕುಚಿತವಾದ “ ತನ್ನತನ ” ವನ್ನು ತ್ರಿಕಾಲದಲ್ಲಿಯೂ ಇಟ್ಟುಕೊಳ್ಳದೆ, ಮೇಲಿಂದ ಮೇಲೆ ಬದಲಾವಣೆಯನ್ನು ಹೊಂದಿ, ಹೆಚ್ಚು ದೊಡ್ಡದಾಗಿ, ಹೆಚ್ಚು ಉನ್ನತವಾಗಿ, ಹೆಚ್ಚು ಪ್ರಕಾಶಮಯವಾಗಿ, ತನ್ನ ಆಂತರಿಕ ಸೌಂದರ್ಯದ ಆದರ್ಶವನ್ನಿಟ್ಟುಕೊಂಡು ತನ್ನ ಒಳಗಿನ ಗುಪ್ತ ಆತ್ಮನ ಕಡೆಗೆ ಯಾವಾಗಲೂ ನಡೆಯುತ್ತಿದ್ದರೆ ಮಾತ್ರ, ಈ ಅಹಂಕಾರಕ್ಕೆ

ಸನಾತನಪದವು ಪ್ರಾಪ್ತವಾದೀತು. ಜೀವನದಲ್ಲಿ ಗುಪ್ತವಾಗಿರುವ ಈ ನಮ್ಮ ಆತ್ಮಸ್ಥಿತಿಯೇ ಅವಿನಾಶಿಯಾದದ್ದು. ಯಾಕಂದರೆ, ಅದು ಎಂದಿಗೂ ಜನ್ಮಮರಣಕ್ಕೆ ಒಳಗಾಗಿರದ, ಸನಾತನ ತತ್ವವಾಗಿರುತ್ತದೆ. ನಮ್ಮಲ್ಲಿಯ ಸಚ್ಚಿದಂಶವೇ, ಆತ್ಮನ ಸಂಜ್ಞಾನ ಶಕ್ತಿಯೇ ಅರ್ಥಾತ್ ಈ ಸನಾತನ ಪುರುಷನೇ ಸತ್ಯವಾಗಿ ನಾವಾಗಿದ್ದು, ಈ ವರ್ತಮಾನದಲ್ಲಿ ಕಂಡುಬರುವ "ನಾನು" ಕೇವಲ ನನ್ನ ತಾತ್ವಿಕ ರೂಪದ ಹೊರಗಿನ ಸ್ವರೂಪವಾಗಿರುತ್ತದೆ. ಒಳಗಿನ ಸನಾತನ ಪುರುಷನ ಬದಲಾಗುತ್ತಿರುವ ಹೊರಗಿನ ಸ್ವರೂಪವಾಗಿರುತ್ತದೆ. ಈಗ ಕಂಡುಬರುವ "ನಾನು" ನಮ್ಮ ಉತ್ಕ್ರಾಂತಿ ಮಾರ್ಗವಲ್ಲಿಯ ಪ್ರಯಾಣದಲ್ಲಿ ಒಂದು ಹೆಜ್ಜೆಯಾಗಿದೆ. ಈ ಸ್ಥೂಲ ಅಹಂಕಾರಯುಕ್ತ "ನಾನು' ಮುಂದಿನ ಮಾರ್ಗವನ್ನು ಕ್ರಮಿಸಿ ಸಚ್ಚಿದಾನಂದ ರೂಪವಾದ ತನ್ನ ಸತ್ಯಸ್ವರೂಪದ ಕಡೆಗೆ ನಡೆದು ಹೋಗುತ್ತಿದ್ದರೆ ಮಾತ್ರ ಈ ಅಹಂಕಾರದ ಯೋಗ್ಯ ಉಪಯೋಗವಾದಂತಾಗುವದು. ಈ ಒಳಗಿನ ಪುರುಷನೇ ಮರಣದ ನಂತರ ಇರತಕ್ಕವನು. ಅವನೇ ನಮ್ಮ ಜನ್ಮದ ಮೊದಲೂ ಇದ್ದವನು. ಅವನ ಈ ತ್ರಿಕಾಲಾಬಾಧಿತ ರೂಪವೇ ಕಾಲದಲ್ಲಿಳಿದು, ಭೂತ, ವರ್ತಮಾನ ಮತ್ತು ಭವಿಷ್ಯತ್ಕಾಲಗಳಲ್ಲಿ ಉಳಿಯುತಕ್ಕದ್ದು.

ಇದೇ ಪ್ರಕಾರದ ಮರಣರಹಿತ ಸ್ಥಿತಿಯು ನಮ್ಮ ಮನಸ್ಸು, ಪ್ರಾಣ ಮತ್ತು ದೇಹಗಳಿಗೂ ಇರಬೇಕೆಂದು ನಾವು ಬಯಸುತ್ತೇವೆ. ಮರಣೋತ್ತರ ದೇಹದ ಪುನರುತ್ಥಾನ ಕಲ್ಪನೆಯು ಇದೇ ಮಾತನ್ನು ಸಿದ್ಧಮಾಡುತ್ತದೆ. ಅಮೃತತತ್ವವನ್ನು ಸಿದ್ಧಮಾಡುವ ಮಂತ್ರೌಷಧಿಗಳನ್ನೂ, ಕಾಯಾಕಲ್ಪಗಳನ್ನೂ ಅಥವಾ ಇತರ ರಾಸಾಯನಿಕ (ಕಿಮಯಾ) ಪ್ರಯೋಗಗಳನ್ನೂ ಶೋಧಿಸುವ ನಮ್ಮ ಅನಾದಿಕಾಲದಿಂದ ನಡೆದ ಪ್ರಯತ್ನದ ಬುಡವಲ್ಲಿ ನಮ್ಮ ಸ್ಥೂಲ ದೇಹವನ್ನು ಮರಣದಿಂದ ಮುಕ್ತಮಾಡಬೇಕೆಂಬ ನಮ್ಮ ಹಂಬಲವೇ ಇರುತ್ತದೆ. ಆದರೆ ಮನಸ್ಸು, ಪ್ರಾಣ ಮತ್ತು ದೇಹಗಳು ನಮ್ಮ ಆತ್ಮನ ದೈವೀ ಶಕ್ತಿಯನ್ನೂ, ಅಮೃತತತ್ವವನ್ನೂ ಧಾರಣಮಾಡಲಿಕ್ಕೆ ಸಮರ್ಥವಾದರೆ ಮಾತ್ರ, ಈ ನಮ್ಮ ಆಕಾಂಕ್ಷೆಯು ಕದಾಚಿತ್ ಸಾಧ್ಯವಾಗಬಹುದು. ಒಳಗಿನ ಮಾನಸಿಕ ಪುರುಷನ (ಆತ್ಮತತ್ವದ) ಪ್ರತಿನಿಧಿ

ಯಾದ ನಮ್ಮ ಹೊರಗಿನ್ನ ಮಾನಸಿಕ ವ್ಯಕ್ತಿತ್ವವನ್ನು ಚಿರಕಾಲ ಬಾಳುವಂತೆ ಮಾಡುವ ಕೆಲವು ಉಪಾಯುಗಳಿವೆ. ನಮ್ಮ ಹೊರಗಿನ ಮಾನಸಿಕ ಜೀವಿತದ ಶಕ್ತಿಯು ಒಳಗಿನ ಮಾನಸಿಕ ಜೀವನದಲ್ಲಿ ಸಮರಸ ಹೊಂದಿ, ಮಾನಸಿಕ ಪುರುಷನಲ್ಲಿ ಏಕತ್ವವನ್ನುಂಟುಮಾಡಿಕೊಂಡು, ಹೊರಭಾಗದ ಸ್ಥೂಲ ಮನಸ್ಸು ತನ್ನ ವ್ಯಕ್ತಿತ್ವವನ್ನು ಕಾಯ್ದುಕೊಳ್ಳುವಷ್ಟು ಬೆಳೆದರೆ, ಈ ಹೊರಭಾಗವು ಅನಾದಿ ತತ್ವದ ಉತ್ಕ್ರಾಂತಿಯ ಕ್ರಿಯೆಗೆ ಬಳುಕುವಷ್ಟು ಮೆತ್ತಗಾದರೆ, ತನ್ನಲ್ಲಿಯ ಕಠಿಣವಾದ ಅಹಂಕಾರರೂಪೀ ಅಲ್ಪ ವ್ಯಕ್ತಿತ್ವ-ವನ್ನು ವಿಶ್ವಾತ್ಮನಲ್ಲಿ ಕರಗಿಸುವಷ್ಟು ದ್ರವರೂಪ ಮಾಡಿದರೆ, ಮತ್ತು ಆತ್ಮನಿಗೆ ತನ್ನ ಉತ್ಕ್ರಾಂತಿಯನ್ನು ಸಾಧಿಸಲಿಕ್ಕೆ, ಮನಸ್ಸಿನ ಹಳೇ ರೂಪವನ್ನು ವಿಸರ್ಜಿಸಿ, ಹೊಸರೂಪವನ್ನು ಧಾರಣಮಾಡುವ ಅವಶ್ಯಕತೆಯೇ ಉಂಟಾಗದಂತೆ ಮಾಡಿದರೆ ಮಾತ್ರ ಈ ಸ್ಥಿತಿಯು—ಅಮರತ್ವವು—ಕೆಲಮಟ್ಟಿಗೆ ಸಾಧ್ಯವಾಗಬಹುದು. ಅದೇ ಪ್ರಕಾರದ ಪ್ರಾಣಮಯ ವ್ಯಕ್ತಿತ್ವವು ಮೀಲನವು, ಸೂಕ್ಷ್ಮವಾದ ಪುರುಷನ ಪ್ರಾಣಶಕ್ತಿಯಲ್ಲಿ ಏಕತ್ವತೆಯನ್ನು ಪಡೆದು, ಅದೇ ಕಾಲಕ್ಕೆ ಅದರ ಬಾಹ್ಯ ಪ್ರಕಟನೆಯು ಸಾಧ್ಯವಾದರೆ, ನಮ್ಮಲ್ಲಿಯ ಪ್ರಾಣಮಯ ಭಾಗವನ್ನೂ ಮರಣಕ್ಕೆ ನಿಲುಕದಂತೆ ಮಾಡಬಹುದು. ಯಾಕಂದರೆ, ಆಂತರಿಕ ಪ್ರಾಣಪುರುಷನ ಪ್ರತಿನಿಧಿಯೇ ಸ್ಥೂಲಪ್ರಾಣವಾಗಿರುತ್ತದೆ. ಈ ಸ್ಥಿತಿಯಲ್ಲಿ—ಸ್ಥೂಲ ಮತ್ತು ಸೂಕ್ಷ್ಮ ಪ್ರಾಣಗಳ ಮೀಲನವಾದ ಕಾಲಕ್ಕೆ—ಒಳಗಿನ ಪುರುಷ ಮತ್ತು ಹೊರಗಿನ ಮಾನುಷ ಜೀವನ ಇವುಗಳ ಮಧ್ಯದಲ್ಲಿರುವ ಗೋಡೆಯು ಒಡೆದು ಸ್ಥಿರಸ್ವರೂಪದ ಮಾನಸಿಕ ಮತ್ತು ಪ್ರಾಣ ಶಕ್ತಿಗಳಿಂದ ಕೂಡಿದ ಪುರುಷನೇ ಹೊರಗಿನ ಜೀವನದ ಒಡೆಯನಾಗುವನು. ಆಗ ನಮ್ಮ ಮನಸ್ಸು ಮತ್ತು ಪ್ರಾಣಗಳ ಸ್ವರೂಪವು ಅಮರನಾದ ಆತ್ಮನ ಸ್ವರೂಪದ್ದೇ ಆಗುವದು. ಮತ್ತು ಈಗಿನಂತೆ ಒಂದರಹಿಂದೊಂದು ರಚಿಸಲ್ಪಟ್ಟ ಕೇವಲ ಬೀಜಭೂತ ಸಂಸ್ಕಾರಗಳ ದಾವಣಿಯಿಂದ ಕಟ್ಟಲ್ಪಟ್ಟ ಹಲವು ರೂಪಗಳಾ-ಗಲಾರವು. ಒಂದು ಜನ್ಮದಿಂದ ಮತ್ತೊಂದು ಜನ್ಮ ತಾಳಬೇಕಾದರೆ, ಮರಣದಿಂದ ಈಗ ನಾಶವಾಗುವಂತೆ, ಆ ಸ್ಥಿತಿಯಲ್ಲಿ ನಮ್ಮ ಮನೋಮಯ ಮತ್ತು ಪ್ರಾಣಮಯ ವ್ಯಕ್ತಿತ್ವವು ನಷ್ಟವಾಗದೆ ಉಳಿಯುವದು. ಈ ಅರ್ಥ

ದಿಂದ ಮನುಷ್ಯನ ಬಾಹ್ಯ ವ್ಯಕ್ತಿತ್ವಕ್ಕೆ ಅಮರತ್ವವು ಪ್ರಾಪ್ತವಾಗುವದು. ಮರಣದ ಆಘಾತದಿಂದ ನಷ್ಟವಾಗದೆ, ಅದೇ ವ್ಯಕ್ತಿತ್ವದ ಜ್ಞಾನವು ಸತತ ಉಳಿಯುವದು. ಆದ್ದರಿಂದ ಈ ಪ್ರಕಾರದ ಸ್ಥಿತಿಯು, ಅಜ್ಞಾನ ಮತ್ತು ಅದರ ಪ್ರತೀಕವಾದ ಭೂತಸೃಷ್ಟಿಯ ಬಂಧನ ಇವುಗಳ ಮೇಲೆ ಜೀವನು ಸಂಪಾದಿಸಿದ ಒಂದು ಅಪಾರ ವಿಜಯವೆಂದೇ ಅನ್ನಬೇಕು.

ಆದರೆ, ಈ ಪ್ರಕಾರದ ಪ್ರಾಣ ಮತ್ತು ಮನಸ್ಸುಗಳ ಇರುವಿಕೆಯು ಕೇವಲ ಸೂಕ್ಷ್ಮ ಶರೀರದಲ್ಲಿಯೇ ಶಕ್ಯವಿದೆ. ಜೀವನಿಗೆ ಇಂಥ ಸ್ಥಿತಿಯಲ್ಲಿ ಕೂಡ ತನ್ನ ಸ್ಥೂಲ ಶರೀರವನ್ನು ತ್ಯಜಿಸಿ ಪರಲೋಕಗಳಿಗೆ ಹೋಗ ಬೇಕಾಗುವದು. ಮತ್ತು ಈ ಲೋಕಕ್ಕೆ ತಿರುಗಿ ಬರುವಾಗ ಮತ್ತೊಂದು ದೇಹವನ್ನು ಧಾರಣ ಮಾಡಬೇಕಾಗುವದು. ಆದರೆ, ಜಾಗ್ರತನಾದ ಮಾನಸಿಕ ಮತ್ತು ಪ್ರಾಣಮಯ ಪುರುಷನು, ತನ್ನ ಮನೋಮಯ ಮತ್ತು ಪ್ರಾಣಮಯ ಕೋಶಗಳನ್ನು ಬದಲಿಸದೆ, ಅವೇ ಕೋಶಗಳನ್ನು ಧರಿಸಿ ಹೊಸ ಜನ್ಮಕ್ಕೆ ಬರುವನು. ಆದ್ದರಿಂದ ಈ ವಿಶಿಷ್ಟ ಜೀವನಲ್ಲಿ ಹಿಂದಿನ ಜನ್ಮಗಳ ಅವ್ಯಾಹತವಾದ, ಒಂದೇ ವ್ಯಕ್ತಿತ್ವದ ಜ್ಞಾನವೂ, ಆ ಜನ್ಮಗಳ ಸ್ಮರಣವೂ ಇದ್ದದ್ದು ಕಂಡುಬರುತ್ತದೆ. ಭೂತಕಾಲದಲ್ಲಿ ರಚಿತ ವಾದ ಜೀವಿತವೇ ವರ್ತಮಾನದಲ್ಲಿದ್ದು ಇದೇ ಭವಿಷ್ಯತ್ಕಾಲದಲ್ಲಿಯೂ ಉಳಿಯುವದು. ಆದರೆ, ಈ ಸ್ಥೂಲ ಅಸ್ತಿತ್ವಕ್ಕೆ ಕಾರಣವಾದ ಸ್ಥೂಲ ಶರೀರವು ಮಾತ್ರ ಈ ಸ್ಥಿತಿಯಲ್ಲಿಯೂ ಇರಲಾರದು. ಈ ಪಂಚಭೂತಾತ್ಮಕ ದೇಹದಲ್ಲಿಯ ವಿನಾಶಿತ್ವವನ್ನು ಅಥವಾ ವಿಧ್ವಂಸ ಕಾಲಕ್ಕೆ ಆಗುತ್ತಿರುವ ಕಣಗಳ ವಿಯೋಗವನ್ನು ಯಾವದಾದರೊಂದು ಉಪಾಯದಿಂದ ನಿಲ್ಲಿಸು ವದು ಶಕ್ಯವಿದ್ದರೆ ಮಾತ್ರ ಮತ್ತು ಅದೇ ಕಾಲಕ್ಕೆ ಈ ಸ್ಥೂಲದೇಹದ ರಚನೆ ಮತ್ತು ಕಾರ್ಯ ಇವುಗಳಲ್ಲಿ ಒಳಗಿನ ಪುರುಷನ ಉತ್ಕ್ರಾಂತಿಯಲ್ಲಿಯ ಪ್ರತಿಯೊಂದು ಬದಲಾವಣೆಗೆ ಅನುಗುಣವಾದ ವ್ಯತ್ಯಾಸವು ಉಂಟಾಗು ವಷ್ಟು ಮೃದುತನವು ಇದ್ದರೆ ಮಾತ್ರ, ಅದು ಚಿರಕಾಲ ಬಾಳಬಹುದು. ಭೌತಿಕ ಅಥವಾ ಆಧ್ಯಾತ್ಮಿಕ ಶಾಸ್ತ್ರಜ್ಞರು ಇಂಥದೊಂದು ಉಪಾಯವನ್ನು ಅಥವಾ ಸ್ಥಿತಿಯನ್ನು ಕಂಡುಹಿಡಿದರೂ, ಒಳಗಿನ ಬೆಳವಣಿಗೆಯನು ವ್ಯಕ್ತಗೊಳಿಸುವಷ್ಟು ಈ ದೇಹದಲ್ಲಿ ಸಾಮರ್ಥ್ಯವಿಲ್ಲದಿದ್ದರೆ, ಈ ದೇಹ

ವನ್ನು ಬಿಟ್ಟು ಮತ್ತೊಂದು ಅನುಕೂಲವಾದ ದೇಹಧಾರಣೆಯಾಗಿ ಮತ್ತೊಂದು ಜನ್ಮವನ್ನು ಜೀವನು ತಾಳಬಹುದು. ಈ ಸ್ಥೂಲದೇಹದ ನಾಶಕ್ಕೆ ಕೇವಲ ಭೌತಿಕ ವಿನಾಶಿತ್ವವಿಷ್ಟೇ ಕಾರಣವಿರದೆ, ಜೀವನ ಉತ್ಕ್ರಾಂತಿಗೆ ಅವಶ್ಯವಿರುವ ವ್ಯಕ್ತಿತ್ವದಲ್ಲಿಯ ಬದಲಾವಣೆಯೂ ಕಾರಣ ವಾಗಿದೆ ಜೀವನ ಆತ್ಮೀಯ ಪ್ರಕಟನೆಯು, ಅರ್ಥಾತ್ ಉತ್ಕ್ರಾಂತಿಯ ಗತಿಯು ದೀರ್ಘಕಾಲದ ಓಘವನ್ನು ಅನುಸರಿಸುವಷ್ಟು, ತನ್ನ ಗುಪ್ತವಾದ ಆಧ್ಯಾತ್ಮಿಕ ಶಕ್ತಿಯ ಬಹುಕಾಲದ ಅರಳುವಿಕೆಯ ಕೃತ್ಯವು ಸಫಲವಾಗುವ ವರೆಗೆ ಬಾಳುವಷ್ಟು, ಅಥವಾ ಈ ಸ್ಥೂಲ ಮನಸ್ಸಿನ ಮಾರ್ಪಾಟು ದೈವೀ ಮನಸ್ಸಿನಲ್ಲಿ ಅಥವಾ ಆತ್ಮಶಕ್ತಿಯಲ್ಲಿ ಆಗುವವರೆಗಿನ ದೀರ್ಘ ಪ್ರವಾಸವನ್ನು ಸಹನ ಮಾಡುವಷ್ಟು, ಸಾಮರ್ಥ್ಯವು ಈ ಸ್ಥೂಲದೇಹಕ್ಕೆ ಬಂದ ಹೊರತು, ಅದು ತನ್ನ ನಾಶವನ್ನು ತಪ್ಪಿಸಿಕೊಳ್ಳಲಾರದು. ಮಾನಸಿಕ. ಪ್ರಾಣಮಯ ಮತ್ತು ಪಂಚಭೂತಾತ್ಮಕ— ಈ ಮೂರೂ ಪ್ರಕಾರದ ವ್ಯಕ್ತಿತ್ವದ ಅಮರತ್ವವು ಪುನರ್ಜನ್ಮದ ಉದ್ದೇಶ ಸಾಧನೆಯ ಕೊನೆಯೆಂದೇ ಅನ್ನ ಬೇಕು; ಈ ಭೌತಿಕ ಜಗತ್ತಿನಲ್ಲಿಯೇ ಅಜ್ಞಾನ ಮತ್ತು ಅಚೇತನತ್ವದ ಮೇಲೆ ಜೀವಾತ್ಮನು ಪಡೆದ ಸಂಪೂರ್ಣ ವಿಜಯವೇ ಇದು ಆಗಿರುವದು. ಆದಾಗ್ಯೂ, ನಿಜವಾದ ಅಮರತ್ವವು ಆತ್ಮನ ಸನಾತನತ್ವದಲ್ಲಿಯೇ ಇರುತ್ತದೆ. ಈ ಭೌತಿಕ ಅಮರತ್ವವು ಈ ದೇಹದ ಕ್ಷಣಭಂಗುರತೆಯ ದೃಷ್ಟಿಯಿಂದ, ಚಿರಕಾಲವಿರುವ ಕಾರಣ, ಈ ದೇಹಕ್ಕೆ ಇಚ್ಛಾಮರಣವು— ಇಚ್ಛೆಯ ಪ್ರಕಾರ ಈ ಸ್ಥೂಲ ದೇಹವನ್ನು ಬಿಡುವ ಶಕ್ತಿಯು—ಪ್ರಾಪ್ತ ವಾಗುವದರಿಂದ, ಅಮರವಾದ ಸನಾತನ ಸೂಕ್ಷ್ಮ ಆತ್ಮತ್ವವು ಪಂಚಭೂತ ಗಳ ಮೇಲೆ, ಅವುಗಳ ಕ್ಷಣಭಂಗುರತೆಯ ಮೇಲೆ ಪಡೆದ ವಿಜಯದ ಇದೊಂದು ಲೌಕಿಕ ಚಿನ್ಹವಾಗಿರುತ್ತದೆ.

— ಓಂ ತತ್ಸತ್ —

## ಸಮಾಪ್ತಂ

# ಶುದ್ಧಿ ಪತ್ರಿಕೆ



| ಪಾನು | ಸಾಲು | ಅಶುದ್ಧ | ಶುದ್ಧ |
|---|---|---|---|
| ೬ | ೯ | ಬೇಹದ | ದೇಶದ |
| ೧೪ | ೧ | ಸ್ವಧರ್ದ್ಮದ | ಸ್ವಧರ್ಮದ |
| ೧೪ | ೧೧ | ಮಣಗಾಣಬಹು | ಮನಗಾಣಬಹುದು |
| ೧೪ | ೨೩ | ಉಹಾಪ್ಪೋಹ | ಊಹಾಪ್ಪೋಹ |
| ೨೮ | ೧೦ | ಅನುಭಾವಿಯುರೂ | ಅನುಭಾವಿನಿಯರೂ |
| ೩೯ | ೧೯ | ಜೀವವು | ಜೀವನವು |
| ೪೨ | ೨ | ತಿಳಿದುವವೆಂದೂ | ತಿಳಿಯಿತೆಂದೂ |
| ೫೯ | ೨೭ | ಕಣುತ್ತಿರಲಿಲ್ಲ | ಕಾರುತ್ತಿರಲಿಲ್ಲ |
| ೬೯ | ೭ | ಬರೆದ | ಬರದ |
| ೭೨ | ೨೫ | ವ್ಯವಹಾದಲ್ಲಿ | ವ್ಯವಹಾರದಲ್ಲಿ |
| ೮೨ | ೭ | ಪರಬ್ರಹ | ಪರಬ್ರಹ್ಮ |
| ೯೩ | ೬ | ಹೊಂದ್ಮ | ಹೊಂದ |
| ೯೩ | ೭ | ಜನ | ಜನ್ಮ |
| ೧೧೩ | ೧೧ | ಪರಬ್ರಹ್ಮನಾದ | ಪರಬ್ರಹ್ಮದ |
| ೧೧೪ | ೨ | ಅಗಲಾರದು. | ಆಗಲಾರದು. |
| ೧೨೯ | ೧೫ | ಜ್ಞಾನಕವಚವಾಗಿ | ಜಾನಕವಚವಾಗಿವೆ |
| ೧೩೧ | ೧೫ | ವಿಶ್ವಾತ | ವಿಶ್ವಾತ್ಮ |
| ೧೩೧ | ೩ | ಬಂದು | ಒಂದು |
| ೧೩೨ | ೫ | ಚೀವನದಲ್ಲಿ | ಜೀವನದಲ್ಲಿ |
| ೧೩೯ | ೧೧ | ಮಾಡಲ್ಪಟ್ಟಿರುತ್ತವೆ | ಮಾಡಲ್ಪಟ್ಟಿರುತ್ತದೆ. |
| ೧೪೩ | ೮ | ಮಾಡಬದೋ | ಮಾಡಬಲ್ಲದೋ |
| ೧೪೮ | ೨೨ | ಸಾಮರ್ಥವು | ಸಾಮರ್ಥ್ಯವು |
| ೧೫೩ | ೧೭ | ಉತ್ಕ್ರವದ | ಉತ್ಕ್ರಮದ |

| | | | |
|---|---|---|---|
| ೧೮೨ | ೬ | ಸಮ್ಮೃತಿಯನ್ನಿತ್ನಿ | ಸಮ್ಮತಿಯನ್ನಿತ್ತಿ |
| ೧೮೭ | ೧೬ | ಶಂಗತಿಗಳು | ಸಂಗತಿಗಳು |
| ೧೯೦ | ೬ | ವ್ಯದಹಾರ | ವ್ಯವಹಾರ |
| ೧೯೨ | ೧೫ | ತಿರುತ್ತದೆ | ತೀರುತ್ತದೆ. |
| ೧೯೩ | ೧೯ | ವಧ್ಯಭೂಮಿಯಲ್ಲಿ | ಮಧ್ಯಭೂಮಿಯಲ್ಲಿ |
| ೨೦೧ | ೬ | ಬಳುಕುವಷು | ಬಳುಕುವಷ್ಟು |
| ೨೦೧ | ೧೩ | " ಮೀಲನವು " ಇದನ್ನು ಬಿಟ್ಟು ಓದಬೇಕು. | |
| ೨೦೯ | ೨೬ | ಅಥನಾ | ಅಥವಾ |

**ಸೂಚನೆ :— ಮೇಲೆ ತೋರಿಸಿದ ತಪ್ಪುಗಳು ಅರ್ಥವಾಗದ ಸ್ಥಳಗಳಲ್ಲಿ ಮಾತ್ರ ಕಾಣಿಸಲಾಗಿವೆ. ಉಳಿದ ಕೆಲವು ಮುದ್ರಣದ ದೋಷಗಳನ್ನು ವಾಚಕರು ಅರ್ಥಕ್ಕೆ ಸರಿ ಹೊಂದುವಂತೆ ಓದಬೇಕಾಗಿ ವಿನಂತಿ.**